ಸ ಕೃತ್ವ್ಯಾಂ ಶುಕಕನ್ಯಾಯಾಂ ಬ್ರಹ್ಮದತ್ತಮಜೀಜನತ್ ।
ಸ ಯೋಗೀ ಗವಿ ಭಾರ್ಯಾಯಾಂ ವಿಷ್ವಕ್ಸೇನಮಧಾತ್ಸುತಮ್
॥ ೨೫ ॥

ಜೈಗೀಷವ್ಯೋಪದೇಶೇನ ಯೋಗತಂತ್ರಂ ಚಕಾರ ಹ ।
ಉದಕ್ಸ್ವನಸ್ತತಸ್ತಸ್ಮಾದ್ಭಲ್ಲಾದೋ ಬಾರ್ಹದೀಷವಾಃ
॥ ೨೬ ॥

ಯವೀನರೋ ದ್ವಿಮೀಢಸ್ಯ ಕೃತಿಮಾಂಸ್ತತ್ಸುತಃ ಸ್ಮೃತಃ ।
ನಾಮ್ನಾ ಸತ್ಯಧೃತಿರ್ಯಸ್ಯ ದೃಢನೇಮಿಃ ಸುಪಾರ್ಶ್ವಕೃತ್
॥ ೨೭ ॥

ಸುಪಾರ್ಶ್ವಾತ್ಸುಮತಿಸ್ತಸ್ಯ ಪುತ್ರಃ ಸನ್ನತಿಮಾಂಸ್ತತಃ ।
ಕೃತಿರ್ಹಿರಣ್ಯನಾಭಾದ್ಯೋ ಯೋಗಂ ಪ್ರಾಪ್ಯ ಜಗೌ ಸ್ಮ ಷಟ್
॥ ೨೮ ॥

ಸಂಹಿತಾಃ ಪ್ರಾಚ್ಯಸಾಮ್ನಾಂ ವೈ ನೀಪೋ ಹ್ಯುಗ್ರಾಯುಧಸ್ತತಃ ।
ತಸ್ಯ ಕ್ಷೇಮ್ಯಃ ಸುವೀರೋಽಥ ಸುವೀರಸ್ಯ ರಿಪುಂಜಯಃ
॥ ೨೯ ॥

ತತೋ ಬಹುರಥೋ ನಾಮ ಪುರುಮೀಢೋಽಪ್ರಜೋಽಭವತ್ ।
ನಲಿನ್ಯಾಮಜಮೀಢಸ್ಯನೀಲಃ ಶಾಂತಿಃ ಸುತಸ್ತತಃ
॥ ೩೦ ॥

ಶಾಂತೇಃ ಸುಶಾಂತಿಸ್ತತ್ಪುತ್ರಃ ಪುರುಜೋಽರ್ಕಸ್ತತೋಽಭವತ್ ।
ಭರ್ಮ್ಯಾಶ್ವಸ್ತನಯಸ್ತಸ್ಯ ಪಂಚಾಸನ್ಮುದ್ಗಲಾದಯಃ
॥ ೩೧ ॥

ಯವೀನರೋ ಬೃಹದಿಷುಃ ಕಾಂಪಿಲ್ಯಃ ಸಂಜಯಃ ಸುತಾಃ ।
ಭರ್ಮ್ಯಾಶ್ವಃ ಪ್ರಾಹ ಪುತ್ರಾ ಮೇ ಪಂಚಾನಾಂ ರಕ್ಷಣಾಯ ಹಿ
॥ ೩೨ ॥

ವಿಷಯಾಣಾಮಲಮಿಮೇ ಇತಿ ಪಂಚಾಲಸಂಜ್ಞಿತಾಃ ।
ಮುದ್ಗಲಾದ್ಬ್ರಹ್ಮನಿರ್ವೃತ್ತಂ ಗೋತ್ರಂ ಮೌದ್ಗಲ್ಯಸಂಜ್ಞಿತಮ್
॥ ೩೩ ॥

ಮಿಥುನಂ ಮುದ್ಗಲಾದ್ಭಾರ್ಮ್ಯಾದ್ದಿವೋದಾಸಃ ಪುಮಾನಭೂತ್ ।
ಅಹಲ್ಯಾ ಕನ್ಯಕಾ ಯಸ್ಯಾಂ ಶತಾನಂದಸ್ತು ಗೌತಮಾತ್
॥ ೩೪ ॥

ತಸ್ಯ ಸತ್ಯಧೃತಿಃ ಪುತ್ರೋ ಧನುರ್ವೇದವಿಶಾರದಃ ।
ಶರದ್ವಾಂಸ್ತತ್ಸುತೋ ಯಸ್ಮಾದುರ್ವಶೀದರ್ಶನಾತ್ಕಿಲ
॥ ೩೫ ॥

ಶರಸ್ತಂಬೇಽಪತದ್ರೇತೋ ಮಿಥುನಂ ತದಭೂಚ್ಛುಭಮ್ ।
ತದ್ದೃಷ್ಟ್ವಾ ಕೃಪಯಾಗೃಹ್ಣಾಚ್ಛಂತನುರ್ಮೃಗಯಾಂ ಚರನ್ ।
ಕೃಪಃ ಕುಮಾರಃ ಕನ್ಯಾ ಚ ದ್ರೋಣಪತ್ನ್ಯಭವತ್ಕೃಪೀ
॥ ೩೬ ॥

ಮಹಾಯೋಗಿಯಾಗಿದ್ದನು. ಅವನು ತನ್ನ ಪತ್ನೀ ಸರಸ್ವತಿಯ ಗರ್ಭದಿಂದ ವಿಷ್ವಕ್ಸೇನನೆಂಬ ಪುತ್ರನನ್ನು ಪಡೆದನು. ॥ ೨೫ ॥ ಈ ವಿಷ್ವಕ್ಸೇನನೇ ಜೈಗೀಷವ್ಯರ ಉಪದೇಶದಿಂದ ಯೋಗ ಶಾಸ್ತ್ರವನ್ನು ರಚಿಸಿದನು. ವಿಷ್ವಕ್ಸೇನನ ಪುತ್ರನು ಉದಕ್‌ಸ್ವನ ಮತ್ತು ಉದಕ್‌ಸ್ವನಿಗೆ ಭಲ್ಲಾದನೆಂಬ ಪುತ್ರನಾದನು. ಇವರೆಲ್ಲರೂ ಬೃಹದಿಷುವಿನ ವಂಶಜರಾದರು. ॥ ೨೬ ॥

ದ್ವಿಮೀಢನಿಗೆ ಯವೀನರನೆಂಬ ಪುತ್ರನಿದ್ದನು. ಯವೀನರನಿಂದ ಕೃತಿಮಾನ್, ಕೃತಿಮಂತನಿಂದ ಸತ್ಯಧೃತಿ, ಸತ್ಯಧೃತಿಯಿಂದ ದೃಢನೇಮಿ, ಮತ್ತು ದೃಢನೇಮಿಗೆ ಸುಪಾರ್ಶ್ವನೆಂಬ ಪುತ್ರನಾದನು. ॥ ೨೭ ॥ ಸುಪಾರ್ಶ್ವನಿಂದ ಸುಮತಿ, ಸುಮತಿಯಿಂದ ಸನ್ನತಿಮಾನ್, ಸನ್ನತಿಮಂತನಿಂದ ಕೃತಿಯು ಹುಟ್ಟಿದನು. ಅವನು ಹಿರಣ್ಯನಾಭನಿಂದ ಯೋಗವಿದ್ಯೆಯನ್ನು ಪಡೆದಿದ್ದನು ಮತ್ತು 'ಪ್ರಾಚ್ಯಸಾಮ' ಎಂಬ ಋಚೆಗಳ ಆರು ಸಂಹಿತೆಗಳನ್ನು ಹೇಳಿದ್ದನು. ಕೃತಿಯ ಪುತ್ರ ನೀಪನೆಂಬುವನಿದ್ದನು. ನೀಪನಿಗೆ ಉಗ್ರಾಯುಧ, ಉಗ್ರಾಯುಧನಿಗೆ ಕ್ಷೇಮ್ಯ, ಕ್ಷೇಮ್ಯನಿಗೆ ಸುವೀರ, ಸುವೀರನಿಗೆ ರಿಪುಂಜಯನೆಂಬ ಪುತ್ರನಿದ್ದನು. ॥ ೨೮-೨೯ ॥ ರಿಪುಂಜಯನಿಗೆ ಬಹುರಥನೆಂಬ ಪುತ್ರನಿದ್ದನು. ದ್ವಿಮೀಢನ ತಮ್ಮ ಪುರುಮೀಢನಿಗೆ ಯಾವುದೇ ಸಂತಾನವಿರಲಿಲ್ಲ. ಅಜಮೀಢನ ಇನ್ನೊರ್ವ ಪತ್ನಿಯ ಹೆಸರು ನಲಿನಿ ಎಂದಿತ್ತು. ಅವಳ ಗರ್ಭದಿಂದ ನೀಲನ ಜನ್ಮವಾಯಿತು. ನೀಲನಿಂದ ಶಾಂತಿ, ಶಾಂತಿಗೆ ಸುಶಾಂತಿ, ಸುಶಾಂತಿಗೆ ಪುರುಜ, ಪುರುಜನಿಗೆ ಅರ್ಕ, ಅರ್ಕನಿಗೆ ಭರ್ಮ್ಯಾಶ್ವ, ಭರ್ಮ್ಯಾಶ್ವನಿಗೆ – ಮುದ್ಗಲ, ಯವೀನರ, ಬೃಹದಿಷು, ಕಾಂಪಿಲ್ಯ ಮತ್ತು ಸಂಜಯ ಎಂಬ ಐದು ಮಂದಿ ಮಕ್ಕಳಾದರು. ಭರ್ಮ್ಯಾಶ್ವನು ಹೇಳಿದನು – ಈ ನನ್ನ ಐವರು ಪುತ್ರರು (ಪಂಚ) ದೇಶಗಳಿಗೆ ಶಾಸನ ಮಾಡುವುದರಲ್ಲಿ ಸಮರ್ಥರಾಗಿರುವವರು (ಪಂಚ ಅಲಮ್). ಇದರಿಂದ ಇವರು 'ಪಾಂಚಾಲ'ರೆಂದು ಪ್ರಸಿದ್ಧರಾದರು. ಇವರಲ್ಲಿ ಮುದ್ಗಲನಿಂದ 'ಮೌದ್ಗಲ್ಯ'ವೆಂಬ ಬ್ರಾಹ್ಮಣಗೋತ್ರವು ಪ್ರವೃತ್ತವಾಯಿತು. ॥ ೩೦-೩೩ ॥

ಭರ್ಮ್ಯಾಶ್ವನ ಪುತ್ರ ಮುದ್ಗಲನಿಗೆ ಅವಳೀ ಮಕ್ಕಳು ಹುಟ್ಟಿದರು. ಅವರಲ್ಲಿ ಪುತ್ರನ ಹೆಸರು ದಿವೋದಾಸ ಮತ್ತು ಪುತ್ರಿಯ ಹೆಸರು ಅಹಲ್ಯೆ ಎಂದಿತ್ತು. ಅಹಲ್ಯೆಯ ವಿವಾಹವು ಮಹರ್ಷಿ ಗೌತಮರೊಂದಿಗೆ ನಡೆಯಿತು. ಗೌತಮನಿಗೆ ಶತಾನಂದನೆಂಬ ಮಗನು ಹುಟ್ಟಿದನು. ॥ ೩೪ ॥ ಶತಾನಂದನ ಪುತ್ರ ಸತ್ಯಧೃತಿಯಾಗಿದ್ದನು. ಅವನು ಧನುರ್ವಿದ್ಯೆಯಲ್ಲಿ ಅತ್ಯಂತ ನಿಪುಣನಾಗಿದ್ದನು. ಸತ್ಯಧೃತಿಯ ಪುತ್ರನ ಹೆಸರು ಶರದ್ವಾನ್. ಒಂದು ದಿನ ಊರ್ವಶಿಯನ್ನು ಕಂಡು ಶರದ್ವಂತನ ವೀರ್ಯವು ಸ್ಖಲನವಾಗಿ ಜೊಂಡುಹುಲ್ಲಿನ ಮೇಲೆ ಬಿತ್ತು. ಆದರಿಂದ ಶುಭಲಕ್ಷಣಗಳುಳ್ಳ ಓರ್ವ ಪುತ್ರ ಮತ್ತು ಒಂದು ಪುತ್ರಿಯ ಜನ್ಮವಾಯಿತು. ಶಂತನು ಮಹಾರಾಜನು ಬೇಟೆಯಾಡಲು ಆ ಕಡೆ ಹೋದಾಗ ಅವರನ್ನು ನೋಡಿದನು. ದಯಾಪರನಾದ ಶಂತನು ಇಬ್ಬರನ್ನೂ ಎತ್ತಿತಂದನು. ಅವರಲ್ಲಿನ ಪುತ್ರನ ಹೆಸರು ಕೃಪಾಚಾರ್ಯನೆಂದಿತ್ತು ಮತ್ತು ಕನ್ಯೆಯ ಹೆಸರು ಕೃಪಿ ಯೆಂದಿತ್ತು. ಇವಳು ದ್ರೋಣಾಚಾರ್ಯರ ಪತ್ನಿಯಾದಳು. ॥ ೩೫-೩೬ ॥

*ಇಪ್ಪತ್ತೊಂದನೆಯ ಅಧ್ಯಾಯವು ಮುಗಿಯಿತು. ॥ ೨೧ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮಸ್ಕಂಧೇ ಏಕವಿಂಶೋಽಧ್ಯಾಯಃ ॥ ೨೧ ॥

# ಇಪ್ಪತ್ತೆರಡನೆಯ ಅಧ್ಯಾಯ

## ಪಾಂಚಾಲ, ಕೌರವ ಮತ್ತು ಮಗಧದೇಶದ ರಾಜರ ವಂಶವರ್ಣನೆ

*ಶ್ರೀಶುಕ ಉವಾಚ*

**ಮಿತ್ರೇಯುಶ್ಚ ದಿವೋದಾಸಾಚ್ಚ್ಯವನಸ್ತತ್ಸುತೋ ನೃಪ ।**
**ಸುದಾಸಃ ಸಹದೇವೋಽಥ ಸೋಮಕೋ ಜಂತುಜನ್ಮಕೃತ್ ॥ ೧ ॥**

**ತಸ್ಯ ಪುತ್ರಶತಂ ತೇಷಾಂ ಯವೀಯಾನ್ಪೃಷತಃ ಸುತಃ ।**
**ದ್ರುಪದೋ ದ್ರೌಪದೀ ತಸ್ಯ ಧೃಷ್ಟದ್ಯುಮ್ನಾದಯಃ ಸುತಾಃ ॥ ೨ ॥**

**ಧೃಷ್ಟದ್ಯುಮ್ನಾದ್ಧೃಷ್ಟಕೇತುರ್ಭಾರ್ಮ್ಯಾಃ ಪಾಂಚಾಲಕಾ ಇಮೇ ।**
**ಯೋಽಜಮೀಢಸುತೋ ಹ್ಯನ್ಯ ಋಕ್ಷಃ ಸಂವರಣಸ್ತತಃ ॥ ೩ ॥**

**ತಪತ್ಯಾಂ ಸೂರ್ಯಕನ್ಯಾಯಾಂ ಕುರುಕ್ಷೇತ್ರಪತಿಃ ಕುರುಃ ।**
**ಪರೀಕ್ಷಿತ್ಸುಧನುರ್ಜಹ್ನುರ್ನಿಷಧಾಶ್ಚ ಕುರೋಃ ಸುತಾಃ ॥ ೪ ॥**

**ಸುಹೋತ್ರೋಽಭೂತ್ಸುಧನುಷಶ್ಚ್ಯವನೋಽಥ ತತಃ ಕೃತೀ ।**
**ವಸುಸ್ತಸ್ಯೋಪರಿಚರೋ ಬೃಹದ್ರಥಮುಖಾಸ್ತತಃ ॥ ೫ ॥**

**ಕುಶಾಂಬಮತ್ಸ್ಯಪ್ರತ್ಯಗ್ರಚೇದಿಪಾದ್ಯಾಶ್ಚ ಚೇದಿಪಾಃ ।**
**ಬೃಹದ್ರಥಾತ್ಕುಶಾಗ್ರೋಽಭೂದೃಷಭಸ್ತಸ್ಯ ತತ್ಸುತಃ ॥ ೬ ॥**

**ಜಜ್ಞೇ ಸತ್ಯಹಿತೋಽಪತ್ಯಂ ಪುಷ್ಪವಾಂಸ್ತತ್ಸುತೋ ಜಹುಃ ।**
**ಅನ್ಯಸ್ಯಾಂ ಚಾಪಿ ಭಾರ್ಯಾಯಾಂ ಶಕಲೇ ದ್ವೇ ಬೃಹದ್ರಥಾತ್ ॥ ೭ ॥**

**ತೇ ಮಾತ್ರಾ ಬಹಿರುತ್ಸೃಷ್ಟೇ ಜರಯಾ ಚಾಭಿಸಂಧಿತೇ ।**
**ಜೀವ ಜೀವೇತಿ ಕ್ರೀಡಂತ್ಯಾ ಜರಾಸಂಧೋಽಭವತ್ಸುತಃ ॥ ೮ ॥**

**ತತಶ್ಚ ಸಹದೇವೋಽಭೂತ್ಸೋಮಾಪಿರ್ಯಚ್ಛ್ರುತಶ್ರವಾಃ ।**
**ಪರೀಕ್ಷಿದನಪತ್ಯೋಽಭೂತ್ಸುರಥೋ ನಾಮ ಜಾಹ್ನವಃ ॥ ೯ ॥**

**ತತೋ ವಿದೂರಥಸ್ತಸ್ಮಾತ್ ಸಾರ್ವಭೌಮಸ್ತತೋಽಭವತ್ ।**
**ಜಯಸೇನಸ್ತತ್ತನಯೋ ರಾಧಿಕೋಽತೋಽಯುತೋ ಹ್ಯಭೂತ್ ॥ ೧೦ ॥**

**ತತಶ್ಚ ಕ್ರೋಧನಸ್ತಸ್ಮಾದ್ದೇವಾತಿಥಿರಮುಷ್ಯ ಚ ।**
**ಋಷ್ಯಸ್ತಸ್ಯ ದಿಲೀಪೋಽಭೂತ್ಪ್ರತೀಪಸ್ತಸ್ಯ ಚಾತ್ಮಜಃ ॥ ೧೧ ॥**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ ! ದಿವೋದಾಸನಿಗೆ ಮಿತ್ರೇಯು ಎಂಬ ಪುತ್ರನಿದ್ದನು. ಮಿತ್ರೇಯುವಿಗೆ – ಚ್ಯವನ, ಸುದಾಸ, ಸಹದೇವ ಮತ್ತು ಸೋಮಕರೆಂಬ ನಾಲ್ಕು ಪುತ್ರರಾದರು. ಸೋಮಕನಿಗೆ ನೂರು ಮಕ್ಕಳಿದ್ದರು. ಅವರಲ್ಲಿ ಹಿರಿಯವನು ಜಂತು ಮತ್ತು ಕಿರಿಯವನು ಪೃಷತನಾಗಿದ್ದನು. ಪೃಷತನಿಗೆ ದ್ರುಪದನೆಂಬ ಪುತ್ರನಿದ್ದನು. ದ್ರುಪದನಿಗೆ ದ್ರೌಪದಿ ಎಂಬ ಕನ್ಯೆಯೂ, ಧೃಷ್ಟದ್ಯುಮ್ನನೇ ಮೊದಲಾದ ಪುತ್ರರಿದ್ದರು. ॥ ೧-೨ ॥ ಧೃಷ್ಟದ್ಯುಮ್ನನಿಗೆ ಧೃಷ್ಟಕೇತು ಎಂಬ ಪುತ್ರನಿದ್ದನು. ಭರ್ಮ್ಯಾಶ್ವನ ವಂಶದಲ್ಲಿ ಹುಟ್ಟಿದ ಈ ರಾಜರೆಲ್ಲರೂ ಪಾಂಚಾಲರೆಂದು ಖ್ಯಾತರಾದರು. ಅಜಮೀಢನಿಗೆ ಋಕ್ಷನೆಂಬ ಇನ್ನೊರ್ವ ಪುತ್ರನಿದ್ದನು. ಅವನಿಂದ ಸಂವರಣನು ಹುಟ್ಟಿದನು. ॥ ೩ ॥ ಸಂವರಣನ ವಿವಾಹವು ಸೂರ್ಯನ ಮಗಳಾದ ತಪತಿಯೊಂದಿಗೆ ನಡೆಯಿತು. ಅವಳ ಗರ್ಭದಿಂದ ಕುರುಕ್ಷೇತ್ರದ ಒಡೆಯ ಕುರುವಿನ ಜನ್ಮವಾಯಿತು. ಕುರುವಿಗೆ – ಪರೀಕ್ಷಿತ, ಸುಧನ್ವಾ, ಜಹ್ನು ಮತ್ತು ನಿಷಧಾಶ್ವ ಎಂಬ ನಾಲ್ಕು ಪುತ್ರರು ಹುಟ್ಟಿದರು. ॥ ೪ ॥ ಸುಧನ್ವನಿಂದ ಸುಹೋತ್ರ, ಸುಹೋತ್ರನಿಂದ ಚ್ಯವನ, ಚ್ಯವನನಿಂದ ಕೃತಿ, ಕೃತಿಯಿಂದ ಉಪರಿಚರವಸು ಮತ್ತು ಉಪರಿಚರವಸುವಿನಿಂದ ಬೃಹದ್ರಥರೇ ಮೊದಲಾದ ಅನೇಕ ಪುತ್ರರು ಹುಟ್ಟಿದರು. ॥ ೫ ॥ ಅವರಲ್ಲಿ ಬೃಹದ್ರಥ, ಕುಶಾಂಬ, ಮತ್ಸ್ಯ, ಪ್ರತ್ಯಗ್ರ ಮತ್ತು ಚೇದಿಪ ಮೊದಲಾದವರು ಚೇದಿರಾಜ್ಯದ ರಾಜರಾದರು. ಬೃಹದ್ರಥನಿಗೆ ಕುಶಾಗ್ರನೆಂಬ ಪುತ್ರನಿದ್ದನು. ಕುಶಾಗ್ರನಿಂದ ಋಷಭ, ಋಷಭನಿಂದ ಸತ್ಯಹಿತ, ಸತ್ಯಹಿತನಿಂದ ಪುಷ್ಪವಾನ್, ಪುಷ್ಪವಂತನಿಂದ ಜಹುನೆಂಬವ ಪುತ್ರನಾದನು. ಬೃಹದ್ರಥನ ಇನ್ನೊರ್ವ ಪತ್ನಿಯ ಗರ್ಭದಿಂದ ಒಂದು ಶರೀರದ ಎರಡು ಸೀಳುಗಳು ಹುಟ್ಟಿದವು. ॥ ೬-೭ ॥ ಅವನ್ನು ತಾಯಿಯು ಹೊರಗೆ ಎಸೆದುಬಿಟ್ಟಳು. ಆಗ 'ಜರಾ' ಎಂಬ ರಾಕ್ಷಸಿಯು 'ಬದುಕು-ಬದುಕು' ಎಂದು ಹೇಳಿ ಲೀಲಾಜಾಲವಾಗಿ ಆವೆರಡೂ ತುಂಡುಗಳನ್ನು ಜೋಡಿಸಿದಳು. ಆ ಜೋಡಿಸಿದ ಬಾಲಕನೇ ಜರಾಸಂಧನಾದನು. ॥ ೮ ॥ ಜರಾಸಂಧನಿಗೆ ಸಹದೇವ, ಸಹದೇವನಿಗೆ ಸೋಮಾಪಿ, ಸೋಮಾಪಿಗೆ ಶ್ರುತಶ್ರವಾ ಪುತ್ರನಾದನು. ಕುರುವಿನ ಜ್ಯೇಷ್ಠಪುತ್ರ ಪರೀಕ್ಷಿತನಿಗೆ ಯಾವ ಸಂತಾನವೂ ಆಗಲಿಲ್ಲ. ಜಹ್ನುವಿಗೆ ಸುರಥನೆಂಬ ಪುತ್ರನಿದ್ದನು. ॥ ೯ ॥ ಸುರಥನಿಗೆ ವಿದೂರಥ, ವಿದೂರಥನಿಗೆ ಸೌರ್ವಭೌಮ, ಸಾರ್ವಭೌಮನಿಗೆ ಜಯಸೇನ, ಜಯಸೇನನಿಗೆ ರಾಧಿಕ, ರಾಧಿಕನಿಗೆ ಅಯುತನೆಂಬ ಪುತ್ರನಾದನು. ॥ ೧೦ ॥ ಅಯುತನಿಗೆ ಕ್ರೋಧನ, ಕ್ರೋಧನನಿಗೆ ದೇವಾತಿಥಿ, ದೇವಾತಿಥಿಗೆ ಋಷ್ಯ, ಋಷ್ಯನಿಗೆ ದಿಲೀಪ, ದಿಲೀಪನಿಗೆ ಪ್ರತೀಪನೆಂಬ ಮಗನಾದನು. ॥ ೧೧ ॥

ದೇವಾಪಿಃ ಶಂತನುಸ್ತಸ್ಯ ಬಾಹ್ಲೀಕ ಇತಿ ಚಾತ್ಮಜಾಃ ।
ಪಿತೃರಾಜ್ಯಂ ಪರಿತ್ಯಜ್ಯ ದೇವಾಪಿಸ್ತು ವನಂ ಗತಃ ॥ ೧೨ ॥

ಅಭವಚ್ಛಂತನೂ ರಾಜಾ ಪ್ರಾಙ್ಮಹಾಭಿಷಸಂಜ್ಞಿತಃ ।
ಯಂ ಯಂ ಕರಾಭ್ಯಾಂ ಸ್ಪೃಶತಿ ಜೀರ್ಣಂ ಯೌವನಮೇತಿ ಸಃ ॥ ೧೩ ॥

ಶಾಂತಿಮಾಪ್ನೋತಿ ಚೈವಾಗ್ರ್ಯಾಂ ಕರ್ಮಣಾ ತೇನ ಶಂತನುಃ ।
ಸಮಾ ದ್ವಾದಶ ತದ್ರಾಜ್ಯೇ ನ ವವರ್ಷ ಯದಾ ವಿಭುಃ ॥ ೧೪ ॥

ಶಂತನುರ್ಬ್ರಾಹ್ಮಣೈರುಕ್ತಃ ಪರಿವೇತ್ತಾಯಮಗ್ರಭುಕ್ ।
ರಾಜ್ಯಂ ದೇಹ್ಯಗ್ರಜಾಯಾಶು ಪುರರಾಷ್ಟ್ರವಿವೃದ್ಧಯೇ ॥ ೧೫ ॥

ಏವಮುಕ್ತೋ ದ್ವಿಜೈರ್ಜ್ಯೇಷ್ಠಂ ಛಂದಯಾಮಾಸ ಸೋಽಬ್ರವೀತ್ ।
ತನ್ಮಂತ್ರಿಪ್ರಹಿತೈರ್ವಿಪ್ರೈರ್ವೇದಾದ್ ವಿಭ್ರಂಶಿತೋ ಗಿರಾ ॥ ೧೬ ॥

ವೇದವಾದಾತಿವಾದಾನ್ವೈ ತದಾ ದೇವೋ ವವರ್ಷ ಹ ।
ದೇವಾಪಿರ್ಯೋಗಮಾಸ್ಥಾಯ ಕಲಾಪಗ್ರಾಮಮಾಶ್ರಿತಃ ॥ ೧೭ ॥

ಸೋಮವಂಶೇ ಕಲೌ ನಷ್ಟೇ ಕೃತಾದೌ ಸ್ಥಾಪಯಿಷ್ಯತಿ ।
ಬಾಹ್ಲೀಕಾತ್ಸೋಮದತ್ತೋಽಭೂದ್ಭೂರಿರ್ಭೂರಿಶ್ರವಾಸ್ತತಃ ॥ ೧೮ ॥

ಶಲಶ್ಚ ಶಂತನೋರಾಸೀದ್ಗಂಗಾಯಾಂ ಭೀಷ್ಮ ಆತ್ಮವಾನ್ ।
ಸರ್ವಧರ್ಮವಿದಾಂ ಶ್ರೇಷ್ಠೋ ಮಹಾಭಾಗವತಃ ಕವಿಃ ॥ ೧೯ ॥

ಪ್ರತೀಪನಿಗೆ – ದೇವಾಪಿ, ಶಂತನು, ಬಾಹ್ಲೀಕ ಎಂಬ ಮೂವರು ಪುತ್ರರಿದ್ದರು. ದೇವಾಪಿಯು ಪಿತ್ರಾರ್ಜಿತ ರಾಜ್ಯವನ್ನು ಬಿಟ್ಟು ವನಕ್ಕೆ ಹೊರಟು ಹೋದನು. ॥ ೧೨ ॥ ಆದಕ್ಕಾಗಿ ಅವನ ತಮ್ಮನಾದ ಶಂತನು ರಾಜನಾದನು. ಹಿಂದಿನ ಜನ್ಮದಲ್ಲಿ ಶಂತನುವಿನ ಹೆಸರು ಮಹಾಭಿಷನೆಂದಿತ್ತು. ಈ ಜನ್ಮದಲ್ಲಿಯೂ ಅವನು ತನ್ನ ಕೈಯಿಂದ ಸ್ಪರ್ಶಿಸಿದವರು ಮುದುಕರಾಗಿದ್ದವರು ತರುಣರಾಗುತ್ತಿದ್ದರು. ॥ ೧೩ ॥ ಅವನಿಗೆ ಪರಮ ಶಾಂತಿಯು ಲಭಿಸಿತ್ತು. ಈ ಅದ್ಭುತ ಶಕ್ತಿಯಿಂದಲೇ ಅವನು 'ಶಂತನು' ಎಂದು ಖ್ಯಾತನಾದನು. ಒಮ್ಮೆ ಹನ್ನೆರಡು ವರ್ಷಗಳಕಾಲ ಶಂತನುವಿನ ರಾಜ್ಯದಲ್ಲಿ ಇಂದ್ರನು ಮಳೆ ಗರೆಯಲೇ ಇಲ್ಲ, ಇದರ ಕಾರಣವನ್ನು ಬ್ರಾಹ್ಮಣರನ್ನು ಕರೆದು ಕೇಳಿದನು ; ಬ್ರಾಹ್ಮಣರೆಂದರು – ರಾಜನೇ ! ನೀನು ನಿನ್ನಣ್ಣನಾದ ದೇವಾಪಿಯು ವಿವಾಹವಾಗುವುದಕ್ಕೆ ಮೊದಲೇ ವಿವಾಹವಾದೆ. ಅಗ್ನಿಹೋತ್ರ ಮತ್ತು ರಾಜ್ಯಪದವಿಯನ್ನೂ ಸ್ವೀಕರಿಸಿದೆ. ಆದ್ದರಿಂದ ನೀನು ಪರಿವೇತ್ತಾ* ಆಗಿರುವೆ. ಇದರಿಂದ ನಿನ್ನ ರಾಜ್ಯದಲ್ಲಿ ಮಳೆಯಾಗಲಿಲ್ಲ, ಈಗ ನೀನು ನಿನ್ನ ರಾಜ್ಯದ, ರಾಷ್ಟ್ರದ ಉನ್ನತಿಯನ್ನು ಬಯಸುವೆಯಾದರೆ ಶೀಘ್ರಾತಿಶೀಘ್ರವಾಗಿ ನಿನ್ನಣ್ಣನಿಗೆ ರಾಜ್ಯವನ್ನು ಮರಳಿಸಿಬಿಡು. ॥ ೧೪-೧೫ ॥ ಬ್ರಾಹ್ಮಣರು ಶಂತನುವಿನ ಬಳಿ ಹೀಗೆ ಹೇಳಿದಾಗ ಅವನು ವನಕ್ಕೆ ಹೋಗಿ ತನ್ನಣ್ಣನಲ್ಲಿ ರಾಜ್ಯವನ್ನು ಸ್ವೀಕರಿಸುವಂತೆ ಪ್ರಾರ್ಥಿಸಿದನು. ಆದರೆ ಶಂತನುವಿನ ಮಂತ್ರಿಯಾದ ಅಶ್ಮರಾತನು ಮೊದಲೇ ದೇವಾಪಿಯ ಬಳಿಗೆ ಕೆಲವು ಬ್ರಾಹ್ಮಣರನ್ನು ಕಳಿಸಿ, ವೇದಗಳನ್ನು ದೂಷಿತಗೊಳಿಸುವಂತಹ ವಚನಗಳಿಂದ ದೇವಾಪಿಯನ್ನು ವೇದಮಾರ್ಗದಿಂದ ವಿಚಲಿತಗೊಳಿಸಿದ್ದನು. ಇದರ ಫಲವಾಗಿ ದೇವಾಪಿಯು ವೇದಮಾರ್ಗಕ್ಕನುಸಾರ ಗೃಹಸ್ಥಾಶ್ರಮವನ್ನು ಸ್ವೀಕರಿಸುವ ಬದಲು ಅದನ್ನು ನಿಂದಿಸತೊಡಗಿದನು. ಇದರಿಂದ ಅವನು ರಾಜ್ಯಾಧಿಕಾರದಿಂದ ವಂಚಿತನಾದನು. ಆಗ ಶಂತನುವಿನ ರಾಜ್ಯದಲ್ಲಿ ಮಳೆಯಾಯಿತು. ದೇವಾಪಿಯು ಈಗಲೂ ಯೋಗಸಾಧನೆಯನ್ನು ಮಾಡುತ್ತಾ ಯೋಗಿಗಳ ಪ್ರಸಿದ್ಧ ನಿವಾಸಸ್ಥಾನವಾದ ಕಲಾಪಗ್ರಾಮದಲ್ಲಿ ಇರುವನು. ॥ ೧೬-೧೭ ॥ ಕಲಿಯುಗದಲ್ಲಿ ಚಂದ್ರವಂಶವು ಅಂತ್ಯವಾದಾಗ ಕೃತಯುಗದ ಪ್ರಾರಂಭದಲ್ಲಿ ಅವನು ಪುನಃ ಚಂದ್ರವಂಶವನ್ನು ಸ್ಥಾಪಿಸುವನು. ಶಂತನುವಿನ ತಮ್ಮ ಬಾಹ್ಲೀಕನಿಗೆ ಸೋಮದತ್ತನೆಂಬ ಪುತ್ರನಾದನು. ಸೋಮದತ್ತನಿಗೆ ಭೂರಿ, ಭೂರಿಶ್ರವಾ ಮತ್ತು ಶಲ ಎಂಬ ಮೂವರು ಪುತ್ರರಾದರು. ಶಂತನುವಿನಿಂದ ಗಂಗಾದೇವಿಯ ಗರ್ಭದಿಂದ ನೈಷ್ಠಿಕ ಬ್ರಹ್ಮಚಾರೀ ಭೀಷ್ಮನ ಜನ್ಮವಾಯಿತು. ಅವನು ಸಮಸ್ತ ಧರ್ಮಜ್ಞರ ಶಿರೋಮಣಿಯಾಗಿದ್ದನು. ಭಗವಂತನ ಪರಮಪ್ರೇಮೀ ಭಕ್ತನು ಮತ್ತು ಪರಮ ಜ್ಞಾನಿಯಾಗಿದ್ದನು. ॥ ೧೮-೧೯ ॥

* ದಾರಾಗ್ನಿಹೋತ್ರಸಂಯೋಗಂ ಕುರುತೇ ಯೋಽಗ್ರಜೇ ಸ್ಥಿತೇ । ಪರಿವೇತ್ತಾ ಸ ವಿಜ್ಞೇಯಃ ಪರಿವಿತ್ತಿಸ್ತು ಪೂರ್ವಜಃ ॥
ಅಣ್ಣನಿಗಿಂತಲೂ ಮೊದಲು ಮದುವೆಯಾಗಿ ಅಗ್ನಿಹೋತ್ರವನ್ನು ನಡೆಸುವ ತಮ್ಮನು ಪರಿವೇತ್ತನೆಂದೂ ಅವನ ಅಣ್ಣನು 'ಪರಿವಿತ್ತಿ' ಎಂದು ಕರೆಯಲ್ಪಡುತ್ತಾರೆ.

ವೀರಯೂಥಾಗ್ರಣೀರ್ಯೇನ ರಾಮೋಽಪಿ ಯುಧಿ ತೋಷಿತಃ ।
ಶಂತನೋರ್ದಾಶಕನ್ಯಾಯಾಂ ಜಜ್ಞೇ ಚಿತ್ರಾಂಗದಃ ಸುತಃ ॥ ೨೦ ॥

ವಿಚಿತ್ರ ವೀರ್ಯಶ್ಚಾವರಜೋ ನಾಮ್ನಾ ಚಿತ್ರಾಂಗದೋ ಹತಃ ।
ಯಸ್ಯಾಂ ಪರಾಶರಾತ್ಸಾಕ್ಷಾದವತೀರ್ಣೋ ಹರೇಃ ಕಲಾ ॥ ೨೧ ॥

ವೇದಗುಪ್ತೋ ಮುನಿಃ ಕೃಷ್ಣೋ ಯತೋಽಹಮಿದಮಧ್ಯಗಾಮ್ ।
ಹಿತ್ವಾ ಸ್ವಶಿಷ್ಯಾನ್ಪೈಲಾದೀನ್ಭಗವಾನ್ಬಾದರಾಯಣಃ ॥ ೨೨ ॥

ಮಹ್ಯಂ ಪುತ್ರಾಯ ಶಾಂತಾಯ ಪರಂ ಗುಹ್ಯಮಿದಂ ಜಗೌ ।
ವಿಚಿತ್ರವೀರ್ಯೋಽಥೋವಾಹ ಕಾಶಿರಾಜಸುತೇ ಬಲಾತ್ ॥ ೨೩ ॥

ಸ್ವಯಂವರಾದುಪಾನೀತೇ ಅಂಬಿಕಾಂಬಾಲಿಕೇ ಉಭೇ ।
ತಯೋರಾಸಕ್ತಹೃದಯೋ ಗೃಹೀತೋ ಯಕ್ಷ್ಮಣಾ ಮೃತಃ ॥ ೨೪ ॥

ಕ್ಷೇತ್ರೇಽಪ್ರಜಸ್ಯ ವೈ ಭ್ರಾತುರ್ಮಾತ್ರೋಕ್ತೋ ಬಾದರಾಯಣಃ ।
ಧೃತರಾಷ್ಟ್ರಂ ಚ ಪಾಂಡುಂ ಚ ವಿದುರಂ ಚಾಪ್ಯಜೀಜನತ್ ॥ ೨೫ ॥

ಗಾಂಧಾರ್ಯಾಂ ಧೃತರಾಷ್ಟ್ರಸ್ಯ ಜಜ್ಞೇ ಪುತ್ರಶತಂ ನೃಪ ।
ತತ್ರ ದುರ್ಯೋಧನೋ ಜ್ಯೇಷ್ಠೋ ದುಃಶಲಾ ಚಾಪಿ ಕನ್ಯಕಾ ॥ ೨೬ ॥

ಶಾಪಾನ್ಮೈಥುನರುದ್ಧಸ್ಯ ಪಾಂಡೋಃ ಕುಂತ್ಯಾಂ ಮಹಾರಥಾಃ ।
ಜಾತಾ ಧರ್ಮಾನಿಲೇಂದ್ರೇಭ್ಯೋ ಯುಧಿಷ್ಠಿರಮುಖಾಸ್ತ್ರಯಃ ॥ ೨೭ ॥

ಅವನು ಜಗತ್ತಿನ ಸಮಸ್ತ ವೀರರಲ್ಲಿ ಅಗ್ರಗಣ್ಯನಾಗಿದ್ದನು. ಬೇರೆಯ ಮಾತೇನು ? ಅವನು ತನ್ನ ಗುರುಗಳಾದ ಭಗವಾನ್ ಪರಶುರಾಮನನ್ನೂ ಕೂಡ ಯುದ್ಧದಲ್ಲಿ ಸಂತುಷ್ಟಗೊಳಿಸಿದ್ದನು. ಶಂತನುವು ದಾಶರಾಜನ ಮಗಳ * ಗರ್ಭದಿಂದ ಚಿತ್ರಾಂಗದ ಮತ್ತು ವಿಚಿತ್ರವೀರ್ಯರೆಂಬ ಇರ್ವರು ಪುತ್ರರನ್ನು ಪಡೆದನು. ಚಿತ್ರಾಂಗದನನ್ನು ಚಿತ್ರಾಂಗದನೆಂಬ ಗಂಧರ್ವನು ಕೊಂದು ಹಾಕಿದನು. ಇದೇ ದಾಶರಾಜನ ಕನ್ಯೆಯಾದ ಸತ್ಯವತಿಯಿಂದ ಪರಾಶರರ ಮೂಲಕ ನನ್ನ ತಂದೆಯಾದ ಭಗವಂತನ ಕಲಾವತಾರವಾಗಿದ್ದ ಸ್ವಯಂ ಭಗವಂತನು ಶ್ರೀಕೃಷ್ಣದ್ವೈಪಾಯನರಾದ ವೇದವ್ಯಾಸರು ಅವತರಿಸಿದರು. ಅವರು ವೇದಗಳನ್ನು ವಿಭಾಗಮಾಡಿ ರಕ್ಷಿಸಿದರು. ಪರೀಕ್ಷಿತನೇ ! ನಾನು ಅವರಿಂದಲೇ ಈ ಶ್ರೀಮದ್ಭಾಗವತ ಮಹಾಪುರಾಣವನ್ನು ಅಧ್ಯಯನ ಮಾಡಿದೆನು. ಈ ಪುರಾಣವು ಪರಮ ಗೋಪ್ಯವೂ, ಅತ್ಯಂತ ರಹಸ್ಯಮಯವೂ ಆಗಿದೆ. ಇದರಿಂದ ನನ್ನ ತಂದೆಯಾದ ಭಗವಾನ್ ವ್ಯಾಸರು ತಮ್ಮ ಪೈಲರೇ ಮೊದಲಾದ ಶಿಷ್ಯರಿಗೆ ಉಪದೇಶಿಸಲಿಲ್ಲ, ನನ್ನನ್ನೇ ಯೋಗ್ಯ ಅಧಿಕಾರಿಯೆಂದರಿತು ನನಗೆ ಉಪದೇಶಿಸಿದರು. ನಾನು ಅವರ ಪುತ್ರನೇ ಆಗಿದ್ದೆನಲ್ಲ! ಅಲ್ಲದೆ ಶಾಂತಿ ಮುಂತಾದ ಸದ್ಗುಣಗಳು ನನ್ನಲ್ಲಿ ವಿಶೇಷವಾಗಿದ್ದುವು. ಶಂತನುವಿನ ಎರಡನೇ ಮಗನಾದ ವಿಚಿತ್ರವೀರ್ಯನು ಕಾಶಿರಾಜನ ಕನ್ಯೆಯರಾದ ಅಂಬಿಕಾ ಮತ್ತು ಅಂಬಾಲಿಕೆಯನ್ನು ವಿವಾಹವಾದನು. ಅವರಿಬ್ಬರನ್ನೂ ಸ್ವಯಂವರದಲ್ಲಿ ಭೀಷ್ಮರು ಬಲವಂತವಾಗಿ ಗೆದ್ದು ತಂದಿದ್ದರು. ವಿಚಿತ್ರವೀರ್ಯನು ತನ್ನ ಇಬ್ಬರೂ ಪತ್ನಿಯರಲ್ಲಿ ಅತೀವ ಆಸಕ್ತನಾದನು. ಇದರಿಂದ ಅವನು ರಾಜಯಕ್ಷ್ಮಾ (ಕ್ಷಯರೋಗ) ರೋಗಕ್ಕೆ ತುತ್ತಾಗಿ ಅದರಿಂದಲೇ ಮೃತಿಯನ್ನೈದಿದನು. ॥ ೨೦-೨೪ ॥ ತಾಯಿಯಾದ ಸತ್ಯವತಿಯ ನಿರ್ದೇಶನದಂತೆ ಭಗವಾನ್ ವ್ಯಾಸರು ಸಂತಾನಹೀನೆಯರಾಗಿದ್ದ ತನ್ನ ತಮ್ಮನ ಭಾರ್ಯೆಯರಿಗೆ ಧೃತರಾಷ್ಟ್ರ ಮತ್ತು ಪಾಂಡು ಎಂಬ ಇಬ್ಬರು ಪುತ್ರರನ್ನು ಅನುಗ್ರಹಿಸಿದರು. ಅವರ ದಾಸಿಯವರಲ್ಲಿ ವೇದವ್ಯಾಸರ ಅನುಗ್ರಹದಿಂದ ವಿದುರನು ಜನಿಸಿದನು. ॥ ೨೫ ॥

ಪರೀಕ್ಷಿತನೇ ! ಧೃತರಾಷ್ಟ್ರನಿಗೆ ಗಾಂಧಾರಿ ಎಂಬ ಪತ್ನಿಯಲ್ಲಿ ನೂರು ಮಕ್ಕಳಾದರು. ಅವರಲ್ಲಿ ಹಿರಿಯವನೇ ದುರ್ಯೋಧನ. ದುಃಶಲಾ ಎಂದ ಕಿರಿಯ ಕನ್ಯೆಯೂ ಇದ್ದಳು. ॥ ೨೬ ॥ ಪಾಂಡುವಿಗೆ ಕುಂತಿ ಎಂಬ ಪತ್ನಿಯಿದ್ದಳು. ಶಾಪವಶದಿಂದಾಗಿ ಪಾಂಡುವು ಸ್ತ್ರೀಸಹವಾಸವನ್ನು ಮಾಡಲಾಗಲಿಲ್ಲ. ಆದರಿಂದ ಅವನ ಪತ್ನೀ ಕುಂತಿಯ ಗರ್ಭದಿಂದ ಧರ್ಮ, ವಾಯು, ಇಂದ್ರ ಇವರ ಮೂಲಕ ಕ್ರಮವಾಗಿ ಯುಧಿಷ್ಠಿರ, ಭೀಮ, ಅರ್ಜುನ ಎಂಬ ಮೂವರು ಪುತ್ರರು ಉದಿಸಿದರು. ಇವರು ಮೂವರೂ ಮಹಾರಥಿಗಳಾಗಿದ್ದರು. ॥ ೨೭ ॥

* ಈ ಕನ್ಯೆಯು ನಿಜವಾಗಿ ಉಪಚರವಸುವಿನ ವೀರ್ಯದಿಂದ ಮೀನಿನ ಹೊಟ್ಟೆಯಲ್ಲಿ ಹುಟ್ಟಿದವಳು. ಆದರೆ ದಾಶ (ಬೆಸ್ತ)ರಿಂದ ಸಾಕಲ್ಪಟ್ಟಿದ್ದರಿಂದ ಅವಳು ದಾಶರಾಜಕನ್ಯೆಯೆನಿಸಿದಳು.

ನಕುಲಃ ಸಹದೇವಶ್ಚ ಮಾದ್ರ್ಯಾಂ ನಾಸತ್ಯದಸ್ರಯೋಃ ।
ದ್ರೌಪದ್ಯಾಂ ಪಂಚ ಪಂಚಭ್ಯಃ ಪುತ್ರಾಸ್ತೇ ಪಿತರೋಽಭವನ್
॥ ೨೮ ॥

ಯುಧಿಷ್ಠಿರಾತ್ಪ್ರತಿವಿಂಧ್ಯಃ ಶ್ರುತಸೇನೋ ವೃಕೋದರಾತ್ ।
ಅರ್ಜುನಾಚ್ಛ್ರುತಕೀರ್ತಿಸ್ತು ಶತಾನೀಕಸ್ತು ನಾಕುಲಿಃ
॥ ೨೯ ॥

ಸಹದೇವಸುತೋ ರಾಜನ್ ಶ್ರುತಕರ್ಮಾ ತಥಾಪರೇ ।
ಯುಧಿಷ್ಠಿರಾತ್ತು ಪೌರವ್ಯಾಂ ದೇವಕೋಽಥ ಘಟೋತ್ಕಚಃ
॥ ೩೦ ॥

ಭೀಮಸೇನಾದ್ಧಿಡಿಂಬಾಯಾಂ ಕಾಲ್ಯಾಂ ಸರ್ವಗತಸ್ತತಃ ।
ಸಹದೇವಾತ್ಸುಹೋತ್ರಂ ತು ವಿಜಯಾಸೂತ ಪಾರ್ವತೀ
॥ ೩೧ ॥

ಕರೇಣುಮತ್ಯಾಂ ನಕುಲೋ ನಿರಮಿತ್ರಂ ತಥಾರ್ಜುನಃ ।
ಇರಾವಂತಮುಲೂಪ್ಯಾಂ ವೈ ಸುತಾಯಾಂ ಬಭ್ರುವಾಹನಮ್ ।
ಮಣಿಪೂರಪತೇಃ ಸೋಽಪಿ ತತ್ಪುತ್ರಃ ಪುತ್ರಿಕಾಸುತಃ
॥ ೩೨ ॥

ತವ ತಾತಃ ಸುಭದ್ರಾಯಾಮಭಿಮನ್ಯುರಜಾಯತ ।
ಸರ್ವಾತಿರಥಜಿದ್ವೀರ ಉತ್ತರಾಯಾಂ ತತೋ ಭವಾನ್
॥ ೩೩ ॥

ಪರಿಕ್ಷೀಣೇಷು ಕುರುಷು ದ್ರೌಣೇರ್ಬ್ರಹ್ಮಾಸ್ತ್ರ ತೇಜಸಾ ।
ತ್ವಂ ಚ ಕೃಷ್ಣಾನುಭಾವೇನ ಸಜೀವೋ ಮೋಚಿತೋಽಂತಕಾತ್
॥ ೩೪ ॥

ತವೇಮೇ ತನಯಾಸ್ತಾತ ಜನಮೇಜಯಪೂರ್ವಕಾಃ ।
ಶ್ರುತಸೇನೋ ಭೀಮಸೇನ ಉಗ್ರಸೇನಶ್ಚ ವೀರ್ಯವಾನ್
॥ ೩೫ ॥

ಜನಮೇಜಯಸ್ತ್ವಾಂ ವಿದಿತ್ವಾ ತಕ್ಷಕಾನ್ನಿಧನಂ ಗತಮ್ ।
ಸರ್ಪಾನ್ವೈ ಸರ್ಪಯಾಗಾಗ್ನೌ ಸ ಹೋಷ್ಯತಿ ರುಷಾನ್ವಿತಃ
॥ ೩೬ ॥

ಕಾವಷೇಯಂ ಪುರೋಧಾಯ ತುರಂ ತುರಗಮೇಧಯಾಟ್ ।
ಸಮಂತಾತ್ಪೃಥಿವೀಂ ಸರ್ವಾಂ ಜಿತ್ವಾ ಯಕ್ಷ್ಯತಿ ಚಾಧ್ವರೈಃ
॥ ೩೭ ॥

ತಸ್ಯ ಪುತ್ರಃ ಶತಾನೀಕೋ ಯಾಜ್ಞವಲ್ಕ್ಯಾತ್ತ್ರಯೀಂ ಪಠನ್ ।
ಅಸ್ತ್ರಜ್ಞಾನಂ ಕ್ರಿಯಾಜ್ಞಾನಂ ಶೌನಕಾತ್ಪರಮೇಷ್ಯತಿ
॥ ೩೮ ॥

ಪಾಂಡುವಿನ ಇನ್ನೋರ್ವ ಪತ್ನಿಯ ಹೆಸರು ಮಾದ್ರಿಯೆಂದಿತ್ತು. ಅವಳಲ್ಲಿ ಅಶ್ವಿನೀದೇವತೆಗಳ ಅನುಗ್ರಹದಿಂದ ನಕುಲ-ಸಹದೇವರೆಂಬ ಯಮಳರು ಹುಟ್ಟಿದರು. ಪರೀಕ್ಷಿತನೇ! ಈ ಪಂಚಪಾಂಡವರ ಪತ್ನಿಯಾದ ದ್ರೌಪದಿಯಲ್ಲಿ ನಿನ್ನ ಐವರು ಚಿಕ್ಕಪ್ಪಂದಿರು ಜನಿಸಿದರು. ॥ ೨೮ ॥ ಇವರಲ್ಲಿ ಯುಧಿಷ್ಠಿರನಿಂದ ಪ್ರತಿವಿಂಧ್ಯ, ಭೀಮಸೇನನಿಂದ ಶ್ರುತಸೇನ, ಅರ್ಜುನನಿಂದ ಶ್ರುತಕೀರ್ತಿ, ನಕುಲನಿಂದ ಶತಾನೀಕ, ಸಹದೇವನಿಂದ ಶ್ರುತಕರ್ಮಾ ಎಂಬುವರು ಹುಟ್ಟಿದರು. ಇವರುಗಳಲ್ಲದೆ ಯುಧಿಷ್ಠಿರನ ಪೌರವೀ ಎಂಬ ಪತ್ನಿಯಿಂದ ದೇವಕನೂ, ಭೀಮಸೇನನ ಪತ್ನಿ ಹಿಡಿಂಬೆಯಿಂದ ಘಟೋತ್ಕಚ ಮತ್ತು ಕಾಲಿ ಎಂಬುವಳಲ್ಲಿ ಸರ್ವಗತನೆಂಬ ಮಗನೂ ಹುಟ್ಟಿದರು. ಸಹದೇವನ ಪರ್ವತಕುಮಾರಿ ವಿಜಯಾಳಿಂದ ಸುಹೋತ್ರನೂ, ನಕುಲನ ಕರೇಣುಮತಿಯಿಂದ ನರಮಿತ್ರರೆಂಬ ಪುತ್ರರಾದರು. ಅರ್ಜುನನಿಂದ ನಾಗಕನ್ಯೆ ಉಲೂಪಿಯ ಗರ್ಭದಲ್ಲಿ ಇರಾವಂತ ಮತ್ತು ಮಣಿಪುರದ ರಾಜನ ಮಗಳಾದ ಚಿತ್ರಾಂಗದೆಯಿಂದ ಬಭ್ರುವಾಹನನು ಹುಟ್ಟಿದನು. ಆದರೆ ಹಿಂದೆ ಮಾಡಿಕೊಂಡಿದ್ದ ಒಪ್ಪಂದದಂತೆ ಬಭ್ರುವಾಹನನು ಪುತ್ರಿಕಾ ಸುತನಾಗಿ ಅವನ ಅಜ್ಜನಿಗೇ ಮಗನಾದನು. ॥ ೨೯-೩೨ ॥ ಅರ್ಜುನನಿಗೆ ಸುಭದ್ರೆ ಎಂಬ ಪತ್ನಿಯಲ್ಲಿ ನಿನ್ನ ತಂದೆಯಾದ ಅಭಿಮನ್ಯುವಿನ ಜನ್ಮವಾಯಿತು. ವೀರಅಭಿಮನ್ಯುವು ಎಲ್ಲ ಅತಿರಥಿಯರನ್ನೂ ಗೆದ್ದುಕೊಂಡಿದ್ದನು. ಅಭಿಮನ್ಯುವಿನ ಮೂಲಕ ಉತ್ತರೆಯ ಗರ್ಭದಲ್ಲಿ ನಿನ್ನ ಜನ್ಮವಾಗಿದೆ. ॥ ೩೩ ॥ ಪರೀಕ್ಷಿತನೇ! ಆ ಸಮಯದಲ್ಲಿ ಕುರುವಂಶವು ನಾಶವಾಗಿಹೋಗಿತ್ತು. ಅಶ್ವತ್ಥಾಮನ ಬ್ರಹ್ಮಾಸ್ತ್ರದಿಂದ ನೀನು ಸುಟ್ಟುಹೋಗಿದ್ದೆ. ಆದರೆ ಭಗವಾನ್ ಶ್ರೀಕೃಷ್ಣನು ತನ್ನ ಪ್ರಭಾವದಿಂದ ನಿನ್ನನ್ನು ಆ ಮೃತ್ಯುವಿನಿಂದ ಕಾಪಾಡಿ ಬದುಕಿಸಿದನು. ॥ ೩೪ ॥

ಪರೀಕ್ಷಿತನೇ! ನಿನ್ನ ಪುತ್ರರಾದ ಜನಮೇಜಯ, ಶ್ರುತಸೇನ, ಭೀಮಸೇನ ಮತ್ತು ಉಗ್ರಸೇನರು ನಿನ್ನ ಮುಂದೆಯೇ ಕುಳಿತಿದ್ದಾರೆ. ಇವರೆಲ್ಲರೂ ಮಹಾ ಪರಾಕ್ರಮಿಗಳಾಗಿದ್ದಾರೆಂಬುದು ನಿನಗೆ ತಿಳಿದೇ ಇದೆ. ॥ ೩೫ ॥ ತಕ್ಷಕನು ಕಚ್ಚಿದೊಡನೆ ನಿನ್ನ ಮೃತ್ಯುವಾದಾಗ ಇದನ್ನು ತಿಳಿದ ಜನಮೇಜಯನು ಬಹಳ ಸಿಟ್ಟುಗೊಂಡು, ಸರ್ಪಯಾಗದಿಂದ ಎಲ್ಲ ಸರ್ಪಗಳನ್ನು ಯಜ್ಞೇಶ್ವರನಿಗೆ ಆಹುತಿಯಾಗಿಸುವನು. ॥ ೩೬ ॥ ಕಾವಷೇಯನ ಪುತ್ರನಾದ ತುರನೆಂಬುವನನ್ನು ಪುರೋಹಿತನನ್ನಾಗಿಸಿಕೊಂಡು ಜನಮೇಜಯನು ಅಶ್ವಮೇಧ ಯಜ್ಞವನ್ನು ಮಾಡುವನು ಮತ್ತು ಎಲ್ಲ ದಿಕ್ಕುಗಳಲ್ಲಿ ಪೃಥಿವಿಯನ್ನು ಜಯಿಸಿ ಯಜ್ಞಗಳ ಮೂಲಕ ಭಗವಂತನನ್ನು ಆರಾಧಿಸುವನು. ॥ ೩೭ ॥ ಜನಮೇಜಯನಿಗೆ ಶತಾನೀಕನೆಂಬ ಪುತ್ರನು ಹುಟ್ಟುವನು. ಅವನು ಯಾಜ್ಞವಲ್ಕ್ಯರಿಂದ ಮೂರು ವೇದಗಳನ್ನು ಮತ್ತು ಕರ್ಮಕಾಂಡವನ್ನು ಕಲಿತು, ಕೃಪಾಚಾರ್ಯರಿಂದ ಅಸ್ತ್ರವಿದ್ಯೆಯನ್ನು ಪಡೆದುಕೊಳ್ಳುವನು. ಶೌನಕರಿಂದ ಆತ್ಮಜ್ಞಾನವನ್ನು ಸಂಪಾದಿಸಿ ಪರಮಾತ್ಮನನ್ನು ಹೊಂದುವನು. ॥ ೩೮ ॥

ಸಹಸ್ರಾನೀಕಸ್ತತ್ಪುತ್ರಸ್ತತಶ್ಚೈವಾಶ್ವಮೇಧಜಃ ।
ಅಸೀಮಕೃಷ್ಣಸ್ತಸ್ಯಾಪಿ ನೇಮಿಚಕ್ರಸ್ತು ತತ್ಸುತಃ ॥ ೩೯ ॥

ಗಜಾಹ್ವಯೇ ಹೃತೇ ನದ್ಯಾ ಕೌಶಾಂಬ್ಯಾಂ ಸಾಧು ವತ್ಸ್ಯತಿ ।
ಉಕ್ತಸ್ತತಶ್ಚಿತ್ರರಥಸ್ತಸ್ಮಾತ್ಕವಿರಥಃ ಸುತಃ ॥ ೪೦ ॥

ತಸ್ಮಾಚ್ಚ ವೃಷ್ಟಿಮಾಂಸ್ತಸ್ಯ ಸುಷೇಣೋಽಥ ಮಹೀಪತಿಃ ।
ಸುನೀಥಸ್ತಸ್ಯ ಭವಿತಾ ನೃಚಕ್ಷುರ್ಯತ್ಸುಖೀನಲಃ ॥ ೪೧ ॥

ಪರಿಪ್ಲವಃ ಸುತಸ್ತಸ್ಮಾನ್ಮೇಧಾವೀ ಸುನಯಾತ್ಮಜಃ ।
ನೃಪಞ್ಜಯಸ್ತತೋ ದೂರ್ವಸ್ತಿಮಿಸ್ತಸ್ಮಾಜ್ಜನಿಷ್ಯತಿ ॥ ೪೨ ॥

ತಿಮೇರ್ಬೃಹದ್ರಥಸ್ತಸ್ಮಾಚ್ಛತಾನೀಕಃ ಸುದಾಸಜಃ ।
ಶತಾನೀಕಾದ್ದುರ್ದಮನಸ್ತಸ್ಯಾಪತ್ಯಂ ವಹೀನರಃ ॥ ೪೩ ॥

ದಂಡಪಾಣಿರ್ನಿಮಿಸ್ತಸ್ಯ ಕ್ಷೇಮಕೋ ಭವಿತಾ ನೃಪಃ ।
ಬ್ರಹ್ಮಕ್ಷತ್ರಸ್ಯ ವೈ ಪ್ರೋಕ್ತೋ ವಂಶೋ ದೇವರ್ಷಿಸತ್ಕೃತಃ ॥ ೪೪ ॥

ಕ್ಷೇಮಕಂ ಪ್ರಾಪ್ಯ ರಾಜಾನಂ ಸಂಸ್ಥಾಂ ಪ್ರಾಪ್ಸ್ಯತಿ ವೈ ಕಲೌ ।
ಅಥ ಮಾಗಧರಾಜಾನೋ ಭವಿತಾರೋ ವದಾಮಿ ತೇ ॥ ೪೫ ॥

ಭವಿತಾ ಸಹದೇವಸ್ಯ ಮಾರ್ಜಾರಿರ್ಯಚ್ಛ್ರುತಶ್ರವಾಃ ।
ತತೋಽಯುತಾಯುಸ್ತಸ್ಯಾಪಿ ನಿರಮಿತ್ರೋಽಥ ತತ್ಸುತಃ ॥ ೪೬ ॥

ಸುನಕ್ಷತ್ರಃ ಸುನಕ್ಷತ್ರಾದ್ಬೃಹತ್ಸೇನೋಽಥ ಕರ್ಮಜಿತ್ ।
ತತಃ ಸೃತಞ್ಜಯಾದ್ವಿಪ್ರಃ ಶುಚಿಸ್ತಸ್ಯ ಭವಿಷ್ಯತಿ ॥ ೪೭ ॥

ಕ್ಷೇಮೋಽಥ ಸುವ್ರತಸ್ತಸ್ಮಾದ್ಧರ್ಮಸೂತ್ರಃ ಶಮಸ್ತತಃ ।
ದ್ಯುಮತ್ಸೇನೋಽಥ ಸುಮತಿಃ ಸುಬಲೋ ಜನಿತಾ ತತಃ ॥ ೪೮ ॥

ಸುನೀಥಃ ಸತ್ಯಜಿದಥ ವಿಶ್ವಜಿದ್ ಯದ್ ರಿಪುಂಜಯಃ ।
ಬಾರ್ಹದ್ರಥಾಶ್ಚ ಭೂಪಾಲಾ ಭಾವ್ಯಾಃ ಸಾಹಸ್ರವತ್ಸರಮ್ ॥ ೪೯ ॥

ಶತಾನೀಕನಿಗೆ ಸಹಸ್ರಾನೀಕ, ಸಹಸ್ರಾನೀಕನಿಗೆ ಅಶ್ವಮೇಧಜ, ಅಶ್ವಮೇಧಜನಿಗೆ ಅಸೀಮಕೃಷ್ಣ ಮತ್ತು ಅಸೀಮಕೃಷ್ಣನಿಗೆ ನೇಮಿಚಕ್ರ ಪುತ್ರನು ಹುಟ್ಟುವನು. ॥ ೩೯ ॥ ಹಸ್ತಿನಾಪುರವು ಗಂಗೆಯಲ್ಲಿ ಕೊಚ್ಚಿಕೊಂಡು ಹೋದಾಗ ನೇಮಿಯು ಕೌಶಾಂಬಿ ಪುರದಲ್ಲಿ ಸುಖವಾಗಿ ನೆಲೆಸುವನು. ನೇಮಿಗೆ ಚಿತ್ರರಥ ಪುತ್ರನಾಗುವನು. ಚಿತ್ರರಥನಿಗೆ ಕವಿರಥ, ಕವಿರಥನಿಗೆ ವೃಷ್ಟಿಮಾನ್, ವೃಷ್ಟಿಮಂತನಿಗೆ ಸುಷೇಣ, ಸುಷೇಣನಿಗೆ ಸುನೀಥ, ಸುನೀಥನಿಗೆ ನೃಚಕ್ಷು, ನೃಚಕ್ಷುವಿಗೆ ಸುಖೀನಲ, ಸುಖೀನಲನಿಗೆ ಪರಿಪ್ಲವ, ಪರೀಪ್ಲವನಿಗೆ ಸುನಯ, ಸುನಯನಿಗೆ ಮೇಧಾವೀ, ಮೇಧಾವಿಗೆ ನೃಪಂಜಯ, ನೃಪಂಜಯನಿಗೆ ದೂರ್ವ, ದೂರ್ವನಿಗೆ ತಿಮಿ ಎಂಬ ಪುತ್ರನು ಉದಿಸುವನು. ॥ ೪೦-೪೨ ॥ ತಿಮಿಯಿಂದ ಬೃಹದ್ರಥನು, ಬೃಹದ್ರಥನಿಗೆ ಸುದಾಸ, ಸುದಾಸನಿಗೆ ಶತಾನೀಕ, ಶತಾನೀಕನಿಗೆ ದುರ್ದಮನ, ದುರ್ದಮನನಿಗೆ ವಹೀನರ, ವಹೀನರನಿಗೆ ದಂಡಪಾಣಿ, ದಂಡಪಾಣಿಗೆ ನಿಮಿ ಮತ್ತು ನಿಮಿಗೆ ರಾಜಾಕ್ಷೇಮಕನ ಜನ್ಮವಾಗುವುದು. ಹೀಗೆ ನಾನು ನಿನಗೆ ಬ್ರಾಹ್ಮಣರು ಮತ್ತು ಕ್ಷತ್ರಿಯರ ಉತ್ಪತ್ತಿಸ್ಥಾನವಾದ ಚಂದ್ರವಂಶವನ್ನು ವರ್ಣಿಸಿ ಹೇಳಿರುವೆನು. ಮಹಾ-ಮಹಾ ದೇವತೆಗಳೂ, ಋಷಿಗಳೂ ಈ ವಂಶವನ್ನು ಸತ್ಕರಿಸುವರು. ॥ ೪೩-೪೪ ॥ ಈ ವಂಶವು ಕಲಿಯುಗದಲ್ಲಿ ಕ್ಷೇಮಕನೊಂದಿಗೆ ಸಮಾಪ್ತವಾಗುವುದು. ಈಗ ನಾನು ಭವಿಷ್ಯದಲ್ಲಾಗುವ ಮಗಧ ದೇಶದ ರಾಜರನ್ನು ವರ್ಣಿಸುವೆನು ಕೇಳು. ॥ ೪೫ ॥

ಜರಾಸಂಧನಮಗನಾದ ಸಹದೇವನಿಗೆ ಮಾರ್ಜಾರಿ, ಮಾರ್ಜಾರಿಯಿಂದ ಶ್ರುತಶ್ರವಾ, ಶ್ರುತಶ್ರವನಿಂದ ಅಯುತಾಯು,ಅಯುತಾಯುವಿನಿಂದ ನಿರಮಿತ್ರನೆಂಬ ಪುತ್ರನಾಗುವನು. ॥ ೪೬॥ ನಿರಮಿತ್ರನಿಂದ ಸುನಕ್ಷತ್ರ, ಸುನಕ್ಷತ್ರನಿಂದ ಬೃಹತ್ಸೇನ, ಬೃಹತ್ಸೇನನಿಂದ ಕರ್ಮಜಿತ್, ಕರ್ಮಜಿತ್ತುವಿನಿಂದ ಸೃತಂಜಯ, ಸೃತಂಜಯನಿಂದ ವಿಪ್ರ, ವಿಪ್ರನಿಂದ ಶುಚಿ ಎಂಬ ಪುತ್ರನಾಗುವನು. ॥ ೪೭ ॥ ಶುಚಿಗೆ ಕ್ಷೇಮ, ಕ್ಷೇಮನಿಗೆ ಸುವ್ರತ, ಸುವ್ರತನಿಗೆ ಧರ್ಮಸೂತ್ರ, ಧರ್ಮಸೂತ್ರನಿಗೆ ಶಮ, ಶಮನಿಗೆ ದ್ಯುಮತ್ಸೇನ, ದ್ಯುಮತ್ಸೇನನಿಗೆ ಸುಮತಿ, ಸುಮತಿಗೆ ಸುಬಲನು ಹುಟ್ಟುವನು. ॥ ೪೮ ॥ ಸುಬಲನಿಗೆ ಸುನೀಥ, ಸುನೀಥನಿಗೆ ಸತ್ಯಜಿತ್, ಸತ್ಯಜಿತ್ತುವಿಗೆ ವಿಶ್ವಜಿತ್, ವಿಶ್ವಜಿತ್ತುವಿಗೆ ರಿಪುಂಜಯ ಪುತ್ರನು ಹುಟ್ಟುವನು. ಇವರೆಲ್ಲರೂ ಬೃಹದ್ರಥವಂಶದ ರಾಜರಾಗುವರು. ಇವರ ಶಾಸನಕಾಲವು ಒಂದು ಸಾವಿರವರ್ಷಗಳು ಮಾತ್ರ ಇರುವುದು. ॥ ೪೯ ॥

*ಇಪ್ಪತ್ತೆರಡನೆಯ ಅಧ್ಯಾಯವು ಮುಗಿಯಿತು. ॥ ೨೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮ ಸ್ಕಂಧೇ ದ್ವಾವಿಂಶೋಽಧ್ಯಾಯಃ ॥ ೨೨ ॥

# ಇಪ್ಪತ್ತಮೂರನೆಯ ಅಧ್ಯಾಯ

## ಅನು, ದ್ರುಹ್ಯು, ತುರ್ವಸು ಮತ್ತು ಯದು ಇವರ ವಂಶದ ವರ್ಣನೆ

*ಶ್ರೀಶುಕ ಉವಾಚ*

ಅನೋಃ ಸಭಾನರಶ್ಚಕ್ಷುಃ ಪರೋಕ್ಷಶ್ಚ ತ್ರಯಃ ಸುತಾಃ ।
ಸಭಾನರಾತ್ಕಾಲನರಃ ಸೃಞ್ಜಯಸ್ತತ್ಸುತಸ್ತತಃ ॥ ೧ ॥

ಜನಮೇಜಯಸ್ತಸ್ಯ ಪುತ್ರೋ ಮಹಾಶೀಲೋ ಮಹಾಮನಾಃ ।
ಉಶೀನರಸ್ತಿತಿಕ್ಷುಶ್ಚ ಮಹಾಮನಸ ಆತ್ಮಜೌ ॥ ೨ ॥

ಶಿಬಿರ್ವನಃ ಶಮಿರ್ದಕ್ಷಶ್ಚತ್ವಾರೋಶೀನರಾತ್ಮಜಾಃ ।
ವೃಷಾದರ್ಭಃ ಸುವೀರಶ್ಚ ಮದ್ರಃ ಕೈಕೇಯ ಆತ್ಮಜಾಃ ॥ ೩ ॥

ಶಿಬೇಶ್ಚತ್ವಾರ ಏವಾಸಂಸ್ತಿತಿಕ್ಷೋಶ್ಚ ರುಷದ್ರಥಃ ।
ತತೋ ಹೇಮೋಽಥ ಸುತಪಾ ಬಲಿಃ ಸುತಪಸೋಽಭವತ್ ॥ ೪ ॥

ಅಂಗವಂಗಕಲಿಂಗಾದ್ಯಾಃ ಸುಹ್ಮಪುಂಡ್ರಾಂಧ್ರಸಂಜ್ಞಿತಾಃ ।
ಜಜ್ಞಿರೇ ದೀರ್ಘತಮಸೋ ಬಲೇಃ ಕ್ಷೇತ್ರೇ ಮಹೀಕ್ಷಿತಃ ॥ ೫ ॥

ಚಕ್ರುಃ ಸ್ವನಾಮ್ನಾ ವಿಷಯಾನ್ಷಡಿಮಾನ್ಪ್ರಾಚ್ಯಕಾಂಶ್ಚ ತೇ ।
ಖನಪಾನೋಽಂಗತೋ ಜಜ್ಞೇ ತಸ್ಮಾದ್ದಿವಿರಥಸ್ತತಃ ॥ ೬ ॥

ಸುತೋ ಧರ್ಮರಥೋ ಯಸ್ಯ ಜಜ್ಞೇ ಚಿತ್ರರಥೋಽಪ್ರಜಾಃ ।
ರೋಮಪಾದ ಇತಿ ಖ್ಯಾತಸ್ತಸ್ಮೈ ದಶರಥಃ ಸಖಾ ॥ ೭ ॥

ಶಾಂತಾಂ ಸ್ವಕನ್ಯಾಂ ಪ್ರಾಯಚ್ಛದೃಷ್ಯಶೃಂಗ ಉವಾಹ ತಾಮ್ ।
ದೇವೇಽವರ್ಷತಿ ಯಂ ರಾಮಾ ಆನಿನ್ಯುರ್ಹರಿಣೀಸುತಮ್ ॥ ೮ ॥

ನಾಟ್ಯಸಂಗೀತವಾದಿತ್ರೈರ್ವಿಭ್ರಮಾಲಿಂಗನಾರ್ಹಣೈಃ ।
ಸ ತು ರಾಜ್ಞೋಽನಪತ್ಯಸ್ಯ ನಿರೂಪ್ಯೇಷ್ಟಿಂ ಮರುತ್ವತಃ ॥ ೯ ॥

ಪ್ರಜಾಮದಾದ್ದಶರಥೋ ಯೇನ ಲೇಭೇಽಪ್ರಜಾಃ ಪ್ರಜಾಃ ।
ಚತುರಂಗೋ ರೋಮಪಾದಾತ್ಪೃಥುಲಾಕ್ಷಸ್ತು ತತ್ಸುತಃ ॥ ೧೦ ॥

ಬೃಹದ್ರಥೋ ಬೃಹತ್ಕರ್ಮಾ ಬೃಹದ್ಭಾನುಶ್ಚ ತತ್ಸುತಾಃ ।
ಆದ್ಯಾದ್ಬೃಹನ್ಮನಾಸ್ತಸ್ಮಾಜ್ಜಯದ್ರಥ ಉದಾಹೃತಃ ॥ ೧೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಯಯಾತಿಯ ಮತ್ತೊಬ್ಬ ಮಗನಾದ ಅನು ಎಂಬುವನಿಗೆ ಸಭಾನರ, ಚಕ್ಷು, ಪರೋಕ್ಷ ಎಂಬ ಮೂವರು ಪುತ್ರರಿದ್ದರು. ಸಭಾನರನಿಗೆ ಕಾಲನರ, ಕಾಲನರನಿಗೆ ಸೃಂಜಯ, ಸೃಂಜಯನಿಗೆ ಜನಮೇಜಯ, ಜನಮೇಜಯನಿಗೆ ಮಹಾಶೀಲ, ಮಹಾಶೀಲನಿಗೆ ಮಹಾಮನಾ ಎಂಬ ಪುತ್ರನಾದನು. ಮಹಾಮನನಿಗೆ ಉಶೀನರ ಮತ್ತು ತಿತಿಕ್ಷು ಎಂಬ ಇಬ್ಬರು ಪುತ್ರರಾದರು. ॥ ೧-೨ ॥ ಉಶೀನರನಿಗೆ ಶಿಬಿ, ವನ, ಶಮೀ, ದಕ್ಷ ಎಂಬ ನಾಲ್ಕು ಮಕ್ಕಳಿದ್ದರು. ಶಿಬಿಗೆ – ವೃಷಾದರ್ಭ, ಸುವೀರ, ಮದ್ರ, ಕೈಕೇಯ ಎಂಬ ನಾಲ್ಕು ಪುತ್ರರಾದರು. ಉಶೀನರನ ತಮ್ಮ ತಿತಿಕ್ಷುವಿಗೆ ರುಶದ್ರಥ, ರುಶದ್ರಥನಿಗೆ ಹೇಮ, ಹೇಮನಿಗೆ ಸುತಪಾ, ಸುತಪನಿಗೆ ಬಲಿ ಎಂಬ ಪುತ್ರನಾದನು. ॥ ೩-೪ ॥ ರಾಜಾ ಬಲಿಯ ಪತ್ನಿಯ ಗರ್ಭದಿಂದ ದೀರ್ಘತಮಾ ಋಷಿಯು – ಅಂಗ, ವಂಗ, ಕಲಿಂಗ, ಸುಹ್ಮ, ಪುಂಡ್ರ ಮತ್ತು ಅಂಧ್ರ ಎಂಬ ಆರು ಮಂದಿ ಪುತ್ರರನ್ನು ಪಡೆದನು. ॥ ೫ ॥ ಇವರು ತಮ್ಮ-ತಮ್ಮ ಹೆಸರುಗಳಿಂದ ಪೂರ್ವ ದಿಕ್ಕಿನಲ್ಲಿ ಆರು ದೇಶಗಳನ್ನು ಸ್ಥಾಪಿಸಿದರು. ಅಂಗನಿಗೆ ಖನಪಾನನೆಂಬ ಪುತ್ರನಾದನು. ಖನಪಾನನಿಗೆ ದಿವಿರಥ, ದಿವಿರಥನಿಗೆ ಧರ್ಮರಥ, ಧರ್ಮರಥನಿಗೆ ಚಿತ್ರರಥನಾದನು. ಈ ಚಿತ್ರರಥನೇ ರೋಮಪಾದನೆಂದು ಪ್ರಸಿದ್ಧನಾಗಿದ್ದನು. ಅಯೋಧ್ಯಾಪತಿ ದಶರಥನು ಇವನಿಗೆ ಮಿತ್ರನಾಗಿದ್ದನು. ರೋಮಪಾದನಿಗೆ ಸಂತಾನ ವಿರಲಿಲ್ಲ, ಅದಕ್ಕಾಗಿ ದಶರಥನು ತನ್ನ ಮಗಳಾದ ಶಾಂತಾ ಎಂಬುವಳನ್ನೂ ದತ್ತಕವಾಗಿ ಕೊಟ್ಟನು. ಶಾಂತಾಳ ವಿವಾಹವು ಋಷ್ಯಶೃಂಗ ಮುನಿಯೊಂದಿಗೆ ಜರುಗಿತು. ಋಷ್ಯಶೃಂಗನು ವಿಭಾಂಡಕ ಋಷಿಯಿಂದ ಜಿಂಕೆಯ ಹೊಟ್ಟೆಯಲ್ಲಿ ಹುಟ್ಟಿದ್ದನು. ಒಮ್ಮೆ ರೋಮಪಾದರಾಜನ ರಾಜ್ಯದಲ್ಲಿ ಬಹಳ ದಿನಗಳವರೆಗೆ ಮಳೆಯಾಗಲಿಲ್ಲ, ಆಗ ಗಣಿಕೆಯರು ತಮ್ಮ ನೃತ್ಯ, ಸಂಗೀತ, ವಾದ್ಯ, ಹಾವ-ಭಾವ, ಆಲಿಂಗನ ಮತ್ತು ವಿಧ-ವಿಧವಾದ ಉಪಹಾರಗಳಿಂದ ಋಷ್ಯಶೃಂಗನನ್ನು ಮೋಹಿತನನ್ನಾಗಿಸಿ ರಾಜ್ಯಕ್ಕೆ ಕರೆತಂದರು. ಅವನು ಬರುತ್ತಲೇ ಮಳೆ ಸುರಿಯಿತು. ಅವನೇ ರೋಮಪಾದನಿಂದ ಇಂದ್ರದೇವತೆಯ ಯಜ್ಞವನ್ನು ಮಾಡಿಸಿದಾಗ ಸಂತಾನಹೀನನಾದ ಅವನಿಗೆ ಪುತ್ರನಾದನು. ಪುತ್ರಹೀನನಾದ ದಶರಥನೂ ಕೂಡ ಅವರ ಪ್ರಯತ್ನದಿಂದಲೇ ನಾಲ್ಕು ಮಕ್ಕಳನ್ನು ಪಡೆದನು. ರೋಮಪಾದನ ಪುತ್ರ ಚತುರಂಗನಾದನು. ಚತುರಂಗನಿಗೆ ಪೃಥುಲಾಕ್ಷನೆಂಬುವನು ಹುಟ್ಟಿದನು. ॥ ೬-೧೦ ॥ ಪೃಥುಲಾಕ್ಷನಿಗೆ ಬೃಹದ್ರಥ, ಬೃಹತ್ಕರ್ಮಾ ಮತ್ತು ಬೃಹದ್ಭಾನು ಎಂಬ ಮೂವರು ಪುತ್ರರಾದರು. ಬೃಹದ್ರಥನಿಗೆ ಬೃಹನ್ಮನಾ, ಬೃಹನ್ಮನನಿಗೆ ಜಯದ್ರಥನು ಹುಟ್ಟಿದನು. ॥ ೧೧ ॥

ವಿಜಯಸ್ತಸ್ಯ ಸಂಭೂತ್ಯಾಂ ತತೋ ಧೃತಿರಜಾಯತ ।
ತತೋ ಧೃತವ್ರತಸ್ತಸ್ಯ ಸತ್ಕರ್ಮಾಧಿರಥಸ್ತತಃ
॥ ೧೨ ॥

ಯೋಽಸೌ ಗಂಗಾತಟೇ ಕ್ರೀಡನ್ ಮಂಜೂಷಾಂತರ್ಗತಂ ಶಿಶುಮ್ ।
ಕುಂತ್ಯಾಪವಿದ್ಧಂ ಕಾನೀನಮನಪತ್ಯೋಽಕರೋತ್ಸುತಮ್
॥ ೧೩ ॥

ವೃಷಸೇನಃ ಸುತಸ್ತಸ್ಯ ಕರ್ಣಸ್ಯ ಜಗತೀಪತೇ ।
ದ್ರುಹ್ಯೋಶ್ಚ ತನಯೋ ಬಭ್ರುಃ ಸೇತುಸ್ತಸ್ಯಾತ್ಮಜಸ್ತತಃ
॥ ೧೪ ॥

ಆರಬ್ಧಸ್ತಸ್ಯ ಗಾಂಧಾರಸ್ತಸ್ಯ ಧರ್ಮಸ್ತತೋ ಧೃತಃ ।
ಧೃತಸ್ಯ ದುರ್ಮನಾಸ್ತಸ್ಮಾತ್ಪ್ರಚೇತಾಃ ಪ್ರಾಚೇತಸಂ ಶತಮ್
॥ ೧೫ ॥

ಮ್ಲೇಚ್ಛಾಧಿಪತಯೋಽಭೂವನ್ನುದೀಚೀಂ ದಿಶಮಾಶ್ರಿತಾಃ ।
ತುರ್ವಸೋಶ್ಚ ಸುತೋ ವಹ್ನಿರ್ವಹ್ನೇರ್ಭರ್ಗೋಽಥ ಭಾನುಮಾನ್
॥ ೧೬ ॥

ತ್ರಿಭಾನುಸ್ತತ್ಸುತೋಽಸ್ಯಾಪಿ ಕರಂಧಮ ಉದಾರಧೀಃ ।
ಮರುತಸ್ತತ್ಸುತೋಽಪುತ್ರಃ ಪುತ್ರಂ ಪೌರವಮನ್ವಭೂತ್
॥ ೧೭ ॥

ದುಷ್ಮಂತಃ ಸ ಪುನರ್ಭೇಜೇ ಸ್ವಂ ವಂಶಂ ರಾಜ್ಯಕಾಮುಕಃ ।
ಯಯಾತೇರ್ಜ್ಯೇಷ್ಠಪುತ್ರಸ್ಯ ಯದೋರ್ವಂಶಂ ನರರ್ಷಭ
॥ ೧೮ ॥

ವರ್ಣಯಾಮಿ ಮಹಾಪುಣ್ಯಂ ಸರ್ವಪಾಪಹರಂ ನೃಣಾಮ್ ।
ಯದೋರ್ವಂಶಂ ನರಃ ಶ್ರುತ್ವಾ ಸರ್ವಪಾಪೈಃ ಪ್ರಮುಚ್ಯತೇ
॥ ೧೯ ॥

ಯತ್ರಾವತೀರ್ಣೋ ಭಗವಾನ್ಪರಮಾತ್ಮಾ ನರಾಕೃತಿಃ ।
ಯದೋಃ ಸಹಸ್ರಜಿತ್ಕ್ರೋಷ್ಟಾ ನಲೋ ರಿಪುರಿತಿ ಶ್ರುತಾಃ
॥ ೨೦ ॥

ಚತ್ವಾರಃ ಸೂನವಸ್ತತ್ರ ಶತಜಿತ್ಪ್ರಥಮಾತ್ಮಜಃ ।
ಮಹಾಹಯೋ ವೇಣುಹಯೋ ಹೈಹಯಶ್ಚೇತಿ ತತ್ಸುತಾಃ
॥ ೨೧ ॥

ಧರ್ಮಸ್ತು ಹೈಹಯಸುತೋ ನೇತ್ರಃ ಕುಂತೇಃ ಪಿತಾ ತತಃ ।
ಸೋಹಂಜಿರಭವತ್ಕುಂತೇರ್ಮಹಿಷ್ಮಾನ್ಭದ್ರಸೇನಕಃ
॥ ೨೨ ॥

ದುರ್ಮದೋ ಭದ್ರಸೇನಸ್ಯ ಧನಕಃ ಕೃತವೀರ್ಯಸೂಃ ।
ಕೃತಾಗ್ನಿಃ ಕೃತವರ್ಮಾ ಚ ಕೃತೌಜಾ ಧನಕಾತ್ಮಜಾಃ
॥ ೨೩ ॥

ಅರ್ಜುನಃ ಕೃತವೀರ್ಯಸ್ಯ ಸಪ್ತದ್ವೀಪೇಶ್ವರೋಽಭವತ್ ।
ದತ್ತಾತ್ರೇಯಾದ್ಧರೇರಂಶಾತ್ ಪ್ರಾಪ್ತಯೋಗಮಹಾಗುಣಃ
॥ ೨೪ ॥

ಜಯದ್ರಥನಿಗೆ ಸಂಭೂತಿ ಎಂಬ ಪತ್ನಿಯಿದ್ದಳು. ಅವಳ ಗರ್ಭದಿಂದ ವಿಜಯನ ಜನ್ಮವಾಯಿತು. ವಿಜಯನಿಗೆ ಧೃತಿ, ಧೃತಿಗೆ ಧೃತವ್ರತ, ಧೃತವ್ರತನಿಗೆ ಸತ್ಕರ್ಮಾ, ಸತ್ಕರ್ಮನಿಗೆ ಅಧಿರಥನೆಂಬ ಪುತ್ರನಾದನು. ॥ ೧೨ ॥ ಅಧಿರಥನಿಗೆ ಸಂತಾನವಿರಲಿಲ್ಲ. ಒಂದುದಿನ ಅವನು ಗಂಗಾತೀರದಲ್ಲಿ ಕ್ರೀಡಿಸುತ್ತಿದ್ದಾಗ ಗಂಗಾನದಿಯಲ್ಲಿ ತೇಲಿಬರುತ್ತಿದ್ದ ಪೆಟ್ಟಿಗೆಯಲ್ಲಿ ಒಂದು ಹಸುಳೆಯನ್ನು ನೋಡಿದನು. ಕುಂತಿಯು ಅವನನ್ನು ಕನ್ಯಾವಸ್ಥೆಯಲ್ಲೇ ಸೂರ್ಯನ ಅನುಗ್ರಹದಿಂದ ಪಡೆದಿದ್ದಳು. ಲೋಕಾಪವಾದಕ್ಕೆ ಹೆದರಿ ಅವನನ್ನು ನದಿಯಲ್ಲಿ ತೇಲಿಬಿಟ್ಟಿದ್ದಳು. ಅಧಿರಥನು ಅವನನ್ನು ತನ್ನ ಪುತ್ರನನ್ನಾಗಿಸಿಕೊಂಡನು. ಅವನೇ ವಿಖ್ಯಾತನಾದ ಕರ್ಣನಾದನು. ॥ ೧೩ ॥ ಪರೀಕ್ಷಿತನೇ! ಕರ್ಣನಿಗೆ ವೃಷಸೇನನೆಂಬ ಮಗನಿದ್ದನು. ಯಯಾತಿಯ ಪುತ್ರನಾದ ದ್ರುಹ್ಯುವಿಗೆ ಬಭ್ರುವಿನ ಜನ್ಮವಾಯಿತು. ಬಭ್ರುವಿಗೆ ಸೇತು, ಸೇತುವಿಗೆ ಆರಬ್ಧ, ಆರಬ್ಧನಿಗೆ ಗಾಂಧಾರ, ಗಾಂಧಾರನಿಗೆ ಧರ್ಮ, ಧರ್ಮನಿಗೆ ಧೃತ, ಧೃತನಿಗೆ ದುರ್ಮನಾ, ದುರ್ಮನನಿಗೆ ಪ್ರಚೇತಾ ಎಂಬ ಪುತ್ರನಾದನು. ಪ್ರಚೇತಸನಿಗೆ ನೂರು ಮಕ್ಕಳಾದರು. ಇವರು ಉತ್ತರ ದಿಕ್ಕಿನಲ್ಲಿ ಮ್ಲೇಂಛರಿಗೆ ರಾಜರಾದರು. ಯಯಾತಿಯ ಪುತ್ರ ತುರ್ವಸುವಿಗೆ ವಹ್ನಿ, ವಹ್ನಿಗೆ ಭರ್ಗ, ಭರ್ಗನಿಗೆ ಭಾನುಮಾನ್, ಭಾನುಮಂತನಿಗೆ ತ್ರಿಭಾನು, ತ್ರಿಭಾನುವಿಗೆ ಉದಾರಬುದ್ಧಿಯ ಕರಂಧಮನು. ಕರಂಧಮನಿಗೆ ಮರುತನೆಂಬ ಪುತ್ರನಾದನು. ಮರುತ್ತನು ಸಂತಾನಹೀನನಾಗಿದ್ದನು. ಅದಕ್ಕಾಗಿ ಅವನು ಪೂರುವಂಶೀ ದುಷ್ಯಂತನನ್ನು ತನ್ನ ಪುತ್ರನನ್ನಾಗಿಸಿಕೊಂಡಿದ್ದನು. ॥ ೧೪- ೧೭ ॥ ಆದರೆ ದುಷ್ಯಂತನು ರಾಜ್ಯದ ಬಯಕೆಯಿಂದ ತನ್ನ ವಂಶಕ್ಕೆ ಮರಳಿದನು. ಪರೀಕ್ಷಿತನೇ! ಇನ್ನು ನಾನು ಯಯಾತಿಯ ಹಿರಿಯ ಮಗನಾದ ಯದುವಿನ ವಂಶವನ್ನು ವರ್ಣಿಸುವೆನು. ಆಲಿಸು. ॥ ೧೮ ॥

ಪರೀಕ್ಷಿತನೇ! ಯದು ಮಹಾರಾಜನ ವಂಶವು ಪರಮ ಪವಿತ್ರವಾದುದು ಹಾಗೂ ಮನುಷ್ಯರ ಸಮಸ್ತ ಪಾಪಗಳನ್ನೂ ಪರಿಹರಿಸುವಂತಹುದು. ಇದನ್ನು ಶ್ರವಣಿಸುವವನು ಸಮಸ್ತ ಪಾಪಗಳಿಂದ ಮುಕ್ತನಾಗುವನು. ॥ ೧೯ ॥

ಈ ವಂಶದಲ್ಲಿ ಸ್ವಯಂ ಭಗವಾನ್ ಪರಬ್ರಹ್ಮ ಶ್ರೀಕೃಷ್ಣನು ಮನುಷ್ಯರೂಪದಿಂದ ಅವತರಿಸಿದ್ದನು. ಯದುವಿಗೆ – ಸಹಸ್ರಜಿತ್, ಕ್ರೋಷ್ಟಾ, ನಲ ಮತ್ತು ರಿಪು ಎಂಬ ನಾಲ್ವರು ಪುತ್ರರಿದ್ದರು. ಸಹಸ್ರಜಿತ್ತುವಿಗೆ ಶತಜಿತ್‌ನಾದನು. ಶತಜಿತ್ತುವಿಗೆ – ಮಹಾಹಯ, ವೇಣುಹಯ, ಮತ್ತು ಹೈಹಯ ಎಂಬ ಮೂವರು ಪುತ್ರರಾದರು. ॥ ೨೦-೨೧ ॥ ಹೈಹಯನಿಗೆ ಧರ್ಮ, ಧರ್ಮನಿಗೆ ನೇತ್ರ, ನೇತ್ರನಿಗೆ ಕುಂತಿ, ಕುಂತಿಗೆ ಸೋಹಂಜಿ, ಸೋಹಂಜಿಗೆ ಮಹಿಷ್ಮಾನ್, ಮಹಿಷ್ಮಂತನಿಗೆ ಭದ್ರಸೇನನೆಂಬ ಪುತ್ರನಾದನು. ॥ ೨೨ ॥ ಭದ್ರಸೇನನಿಗೆ ದುರ್ಮದ ಮತ್ತು ಧನಕರೆಂಬ ಇಬ್ಬರು ಪುತ್ರರಿದ್ದರು. ಧನಕನಿಗೆ – ಕೃತವೀರ್ಯ, ಕೃತಾಗ್ನಿ, ಕೃತವರ್ಮಾ, ಕೃತೌಜಾ ಎಂಬ ನಾಲ್ಕು ಮಕ್ಕಳಿದ್ದರು. ॥ ೨೩ ॥ ಕೃತವೀರ್ಯನಿಗೆ ಅರ್ಜುನನಾಗಿದ್ದನು. ಅವನು ಸಪ್ತದ್ವೀಪಗಳಿಗೆ ಏಕಚ್ಛತ್ರ ಸಾಮ್ರಾಟನಾಗಿದ್ದನು. ಅವನು ಭಗವಂತನ ಅಂಶಾವತಾರವಾದ ದತ್ತಾತ್ರೇಯನಿಂದ ಯೋಗವಿದ್ಯೆ ಮತ್ತು ಅಣಿಮಾ, ಲಘಿಮಾ ಮುಂತಾದ ಮಹಾಸಿದ್ಧಿಗಳನ್ನು ಪಡೆದಿದ್ದನು. ॥ ೨೪ ॥

ನ ನೂನಂ ಕಾರ್ತವೀರ್ಯಸ್ಯ ಗತಿಂ ಯಾಸ್ಯಂತಿ ಪಾರ್ಥಿವಾಃ ।
ಯಜ್ಞದಾನತಪೋಯೋಗಶ್ರುತವೀರ್ಯಜಯಾದಿಭಿಃ ॥ ೨೫ ॥

ಪಂಚಾಶೀತಿಸಹಸ್ರಾಣಿ ಹ್ಯವ್ಯಾಹತಬಲಃ ಸಮಾಃ ।
ಅನಷ್ಟವಿತ್ತಸ್ಮರಣೋ ಬುಭುಜೇಽಕ್ಷಯ್ಯಷಡ್ವಸು ॥ ೨೬ ॥

ತಸ್ಯ ಪುತ್ರಸಹಸ್ರೇಷು ಪಂಚೈವೋರ್ವರಿತಾ ಮೃಧೇ ।
ಜಯಧ್ವಜಃ ಶೂರಸೇನೋ ವೃಷಭೋ ಮಧುರೂರ್ಜಿತಃ ॥ ೨೭ ॥

ಜಯಧ್ವಜಾತ್ತಾಲಜಂಘಸ್ತಸ್ಯ ಪುತ್ರಶತಂ ತ್ವಭೂತ್ ।
ಕ್ಷತ್ರಂ ಯತ್ತಾಲಜಂಘಾಖ್ಯಮೌರ್ವತೇಜೋಪಸಂಹೃತಮ್ ॥ ೨೮ ॥

ತೇಷಾಂ ಜ್ಯೇಷ್ಠೋ ವೀತಿಹೋತ್ರೋ
ವೃಷ್ಣಿಃ ಪುತ್ರೋ ಮಧೋಃ ಸ್ಮೃತಃ ।
ತಸ್ಯ ಪುತ್ರಶತಂ ತ್ವಾಸೀ-
ದ್ವೃಷ್ಣಿರ್ಜ್ಯೇಷ್ಠಂ ಯತಃಕುಲಮ್ ॥ ೨೯ ॥

ಮಾಧವಾ ವೃಷ್ಣಯೋ ರಾಜನ್ ಯಾದವಾಶ್ಚೇತಿ ಸಂಜ್ಞಿತಾಃ ।
ಯದುಪುತ್ರಸ್ಯ ಚ ಕ್ರೋಷ್ಟೋಃ ಪುತ್ರೋ ವೃಜಿನವಾಂಸ್ತತಃ ॥ ೩೦ ॥

ಶ್ವಾಹಿಸ್ತತೋ ರುಶೇಕುರ್ವೈ
ತಸ್ಯ ಚಿತ್ರರಥಸ್ತತಃ ।
ಶಶಬಿಂದುರ್ಮಹಾಯೋಗೀ
ಮಹಾಭೋಜೋ ಮಹಾನಭೂತ್ ॥ ೩೧ ॥

ಚತುರ್ದಶಮಹಾರತ್ನಶ್ಚಕ್ರವರ್ತ್ಯಪರಾಜಿತಃ ।
ತಸ್ಯ ಪತ್ನೀಸಹಸ್ರಾಣಾಂ ದಶಾನಾಂ ಸುಮಹಾಯಶಾಃ ॥ ೩೨ ॥

ದಶಲಕ್ಷಸಹಸ್ರಾಣಿ ಪುತ್ರಾಣಾಂ ತಾಸ್ವಜೀಜನತ್ ।
ತೇಷಾಂ ತು ಷಟ್ಪ್ರಧಾನಾನಾಂ ಪೃಥುಶ್ರವಸ ಆತ್ಮಜಃ ॥ ೩೩ ॥

ಪ್ರಪಂಚದಲ್ಲಿ ಯಾವ ಸಾಮ್ರಾಟನು ಯಜ್ಞ, ದಾನ, ತಪಸ್ಸು ಯೋಗ, ಶಾಸ್ತ್ರಜ್ಞಾನ, ಪರಾಕ್ರಮ, ವಿಜಯ ಮುಂತಾದ ಗುಣಗಳಿಂದ ಕೂಡಿದ ಕಾರ್ತವೀರ್ಯಾರ್ಜುನನಿಗೆ ಸರಿಸಮಾನನಾಗಲಾರನು. ಇದರಲ್ಲಿ ಸಂದೇಹವೇ ಇಲ್ಲ. ॥ ೨೫ ॥ ಸಹಸ್ರಾರ್ಜುನನು ಎಂಭತ್ತೈದುಸಾವಿರ ವರ್ಷಗಳವರೆಗೆ ಆರೂ ಇಂದ್ರಿಯಗಳಿಂದ ಅಕ್ಷಯ ವಿಷಯಗಳನ್ನು ಅನುಭವಿಸುತ್ತಾ ಇದ್ದನು. ಇದರ ನಡುವೆ ಅವನು ಶರೀರಬಲ ಕುಂದುವುದಾಗಲೀ, ಧನದ ನಾಶವಾಗುವುದಾಗಲೀ ಸ್ಮರಿಸಲೇ ಇಲ್ಲ. ಅವನ ಧನವು ನಾಶವಾಗುವುದಿರಲಿ, ಅವನ ಸ್ಮರಣೆಯಿಂದ ಕಳೆದುಹೋದ ಧನವು ಪುನಃ ದೊರಕುತ್ತಿತ್ತು.* ಅಂತಹ ಪ್ರಭಾವ ಅವನದಾಗಿತ್ತು. ॥ ೨೬ ॥ ಅವನ ಸಾವಿರ ಮಕ್ಕಳಲ್ಲಿ ಕೇವಲ ಐವರು ಮಾತ್ರ ಜೀವಂತರಾಗಿದ್ದರು. ಉಳಿದವರೆಲ್ಲರೂ ಪರಶುರಾಮನ ಕ್ರೋಧಾಗ್ನಿಯಲ್ಲಿ ಭಸ್ಮವಾಗಿ ಹೋಗಿದ್ದರು. ಉಳಿದ ಪುತ್ರರ ಹೆಸರುಗಳು – ಜಯಧ್ವಜ, ಶೂರಸೇನ, ವೃಷಭ, ಮಧು ಮತ್ತು ಊರ್ಜಿತ ಎಂದಿದ್ದವು. ॥ ೨೭ ॥

ಜಯಧ್ವಜನಿಗೆ ತಾಲಜಂಘನೆಂಬ ಪುತ್ರನಿದ್ದನು. ತಾಲಜಂಘನಿಗೆ ನೂರು ಪುತ್ರರಾದರು. ಅವರು 'ತಾಲಜಂಘ'ರೆಂಬ ಹೆಸರಿನಿಂದ ಆ ಕ್ಷತ್ರಿಯರು ಕರೆಸಿಕೊಂಡರು. ಮಹರ್ಷಿ ಔರ್ವರೆಂಬುವರ ಶಕ್ತಿಯಿಂದ ಸಗರರಾಜನು ಇವರನ್ನು ಸಂಹರಿಸಿಬಿಟ್ಟನು. ॥ ೨೮ ॥ ಆ ನೂರು ಪುತ್ರರಲ್ಲಿ ಹಿರಿಯವನು ವೀತಿಹೋತ್ರನಾಗಿದ್ದನು. ವೀತಿಹೋತ್ರನ ಮಗ ಮಧುವಾದನು. ಮಧುವಿಗೆ ನೂರು ಮಕ್ಕಳಿದ್ದರು. ಅವರಲ್ಲಿ ಎಲ್ಲರಿಗಿಂತ ಹಿರಿಯವನು ವೃಷ್ಣಿ ಎಂಬುವನಿದ್ದನು. ॥ ೨೯ ॥ ಪರೀಕ್ಷಿತನೇ! ಇವರೇ ಮಧು, ವೃಷ್ಣಿ ಮತ್ತು ಯದುವಿನ ಕಾರಣದಿಂದ ಈ ವಂಶವು ಮಾಧವ, ವಾರ್ಷ್ಣೇಯ ಮತ್ತು ಯಾದವ ಎಂಬ ಹೆಸರುಗಳಿಂದ ಪ್ರಸಿದ್ಧವಾಯಿತು. ಯದುನಂದನ ಕ್ರೋಷ್ಟುವಿಗೆ ವೃಜಿನವಾನ್‌ನೆಂಬ ಪುತ್ರನಿದ್ದನು. ॥ ೩೦ ॥ ವೃಜಿನಮಂತನಿಗೆ ಶ್ವಾಹಿ. ಶ್ವಾಹಿಗೆ ರುಶೇಕು, ರುಶೇಕುವಿಗೆ ಚಿತ್ರರಥ, ಚಿತ್ರರಥನಿಗೆ ಶಶಬಿಂದು ಎಂಬ ಪುತ್ರನಿದ್ದನು. ಅವನು ಪರಮಯೋಗಿಯೂ, ಮಹಾಭೋಗ ಐಶ್ವರ್ಯಸಂಪನ್ನನೂ, ಅತ್ಯಂತ ಪರಾಕ್ರಮಿಯೂ ಆಗಿದ್ದನು. ॥ ೩೧ ॥ ಅವನು ಹದಿನಾಲ್ಕು ರತ್ನಗಳಿಗೂ** ಒಡೆಯನೂ, ಚಕ್ರವರ್ತಿಯೂ, ಯುದ್ಧದಲ್ಲಿ ಅಜೇಯನೂ ಆಗಿದ್ದನು. ಪರಮಯಶಸ್ವೀ ಶಶಬಿಂದುವಿಗೆ ಹತ್ತುಸಾವಿರ ಪತ್ನಿಯರಿದ್ದರು. ಅವರಲ್ಲಿ ಒಬ್ಬೊಬ್ಬರಿಗೂ ಲಕ್ಷ-ಲಕ್ಷ ಸಂತಾನಗಳಿದ್ದವು. ಹೀಗೆ ಅವನು ನೂರುಕೋಟಿ ಮಕ್ಕಳನ್ನು ಪಡೆದನು. ಅವರಲ್ಲಿ ಪೃಥುಶ್ರವಾ ಮುಂತಾದ ಆರು ಪುತ್ರರು ಪ್ರಧಾನರಾಗಿದ್ದರು. ಪೃಥು ಶ್ರವಸ್ಸುವಿಗೆ

* ಕಳೆದುಹೋದ ವಸ್ತುವನ್ನು ಪಡೆದುಕೊಳ್ಳಲು ಈಗಲೂ ಕೆಳಗಿನ ಈ ಕಾರ್ತವೀರ್ಯಾರ್ಜುನ ಮಂತ್ರವನ್ನು ಪಠಿಸುತ್ತಾರೆ.

೧) ಹೈಹಯಾನಾಂ ಮಹಾರಾಜಃ ಕಾರ್ತವೀರ್ಯೇತಿ ವಿಶ್ರುತಃ । ಯಸ್ಯ ಸ್ಮರಣ ಮಾತ್ರೇಣ ಹೃತಂ ನಷ್ಟಂ ಚ ಲಭ್ಯತೇ ॥

೨) ಕಾರ್ತವೀರ್ಯಾರ್ಜುನೋ ನಾಮ ರಾಜಾ ಬಾಹು ಸಹಸ್ರವಾನ್ । ಯಸ್ಯಸ್ಮರಣಮಾತ್ರೇಣ ಗತಂ ನಷ್ಟಂ ಚ ಲಭ್ಯತೇ ॥

** ಆನೆ, ಕುದುರೆ, ರಥ, ಸ್ತ್ರೀ, ಬಾಣ, ಭಂಡಾರ, ಮಾಲೆ, ವಸ್ತ್ರ, ವೃಕ್ಷ, ಶಕ್ತಿ, ಪಾಶ, ಮಣಿ, ಛತ್ರ ಮತ್ತು ವಿಮಾನ – ಇವು ಹದಿನಾಲ್ಕು ರತ್ನಗಳು.

**ಧರ್ಮೋ ನಾಮೋಶನಾ ತಸ್ಯ ಹಯಮೇಧಶತಸ್ಯ ಯಾಟ್ ।**
**ತತ್ಸುತೋ ರುಚಕಸ್ತಸ್ಯ ಪಂಚಾಸನ್ನಾತ್ಮಜಾಃ ಶೃಣು ॥ ೩೪ ॥**

**ಪುರುಜಿದ್ರುಕ್ಮರುಕ್ಮೇಷು ಪೃಥುಜ್ಯಾಮಘಸಂಜ್ಞಿತಾಃ ।**
**ಜ್ಯಾಮಘಸ್ತ್ವಪ್ರಜೋಽಪ್ಯನ್ಯಾಂ ಭಾರ್ಯಾಂ ಶೈಬ್ಯಾಪತಿರ್ಭಯಾತ್ ॥ ೩೫ ॥**

**ನಾವಿಂದಚ್ಛತ್ರುಭವನಾದ್ಭೋಜ್ಯಾಂ ಕನ್ಯಾಮಹಾರಷೀತ್ ।**
**ರಥಸ್ಥಾಂ ತಾಂ ನಿರೀಕ್ಷ್ಯಾಹ ಶೈಬ್ಯಾ ಪತಿಮಮರ್ಷಿತಾ ॥ ೩೬ ॥**

**ಕೇಯಂ ಕುಹಕ ಮತ್ಸ್ಥಾನಂ ರಥಮಾರೋಪಿತೇತಿ ವೈ ।**
**ಸ್ನುಷಾ ತವೇತ್ಯಭಿಹಿತೇ ಸ್ಮಯಂತೀ ಪತಿಮಬ್ರವೀತ್ ॥ ೩೭ ॥**

**ಅಹಂ ವಂಧ್ಯಾಽಸಪತ್ನೀ ಚ ಸ್ನುಷಾ ಮೇ ಯುಜ್ಯತೇ ಕಥಮ್ ।**
**ಜನಯಿಷ್ಯಸಿ ಯಂ ರಾಜ್ಞೀ ತಸ್ಯೇಯಮುಪಯುಜ್ಯತೇ ॥ ೩೮ ॥**

**ಅನ್ವಮೋದಂತ ತದ್ವಿಶ್ವೇದೇವಾಃ ಪಿತರ ಏವ ಚ ।**
**ಶೈಬ್ಯಾ ಗರ್ಭಮಧಾತ್ಕಾಲೇ ಕುಮಾರಂ ಸುಷುವೇ ಶುಭಮ್ ।**
**ಸ ವಿದರ್ಭ ಇತಿ ಪ್ರೋಕ್ತ ಉಪಯೇಮೇ ಸ್ನುಷಾಂ ಸತೀಮ್ ॥ ೩೯ ॥**

ಧರ್ಮನೆಂಬ ಪುತ್ರನಿದ್ದನು. ಧರ್ಮನಿಗೆ ಉಶನಾ ಎಂಬ ಪುತ್ರನಾದನು. ಅವನು ನೂರು ಅಶ್ವಮೇಧಗಳನ್ನು ಮಾಡಿದ್ದನು. ಉಶನನಿಗೆ ರುಚಕನೆಂಬ ಪುತ್ರನಾದನು. ರುಚಕನಿಗೆ ಐವರು ಪುತ್ರರಾದರು. ಅವರ ಹೆಸರು ಇಂತಿದೆ. ॥ ೩೨-೩೪ ॥ ಪುರುಜಿತ್, ರುಕ್ಮ, ರುಕ್ಮೇಷು, ಪೃಥು ಮತ್ತು ಜ್ಯಾಮಘ. ಜ್ಯಾಮಘನ ಪತ್ನಿಯ ಹೆಸರು ಶೈಬ್ಯಾ ಎಂದಿತ್ತು. ಜ್ಯಾಮಘನಿಗೆ ಅನೇಕ ದಿನಗಳವರೆಗೆ ಸಂತಾನವಾಗಲಿಲ್ಲ, ಆದರೆ ಅವನು ತನ್ನ ಪತ್ನಿಯ ಭಯದಿಂದ ಇನ್ನೊಂದು ಮದುವೆ ಮಾಡಿಕೊಳ್ಳಲಿಲ್ಲ. ಒಮ್ಮೆ ಅವನು ತನ್ನ ಶತ್ರುವಿನ ಮನೆಯಿಂದ ಭೋಜ್ಯಾ ಎಂಬ ಕನ್ಯೆಯನ್ನು ಕದ್ದು ತಂದನು. ಶೈಬ್ಯಳು ಪತಿಯ ರಥದಲ್ಲಿ ಆ ಕನ್ಯೆಯನ್ನು ನೋಡಿದಾಗ ಅವಳು ಕೆರಳಿ ತನ್ನ ಪತಿಯಲ್ಲಿ ಕೇಳಿದಳು – 'ಕಪಟಿಯೇ ! ನಾನು ಕುಳಿತುಕೊಳ್ಳುವ ಸ್ಥಳದಲ್ಲಿ ಇಂದು ಯಾರನ್ನು ಕುಳ್ಳಿರಿಸಿ ತರುತ್ತಿರುವೆ ?' ಜ್ಯಾಮಘನು – 'ಇವಳಾದರೋ ನಿನ್ನ ಸೊಸೆಯಾಗಿದ್ದಾಳೆ' ಎಂದು ಹೇಳಿದನು. ಶೈಬ್ಯಳು ಮುಗುಳ್ನಕ್ಕು ಪತಿಯಲ್ಲಿ ಹೇಳಿದಳು – ॥ ೩೫-೩೭ ॥ 'ನಾನಾದರೋ ಜನ್ಮತಃ ಬಂಜೆಯಾಗಿರುವೆನು. ನನಗೆ ಸವತಿಯೂ ಯಾರೂ ಇಲ್ಲದಾಗಿರುವಾಗ ಇವಳು ಸೊಸೆ ಹೇಗಾಗಬಲ್ಲಳು ?' ಜ್ಯಾಮಘನು – 'ರಾಣೀ ! ನಿನಗೆ ಹುಟ್ಟಲಿರುವ ಮಗನ ಪತ್ನಿಯಾಗುವಳು ಇವಳು' ಎಂದು ಹೇಳಿದನು. ॥ ೩೮ ॥ ಜ್ಯಾಮಘರಾಜನ ಈ ಮಾತನ್ನು ವಿಶ್ವೇದೇವತೆಗಳು ಮತ್ತು ಪಿತೃಗಳು ಅನುಮೋದಿಸಿದರು. ಇವರಿಂದಾಗಿ ಸಕಾಲದಲ್ಲಿ ಶೈಬ್ಯಾಳು ಗರ್ಭವತಿಯಾಗಿ, ಅವಳು ಬಹಳ ಸುಂದರವಾದ ಬಾಲಕನಿಗೆ ಜನ್ಮ ನೀಡಿದಳು. ಅವನ ಹೆಸರು ವಿದರ್ಭವೆಂದಾಯ್ತು. ಅವನು ಶೈಬ್ಯಳ ಸಾಧ್ವಿಯಾದ ಸೊಸೆಯಾದ ಭೋಜ್ಯಾಳೊಂದಿಗೆ ವಿವಾಹವಾದನು. ॥ ೩೯ ॥

***ಇಪ್ಪತ್ತಮೂರನೆಯ ಅಧ್ಯಾಯವು ಮುಗಿಯಿತು. ॥ ೨೩ ॥***

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮಸ್ಕಂಧೇ**
**ಯದುವಂಶಾನುವರ್ಣನೇ ತ್ರಯೋವಿಂಶೋಽಧ್ಯಾಯಃ ॥ ೨೩ ॥**

# ಇಪ್ಪತ್ತನಾಲ್ಕನೆಯ ಅಧ್ಯಾಯ

## ವಿದರ್ಭವಂಶದ ವರ್ಣನೆ

*ಶ್ರೀಶುಕ ಉವಾಚ*

**ತಸ್ಯಾಂ ವಿದರ್ಭೋಽಜನಯತ್ಪುತ್ರೌ ನಾಮ್ನಾ ಕುಶಕ್ರಥೌ ।**
**ತೃತೀಯಂ ರೋಮಪಾದಂ ಚ ವಿದರ್ಭಕುಲನಂದನಮ್ ॥ ೧ ॥**

**ರೋಮಪಾದಸುತೋ ಬಭ್ರುರ್ಬಭ್ರೋಃ ಕೃತಿರಜಾಯತ ।**
**ಉಶಿಕಸ್ತತ್ಸುತಸ್ತಸ್ಮಾಚ್ಚೇದಿಶ್ಚೈದ್ಯಾದಯೋ ನೃಪ ॥ ೨ ॥**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ ! ವಿದರ್ಭರಾಜನು ಪತ್ನಿಯಾದ ಭೋಜ್ಯಾಳಿಂದ ಕುಶ, ಕ್ರಥ ಮತ್ತು ರೋಮಪಾದರೆಂಬ ಮೂವರು ಪುತ್ರರನ್ನು ಪಡೆದನು. ರೋಮಪಾದನು ವಿದರ್ಭವಂಶದಲ್ಲಿ ಅತ್ಯಂತ ಶ್ರೇಷ್ಠರಾಜನಾಗಿದ್ದನು. ॥ ೧ ॥ ರೋಮಪಾದನಿಗೆ ಬಭ್ರು, ಬಭ್ರುವಿಗೆ ಕೃತಿ, ಕೃತಿಗೆ ಉಶಿಕ, ಉಶಿಕನಿಗೆ ಚೇದಿ ಎಂಬುವವನಾದನು. ರಾಜನೇ ! ಈ ಚೇದಿಯ ವಂಶದಲ್ಲೇ ದಮಘೋಷ ಹಾಗೂ ಶಿಶುಪಾಲರೇ ಮುಂತಾದವರಾದರು. ॥ ೨ ॥

ಕ್ರಥಸ್ಯ ಕುಂತಿಃ ಪುತ್ರೋಽಭೂದ್ಧೃಷ್ಟಿಸ್ತಸ್ಯಾಥ ನಿರ್ವೃತಿಃ ।
ತತೋ ದಶಾರ್ಹೋ ನಾಮ್ನಾಭೂತ್ತಸ್ಯ ವ್ಯೋಮಃ ಸುತಸ್ತತಃ ॥ ೩ ॥

ಜೀಮೂತೋ ವಿಕೃತಿಸ್ತಸ್ಯ ಯಸ್ಯ ಭೀಮರಥಃ ಸುತಃ ।
ತತೋ ನವರಥಃ ಪುತ್ರೋ ಜಾತೋ ದಶರಥಸ್ತತಃ ॥ ೪ ॥

ಕರಂಭಿಃ ಶಕುನೇಃ ಪುತ್ರೋ ದೇವರಾತಸ್ತದಾತ್ಮಜಃ ।
ದೇವಕ್ಷತ್ರಸ್ತತಸ್ತಸ್ಯ ಮಧುಃ ಕುರುವಶಾದನುಃ ॥ ೫ ॥

ಪುರುಹೋತ್ರಸ್ತ್ವನೋಃ ಪುತ್ರಸ್ತಸ್ಯಾಯುಃ ಸಾತ್ವತಸ್ತತಃ ।
ಭಜಮಾನೋ ಭಜಿರ್ದಿವ್ಯೋ ವೃಷ್ಣಿರ್ದೇವಾವೃಧೋಽಂಧಕಃ ॥ ೬ ॥

ಸಾತ್ವತಸ್ಯ ಸುತಾಃ ಸಪ್ತ ಮಹಾಭೋಜಶ್ಚ ಮಾರಿಷ ।
ಭಜಮಾನಸ್ಯ ನಿಮ್ಲೋಚಿಃ ಕಿಂಕಿಣೋ ಧೃಷ್ಟಿರೇವ ಚ ॥ ೭ ॥

ಏಕಸ್ಯಾಮಾತ್ಮಜಾಃ ಪತ್ನ್ಯಾಮನ್ಯಸ್ಯಾಂ ಚ ತ್ರಯಃ ಸುತಾಃ ।
ಶತಾಜಿಚ್ಚ ಸಹಸ್ರಾಜಿದಯುತಾಜಿದಿತಿ ಪ್ರಭೋ ॥ ೮ ॥

ಬಭ್ರುರ್ದೇವಾವೃಧಸುತಸ್ತಯೋಃ ಶ್ಲೋಕೌ ಪಠಂತ್ಯಮೂ ।
ಯಥೈವ ಶೃಣುಮೋ ದೂರಾತ್ಸಂಪಶ್ಯಾಮಸ್ತಥಾಂತಿಕಾತ್ ॥ ೯ ॥

ಬಭ್ರುಃ ಶ್ರೇಷ್ಠೋ ಮನುಷ್ಯಾಣಾಂ ದೇವೈರ್ದೇವಾವೃಧಃ ಸಮಃ ।
ಪುರುಷಾಃ ಪಂಚಷಷ್ಟಿಶ್ಚ ಷಟ್ಸಹಸ್ರಾಣಿ ಚಾಷ್ಟ ಚ ॥ ೧೦ ॥

ಯೇಽಮೃತತ್ವಮನುಪ್ರಾಪ್ತಾ ಬಭ್ರೋರ್ದೇವಾವೃಧಾದಪಿ ।
ಮಹಾಭೋಜೋಽಪಿ ಧರ್ಮಾತ್ಮಾ ಭೋಜಾ ಆಸಂಸ್ತದನ್ವಯೇ ॥ ೧೧ ॥

ವೃಷ್ಣೇಃ ಸುಮಿತ್ರಃ ಪುತ್ರೋಽಭೂದ್ಯುಧಾಜಿಚ್ಚ ಪರಂತಪ ।
ಶಿನಿಸ್ತಸ್ಯಾನಮಿತ್ರಶ್ಚ ನಿಮ್ನೋಽಭೂದನಮಿತ್ರತಃ ॥ ೧೨ ॥

ಸತ್ರಾಜಿತಃ ಪ್ರಸೇನಶ್ಚ ನಿಮ್ನಸ್ಯಾಪ್ಯಾಸತುಃ ಸುತೌ ।
ಅನಮಿತ್ರಸುತೋ ಯೋಽನ್ಯಃ ಶಿನಿಸ್ತಸ್ಯಾಥ ಸತ್ಯಕಃ ॥ ೧೩ ॥

ಯುಯುಧಾನಃ ಸಾತ್ಯಕಿರ್ವೈ ಜಯಸ್ತಸ್ಯ ಕುಣಿಸ್ತತಃ ।
ಯುಗಂಧರೋಽನಮಿತ್ರಸ್ಯ ವೃಷ್ಣಿಃ ಪುತ್ರೋಽಪರಸ್ತತಃ ॥ ೧೪ ॥

ಕ್ರಥನಿಗೆ ಕುಂತಿ ಎಂಬ ಪುತ್ರನಾದನು. ಕುಂತಿಗೆ ಧೃಷ್ಟಿ, ಧೃಷ್ಟಿಗೆ ನಿರ್ವೃತಿ, ನಿರ್ವೃತಿಗೆ ದಶಾರ್ಹ, ದಶಾರ್ಹನಿಗೆ ವ್ಯೋಮನೆಂಬುವನು ಹುಟ್ಟಿದನು. ॥ ೩ ॥ ವ್ಯೋಮನಿಂದ ಜೀಮೂತ, ಜೀಮೂತನಿಗೆ ವಿಕೃತಿ, ವಿಕೃತಿಗೆ ಭೀಮರಥ, ಭೀಮರಥನಿಗೆ ನವರಥ, ನವರಥನಿಗೆ ದಶರಥನು ಹುಟ್ಟಿದನು. ॥ ೪ ॥ ದಶರಥನಿಂದ ಶಕುನಿ, ಶಕುನಿಯಿಂದ ಕರಂಭಿ, ಕರಂಭಿಯಿಂದ ದೇವರಾತ, ದೇವರಾತನಿಂದ ದೇವಕ್ಷತ್ರ, ದೇವಕ್ಷತ್ರನಿಂದ ಮಧು, ಮಧುವಿನಿಂದ ಕುರುವಶ, ಕುರುವಶನಿಂದ ಅನು ಹುಟ್ಟಿದನು. ॥ ೫ ॥ ಅನುವಿನಿಂದ ಪುರುಹೋತ್ರ, ಪುರುಹೋತ್ರನಿಂದ ಆಯು ಮತ್ತು ಆಯುವಿನಿಂದ ಸಾತ್ವತನ ಜನ್ಮವಾಯಿತು. ಪರೀಕ್ಷಿತನೇ! ಸಾತ್ವತನಿಗೆ – ಭಜಮಾನ, ಭಜಿ, ದಿವ್ಯ, ವೃಷ್ಣಿ, ದೇವಾವೃಧ, ಅಂಧಕ ಮತ್ತು ಮಹಾಭೋಜರೆಂಬ ಏಳು ಪುತ್ರರು ಉದಿಸಿದರು. ಭಜಮಾನನಿಗೆ ಇಬ್ಬರು ಪತ್ನಿಯರಿದ್ದರು. ಒಬ್ಬಳಿಂದ – ನಿಮ್ಲೋಚಿ, ಕಿಂಕಿಣ ಮತ್ತು ಧೃಷ್ಟಿ ಎಂಬ ಮೂವರು ಪುತ್ರರಾದರು. ಇನ್ನೊಬ್ಬಳಿಂದ – ಶತಾಜಿತ್, ಸಹಸ್ರಾಜಿತ್ ಮತ್ತು ಅಯುತಾಜಿತ್ ಎಂಬ ಮೂವರು ಪುತ್ರರಾದರು. ॥ ೬–೮ ॥ ಸಾತ್ವತನ ಐದನೆಯ ಮಗನಾದ ದೇವಾವೃಧನಿಗೆ ಬಭ್ರು ಎಂಬ ಮಗನಿದ್ದನು. ದೇವಾವೃಧ ಮತ್ತು ಬಭ್ರುಗಳ ಸಂಬಂಧದಲ್ಲಿ ಈ ಗಾಥೆಯು ಹೇಳಲ್ಪಡುತ್ತದೆ – 'ನಾವು ದೂರದಲ್ಲಿ ಜನರ ಬಾಯಿಂದ ಕೇಳಿದ ಸದ್ಗುಣಗಳೇ ಇವರಲ್ಲಿ ಪ್ರತ್ಯಕ್ಷದಲ್ಲಿಯೂ ಕೂಡ ನೋಡುತ್ತಿದ್ದೇವೆ. ॥ ೯ ॥ ಬಭ್ರು ಮನುಷ್ಯರಲ್ಲಿ ಶ್ರೇಷ್ಠನಾಗಿದ್ದಾನೆ ಮತ್ತು ದೇವಾವೃಧನು ದೇವತೆಗಳಿಗೆ ಸಮಾನನಾಗಿದ್ದಾನೆ. ಇದರ ಕಾರಣ – ಬಭ್ರು ಮತ್ತು ದೇವಾವೃಧರಿಂದ ಉಪದೇಶಪಡೆದು ಹದಿನಾಲ್ಕು ಸಾವಿರದ ಅರವತ್ತೈದು ಮಂದಿಗಳು ಪರಮಪದವನ್ನು ಪಡೆದುಕೊಂಡಿರುವರು. ಸಾತ್ವತನ ಪುತ್ರರಲ್ಲಿ ಮಹಾಭೋಜನೂ ಕೂಡ ಮಹಾಧರ್ಮಾತ್ಮನಾಗಿದ್ದನು. ಅವನ ವಂಶದಲ್ಲೇ ಭೋಜ ವಂಶೀಯ ಯಾದವರಾದರು. ॥ ೧೦–೧೧ ॥

ಪರೀಕ್ಷಿತನೇ! ವೃಷ್ಣಿಗೆ – ಸಮಿತ್ರ ಮತ್ತು ಯುಧಾಜಿತ್ತು ಎಂಬ ಇಬ್ಬರು ಪುತ್ರರಾದರು. ಯುಧಾಜಿತ್ತುವಿಗೆ ಶಿನಿ ಮತ್ತು ಅನಮಿತ್ರರೆಂಬ ಇಬ್ಬರು ಮಕ್ಕಳಿದ್ದರು. ಅನಮಿತ್ರನಿಂದ ನಿಮ್ನನ ಜನ್ಮವಾಯಿತು. ॥ ೧೨ ॥ ಸತ್ರಾಜಿತ್ ಹಾಗೂ ಪ್ರಸೇನರೆಂಬ ಪ್ರಸಿದ್ಧರಾದ ಯಾದವರು ನಿಮ್ನನ ಪುತ್ರರೇ ಆಗಿದ್ದರು. ಅನಮಿತ್ರನಿಗೆ ಇನ್ನೊಬ್ಬ ಶಿನಿ ಎಂಬ ಮಗನಿದ್ದನು. ಶಿನಿಯಿಂದ ಸತ್ಯಕನ ಜನ್ಮವಾಯಿತು. ॥ ೧೩ ॥ ಇದೇ ಸತ್ಯಕನ ಪುತ್ರನೇ ಯುಯುಧಾನನಾಗಿದ್ದನು. ಅವನು ಸಾತ್ಯಕಿ ಎಂಬ ಹೆಸರಿನಿಂದಲೂ ಪ್ರಸಿದ್ಧನಾಗಿ ಇರುವನು. ಸಾತ್ಯಕಿಯ ಮಗ ಜಯ, ಜಯನಿಗೆ ಕುಣಿ ಮತ್ತು ಕುಣಿಗೆ ಯುಗಂಧರನೆಂಬ ಪುತ್ರನು ಹುಟ್ಟಿದನು. ಅನಮಿತ್ರನ ಮೂರನೆಯ ಮಗನ ಹೆಸರು ವೃಷ್ಣಿಯೆಂದಿತ್ತು. ವೃಷ್ಣಿಗೆ ಶ್ವಫಲ್ಕ ಮತ್ತು ಚಿತ್ರರಥರೆಂಬ ಇಬ್ಬರು ಪುತ್ರರಿದ್ದರು. ಶ್ವಫಲ್ಕನ ಪತ್ನಿಯ ಹೆಸರು ಗಾಂದಿನೀ ಎಂದಿತ್ತು. ಅವರಲ್ಲಿ ಅತ್ಯಂತ ಶ್ರೇಷ್ಠ ಅಕ್ರೂರನಲ್ಲದೆ – ಅಸಂಗ, ಸಾರಮೇಯ, ಮೃದುರ, ಮೃದುವಿದ್, ಗಿರಿ, ಧರ್ಮವೃದ್ಧ, ಸುಕರ್ಮಾ, ಕ್ಷೇತ್ರೋಪೇಕ್ಷ, ಅರಿಮರ್ದನ,

ಶ್ವಫಲ್ಕಶ್ಚಿತ್ರರಥಶ್ಚ ಗಾಂದಿನ್ಯಾಂ ಚ ಶ್ವಫಲ್ಕತಃ ।
ಅಕ್ರೂರಪ್ರಮುಖಾ ಆಸನ್ಪುತ್ರಾ ದ್ವಾದಶ ವಿಶ್ರುತಾಃ ॥ ೧೫ ॥

ಆಸಂಗಃ ಸಾರಮೇಯಶ್ಚ ಮೃದುರೋ ಮೃದುವಿದ್ಗಿರಿಃ ।
ಧರ್ಮವೃದ್ಧಃ ಸುಕರ್ಮಾ ಚ ಕ್ಷೇತ್ರೋಪೇಕ್ಷೋಽರಿಮರ್ದನಃ ॥ ೧೬ ॥

ಶತ್ರುಘ್ನೋ ಗಂಧಮಾದಶ್ಚ ಪ್ರತಿಬಾಹುಶ್ಚ ದ್ವಾದಶ ।
ತೇಷಾಂ ಸ್ವಸಾ ಸುಚೀರಾಖ್ಯಾ ದ್ವಾವಕ್ರೂರಸುತಾವಪಿ ॥ ೧೭ ॥

ದೇವವಾನುಪದೇವಶ್ಚ ತಥಾ ಚಿತ್ರರಥಾತ್ಮಜಾಃ ।
ಪೃಥುರ್ವಿದೂರಥಾದ್ಯಾಶ್ಚ ಬಹವೋ ವೃಷ್ಣಿನಂದನಾಃ ॥ ೧೮ ॥

ಕುಕುರೋ ಭಜಮಾನಶ್ಚ ಶುಚಿಃ ಕಂಬಲಬರ್ಹಿಷಃ ।
ಕುಕುರಸ್ಯ ಸುತೋ ವಹ್ನಿರ್ವಿಲೋಮಾ ತನಯಸ್ತತಃ ॥ ೧೯ ॥

ಕಪೋತರೋಮಾ ತಸ್ಯಾನುಃ ಸಖಾ ಯಸ್ಯ ಚ ತುಂಬುರುಃ ।
ಅಂಧಕೋ ದುಂದುಭಿಸ್ತಸ್ಮಾದರಿದ್ಯೋತಃ ಪುನರ್ವಸುಃ ॥ ೨೦ ॥

ತಸ್ಯಾಹುಕಶ್ಚಾಹುಕೀ ಚ ಕನ್ಯಾ ಚೈವಾಹುಕಾತ್ಮಜೌ ।
ದೇವಕಶ್ಚೋಗ್ರಸೇನಶ್ಚ ಚತ್ವಾರೋ ದೇವಕಾತ್ಮಜಾಃ ॥ ೨೧ ॥

ದೇವವಾನುಪದೇವಶ್ಚ ಸುದೇವೋ ದೇವವರ್ಧನಃ ।
ತೇಷಾಂ ಸ್ವಸಾರಃ ಸಪ್ತಾಸನ್ ಧೃತದೇವಾದಯೋ ನೃಪ ॥ ೨೨ ॥

ಶಾಂತಿದೇವೋಪದೇವಾ ಚ ಶ್ರೀದೇವಾ ದೇವರಕ್ಷಿತಾ ।
ಸಹದೇವಾ ದೇವಕೀ ಚ ವಸುದೇವ ಉವಾಹ ತಾಃ ॥ ೨೩ ॥

ಕಂಸಃ ಸುನಾಮಾ ನ್ಯಗ್ರೋಧಃ ಕಂಕಃ ಶಂಕುಃ ಸುಹೂಸ್ತಥಾ ।
ರಾಷ್ಟ್ರಪಾಲೋಽಥ ಸೃಷ್ಟಿಶ್ಚ ತುಷ್ಟಿಮಾನೌಗ್ರಸೇನಯಃ ॥ ೨೪ ॥

ಕಂಸಾ ಕಂಸವತೀ ಕಂಕಾ ಶೂರಭೂ ರಾಷ್ಟ್ರಪಾಲಿಕಾ ।
ಉಗ್ರಸೇನದುಹಿತರೋ ವಸುದೇವಾನುಜಸ್ತ್ರಿಯಃ ॥ ೨೫ ॥

ಶೂರೋ ವಿದೂರಥಾದಾಸೀದ್ಭಜಮಾನಃ ಸುತಸ್ತತಃ ।
ಶಿನಿಸ್ತಸ್ಮಾತ್ಸ್ವಯಂಭೋಜೋ ಹೃದೀಕಸ್ತತ್ಸುತೋ ಮತಃ ॥ ೨೬ ॥

ದೇವಬಾಹುಃ ಶತಧನುಃ ಕೃತವರ್ಮೇತಿ ತತ್ಸುತಾಃ ।
ದೇವಮೀಢಸ್ಯ ಶೂರಸ್ಯ ಮಾರಿಷಾ ನಾಮ ಪತ್ನ್ಯಭೂತ್ ॥ ೨೭ ॥

ಶತ್ರುಘ್ನ, ಗಂಧಮಾದನ, ಪ್ರತಿಬಾಹು ಎಂಬ ಹನ್ನೆರಡು ಪುತ್ರರು ಹುಟ್ಟಿದರು. ಇವರಿಗೆ ಸುಚೀರಾ ಎಂಬ ಓರ್ವ ತಂಗಿಯೂ ಇದ್ದಳು. ಅಕ್ರೂರನಿಗೆ – ದೇವವಾನ್ ಮತ್ತು ಉಪದೇವರೆಂಬ ಇಬ್ಬರು ಪುತ್ರರಿದ್ದರು. ಶ್ವಫಲ್ಕನ ತಮ್ಮ ಚಿತ್ರರಥನಿಗೆ ಪೃಥು, ವಿದೂರಥ ಮೊದಲಾದ ಅನೇಕ ಪುತ್ರರಾದರು. ಅವರೆಲ್ಲರೂ ವೃಷ್ಣಿವಂಶಿಯರಲ್ಲಿ ಶ್ರೇಷ್ಠರೆಂದು ಪರಿಗಣಿಸಲ್ಪಟ್ಟಿರುವರು. ॥ ೧೪-೧೮ ॥ ಸಾತ್ವತನ ಪುತ್ರನಾದ ಅಂಧಕನಿಗೆ ಕುಕುರ, ಭಜಮಾನ, ಶುಚಿ, ಕಂಬಲಬರ್ಹಿ ಎಂಬ ನಾಲ್ವರು ಪುತ್ರರಾದರು. ಅವರಲ್ಲಿ ಕುಕುರನ ಪುತ್ರ ವಹ್ನಿ, ವಹ್ನಿಗೆ ವಿಲೋಮಾ, ವಿಲೋಮನಿಗೆ ಕಪೋತರೋಮಾ, ಕಪೋತರೋಮನಿಗೆ ಅನು ಎಂಬುವನು ಹುಟ್ಟಿದನು. ತುಂಬುರು ಗಂಧರ್ವನೊಂದಿಗೆ ಅವನಿಗೆ ಅತ್ಯಂತ ಮಿತ್ರತೆ ಇತ್ತು. ಅನುವಿನ ಪುತ್ರ ಅಂಧಕ, ಅಂಧಕನಿಗೆ ದುಂದುಭಿ, ದುಂದುಭಿಗೆ ಅರಿದ್ಯೋತ, ಅರಿದ್ಯೋತನಿಗೆ ಪುನರ್ವಸು, ಪುನರ್ವಸುವಿಗೆ ಆಹುಕನೆಂಬ ಓರ್ವ ಪುತ್ರನೂ, ಆಹುಕಿ ಎಂಬ ಓರ್ವ ಕನ್ಯೆಯು ಹುಟ್ಟಿದರು. ಆಹುಕನಿಗೆ ದೇವಕ ಮತ್ತು ಉಗ್ರಸೇನರೆಂಬ ಇಬ್ಬರು ಪುತ್ರರಾದರು. ದೇವಕನಿಗೆ ನಾಲ್ಕು ಮಕ್ಕಳಾದರು. ॥ ೧೯-೨೧ ॥ ದೇವವಾನ್, ಉಪದೇವ, ಸುದೇವ ಮತ್ತು ದೇವವರ್ಧನ ಇವರು ದೇವಕನ ಮಕ್ಕಳು. ಇವರಿಗೆ – ಧೃತದೇವಾ, ಶಾಂತಿದೇವಾ, ಉಪದೇವಾ, ಶ್ರೀದೇವಾ, ದೇವರಕ್ಷಿತಾ, ಸಹದೇವಾ ಮತ್ತು ದೇವಕಿ ಎಂಬ ಏಳುಮಂದಿ ತಂಗಿಯರಿದ್ದರು. ವಸುದೇವನು ಇವರೆಲ್ಲರೊಂದಿಗೆ ವಿವಾಹವಾಗಿದ್ದನು. ॥ ೨೨-೨೩ ॥ ಉಗ್ರಸೇನನಿಗೆ – ಕಂಸ, ಸುನಾಮಾ, ನ್ಯಗ್ರೋಧ, ಕಂಕ, ಶಂಕು, ಸುಹೂ, ರಾಷ್ಟ್ರಪಾಲ, ಸೃಷ್ಟಿ ಮತ್ತು ತುಷ್ಟಿಮಾನ್ ಎಂಬ ಒಂಭತ್ತು ಮಕ್ಕಳಿದ್ದರು. ॥ ೨೪ ॥ ಉಗ್ರಸೇನನಿಗೆ – ಕಂಸಾ, ಕಂಸವತೀ, ಕಂಕಾ, ಶೂರಭೂ, ರಾಷ್ಟ್ರಪಾಲಿಕಾ ಎಂಬ ಐದು ಮಂದಿ ಕನ್ಯೆಯರೂ ಇದ್ದರು. ಇವರ ವಿವಾಹವು – ದೇವಭಾಗ ಮೊದಲಾದ ವಸುದೇವನ ತಮ್ಮಂದಿರೊಂದಿಗೆ ಆಗಿತ್ತು. ॥ ೨೫ ॥

ಚಿತ್ರರಥನ ಪುತ್ರನಾದ ವಿದೂರಥನಿಗೆ ಶೂರ, ಶೂರನಿಂದ ಭಜಮಾನ, ಭಜಮಾನನಿಂದ ಶಿನಿ, ಶಿನಿಯಿಂದ ಸ್ವಯಂಭೋಜ, ಸ್ವಯಂಭೋಜನಿಂದ ಹೃದೀಕ ಹುಟ್ಟಿದರು. ॥ ೨೬ ॥

ಹೃದೀಕನಿಗೆ – ದೇವಬಾಹು, ಶತಧನ್ವಾ, ಕೃತವರ್ಮಾ ಎಂಬ ಮೂರು ಮಕ್ಕಳಾದರು. ದೇವಮೀಢನ ಪುತ್ರನಾದ ಶೂರನ ಪತ್ನಿಯ ಹೆಸರು ಮಾರಿಷಾ ಎಂದಿತ್ತು. ॥ ೨೭ ॥ ಶೂರಸೇನನು ಮಾರಿಷಾಳಿಂದ ವಸುದೇವ, ದೇವಭಾಗ, ದೇವಶ್ರವಾ, ಆನಕ, ಸೃಂಜಯ, ಶ್ಯಾಮಕ, ಕಂಕ, ಶಮೀಕ, ವತ್ಸಕ ಮತ್ತು ವೃಕ ಎಂಬ ಪುಣ್ಯಾತ್ಮರಾದ ಹತ್ತು ಮಕ್ಕಳನ್ನು ಪಡೆದನು. ವಸುದೇವನು ಹುಟ್ಟುವಾಗ ದೇವದುಂದುಭಿಗಳು ತಾನಾಗಿಯೇ ಮೊಳಗಿದವು. ಆದ್ದರಿಂದ ಅವನನ್ನು, 'ಆನಕದುಂದುಭಿ' ಎಂದೂ ಕರೆಯುತ್ತಿದ್ದರು. ಅವನೇ ಭಗವಾನ್ ಶ್ರೀಕೃಷ್ಣನಿಗೆ ತಂದೆಯಾದನು. ವಸುದೇವನಿಗೆ ಪೃಥಾ, (ಕುಂತಿ) ಶ್ರುತದೇವಾ, ಶ್ರುತಕೀರ್ತಿ, ಶ್ರುತಶ್ರವಾ ಮತ್ತು ರಾಜಾಧಿದೇವಿ ಎಂಬ ಐದು ತಂಗಿಯರೂ ಇದ್ದರು. ವಸುದೇವನ

ತಸ್ಯಾಂ ಸ ಜನಯಾಮಾಸ ದಶ ಪುತ್ರಾನಕಲ್ಮಷಾನ್ ।
ವಸುದೇವಂ ದೇವಭಾಗಂ ದೇವಶ್ರವಸಮಾನಕಮ್ ॥ ೨೮ ॥

ಸೃಂಜಯಂ ಶ್ಯಾಮಕಂ ಕಂಕಂ ಶಮೀಕಂ ವತ್ಸಕಂ ವೃಕಮ್ ।
ದೇವದುಂದುಭಯೋ ನೇದುರಾನಕಾ ಯಸ್ಯ ಜನ್ಮನಿ ॥ ೨೯ ॥

ವಸುದೇವಂ ಹರೇಃ ಸ್ಥಾನಂ ವದಂತ್ಯಾನಕದುಂದುಭಿಮ್ ।
ಪೃಥಾ ಚ ಶ್ರುತದೇವಾ ಚ ಶ್ರುತಕೀರ್ತಿಃ ಶ್ರುತಶ್ರವಾಃ ॥ ೩೦ ॥

ರಾಜಾಧಿದೇವೀ ಚೈತೇಷಾಂ ಭಗಿನ್ಯಃ ಪಂಚ ಕನ್ಯಕಾಃ ।
ಕುಂತೇಃ ಸಖ್ಯುಃ ಪಿತಾ ಶೂರೋ ಹ್ಯಪುತ್ರಸ್ಯ ಪೃಥಾಮದಾತ್ ॥ ೩೧ ॥

ಸಾಽಽಪ ದುರ್ವಾಸಸೋ ವಿದ್ಯಾಂ ದೇವಹೂತೀಂ ಪ್ರತೋಷಿತಾತ್ ।
ತಸ್ಯಾ ವೀರ್ಯಪರೀಕ್ಷಾರ್ಥಮಾಜುಹಾವ ರವಿಂ ಶುಚಿಃ ॥ ೩೨ ॥

ತದೈವೋಪಾಗತಂ ದೇವಂ ವೀಕ್ಷ್ಯ ವಿಸ್ಮಿತಮಾನಸಾ ।
ಪ್ರತ್ಯಯಾರ್ಥಂ ಪ್ರಯುಕ್ತಾ ಮೇ ಯಾಹಿ ದೇವ ಕ್ಷಮಸ್ವ ಮೇ ॥ ೩೩ ॥

ಅಮೋಘಂ ದರ್ಶನಂ ದೇವಿ ಆಧಿತ್ಸೇ ತ್ವಯಿ ಚಾತ್ಮಜಮ್ ।
ಯೋನಿರ್ಯಥಾ ನ ದುಷ್ಯೇತ ಕರ್ತಾಹಂ ತೇ ಸುಮಧ್ಯಮೇ ॥ ೩೪ ॥

ಇತಿ ತಸ್ಯಾಂ ಸ ಆಧಾಯ ಗರ್ಭಂ ಸೂರ್ಯೋ ದಿವಂ ಗತಃ ।
ಸದ್ಯಃ ಕುಮಾರಃ ಸಂಜಜ್ಞೇ ದ್ವಿತೀಯ ಇವ ಭಾಸ್ಕರಃ ॥ ೩೫ ॥

ತಂ ಸಾತ್ಯಜನ್ನದೀತೋಯೇ ಕೃಚ್ಛ್ರಾಲ್ಲೋಕಸ್ಯ ಬಿಭ್ಯತೀ ।
ಪ್ರಪಿತಾಮಹಸ್ತಾಮುವಾಹ ಪಾಂಡುರ್ವೈ ಸತ್ಯವಿಕ್ರಮಃ ॥ ೩೬ ॥

ಶ್ರುತದೇವಾಂ ತು ಕಾರೂಷೋ ವೃದ್ಧಶರ್ಮಾ ಸಮಗ್ರಹೀತ್ ।
ಯಸ್ಯಾಮಭೂದ್ದಂತವಕ್ತ್ರ ಋಷಿಶಪ್ತೋ ದಿತೇಃ ಸುತಃ ॥ ೩೭ ॥

ಕೈಕೇಯೋ ಧೃಷ್ಟಕೇತುಶ್ಚ ಶ್ರುತಕೀರ್ತಿಮವಿಂದತ ।
ಸಂತರ್ದನಾದಯಸ್ತಸ್ಯ ಪಂಚಾಸನ್ಕೈಕಯಾಃ ಸುತಾಃ ॥ ೩೮ ॥

ರಾಜಾಧಿದೇವ್ಯಾಮಾವಂತ್ಯೌ ಜಯಸೇನೋಽಜನಿಷ್ಟ ಹ ।
ದಮಘೋಷಶ್ಚೇದಿರಾಜಃ ಶ್ರುತಶ್ರವಸಮಗ್ರಹೀತ್ ॥ ೩೯ ॥

ಶಿಶುಪಾಲಃ ಸುತಸ್ತಸ್ಯಾಃ ಕಥಿತಸ್ತಸ್ಯ ಸಂಭವಃ ।
ದೇವಭಾಗಸ್ಯ ಕಂಸಾಯಾಂ ಚಿತ್ರಕೇತುಬೃಹದ್ಬಲೌ ॥ ೪೦ ॥

ತಂದೆ ಶೂರಸೇನನಿಗೆ ಕುಂತಿಭೋಜನೆಂಬ ಮಿತ್ರನಿದ್ದನು. ಕುಂತಿಭೋಜನಿಗೆ ಯಾವ ಸಂತಾನವೂ ಇರಲಿಲ್ಲ. ಅದಕ್ಕಾಗಿ ಶೂರಸೇನನು ಅವನಿಗೆ ತನ್ನ ಹಿರಿಯಳಾದ ಪೃಥಾಳನ್ನು ದತ್ತಕವಾಗಿ ಕೊಟ್ಟಿದ್ದನು. ॥ ೨೮-೩೧ ॥

ಪೃಥಾದೇವಿಯು ದುರ್ವಾಸರನ್ನು ತನ್ನ ಸೇವೆಯಿಂದ ಪ್ರಸನ್ನಗೊಳಿಸಿ ಅವರ ಅನುಗ್ರಹದಿಂದ ದೇವತೆಗಳನ್ನೂ ಸಮಾಗಮಕ್ಕಾಗಿ ಕರೆಯಬಹುದಾದ ವಿದ್ಯೆಯನ್ನು ಕಲಿತಳು. ಒಂದು ದಿನ ಆ ವಿದ್ಯೆಯನ್ನು ಪರೀಕ್ಷಿಸಲೋಸುಗ ಪೃಥೆಯು ಪರಮಪವಿತ್ರಳಾಗಿ ಭಗವಾನ್ ಸೂರ್ಯನನ್ನು ಆವಾಹನೆ ಮಾಡಿದಳು. ॥ ೩೨ ॥ ಮಂತ್ರಪಠಿಸಿ ಆಹ್ವಾನಿಸಿದೊಡನೆ ಸೂರ್ಯ ಭಗವಂತನು ಅವಳ ಬಳಿಗೆ ಬಂದೇಬಿಟ್ಟನು. ಸೂರ್ಯನನ್ನು ನೋಡಿ ಕುಂತಿಯು ಅಚ್ಚರಿಗೊಂಡು ಹೇಳಿದಳು – "ಸೂರ್ಯಭಗವಂತ! ನನ್ನನ್ನು ಕ್ಷಮಿಸಿಬಿಡು. ಮುನಿಗಳ ಮಾತನ್ನು ಪರೀಕ್ಷಿಸಲು ಈ ವಿದ್ಯೆಯನ್ನು ಪ್ರಯೋಗಿಸಿದೆನು. ಮಂತ್ರದ ಪ್ರಭಾವ ನನಗೀಗ ತಿಳಿದು ಹೋಯಿತು. ನೀನಿನ್ನು ಹೊರಡಬಹುದು. ॥ ೩೩॥ ಸೂರ್ಯದೇವನು ಹೇಳಿದನು – ದೇವೀ! ನನ್ನ ದರ್ಶನವು ನಿಷ್ಫಲವಾಗಬಾರದು. ಅದಕ್ಕಾಗಿ ನಾನೀಗಲೇ ನಿನಗೆ ಒಬ್ಬ ಪುತ್ರನನ್ನು ಅನುಗ್ರಹಿಸುತ್ತೇನೆ. ಇದರಿಂದ ನಿನ್ನ ಕ್ಷೇತ್ರವು ದೂಷಿತವಾಗುವುದಿಲ್ಲ. ನೀನು ಕನ್ಯೆಯಾಗಿಯೇ ಉಳಿಯುವೆ. ॥ ೩೪ ॥ ಹೀಗೆ ಹೇಳಿ ಸೂರ್ಯದೇವನು ಆಕೆಗೆ ದಿವ್ಯವಾದ ಒಂದು ಗಂಡು ಮಗುವನ್ನು ಕರುಣಿಸಿ ಸ್ವರ್ಗಕ್ಕೆ ಹೊರಟುಹೋದನು. ಆ ಮಗುವು ಅತ್ಯಂತ ಸುಂದರವಾಗಿದ್ದು ಪ್ರತಿಸೂರ್ಯನಂತೆ ಕಂಗೊಳಿಸುತ್ತಿತ್ತು. ॥ ೩೫ ॥ ಪೃಥೆಯು ಲೋಕನಿಂದೆಗೆ ಹೆದರಿ, ಅತೀವ ದುಃಖದಿಂದ ಆ ಮುದ್ದು ಬಾಲಕನನ್ನು ಒಂದು ಪೆಟ್ಟಿಗೆಯಲ್ಲಿಟ್ಟು ಗಂಗೆಯಲ್ಲಿ ತೇಲಿಬಿಟ್ಟಳು. ಪರೀಕ್ಷಿತನೇ! ಆ ಪೃಥೆಯನ್ನೇ ನಿನ್ನ ಮುತ್ತಾತನಾದ ಪಾಂಡುವು ವಿವಾಹವಾದನು. ಅವನು ನಿಜವಾಗಿ ಮಹಾಪರಾಕ್ರಮಿ ಯಾಗಿದ್ದನು. ॥ ೩೬ ॥

ಪರೀಕ್ಷಿತನೇ! ಪೃಥೆಯ ತಂಗಿ ಶ್ರುತದೇವಾ ಎಂಬುವಳನ್ನು ಕರೂಷದೇಶದ ಅಧಿಪತಿ ವೃದ್ಧಶರ್ಮಾ ವಿವಾಹವಾದನು. ಆಕೆಯ ಗರ್ಭದಿಂದ ದಂತವಕ್ತ್ರನ ಜನ್ಮವಾಯಿತು. ಪೂರ್ವಜನ್ಮದಲ್ಲಿ ಸನಕಾದಿ ಋಷಿಗಳ ಶಾಪದಿಂದ ಹಿರಣ್ಯಾಕ್ಷನಾದವನೇ ಈ ದಂತವಕ್ತ್ರನಾಗಿದ್ದನು. ॥ ೩೭ ॥

ಕೇಕಯದೇಶದ ರಾಜಾ ಧೃಷ್ಟಕೇತುವು ಶ್ರುತಕೀರ್ತಿಯೊಂದಿಗೆ ವಿವಾಹವಾದನು. ಅವಳಲ್ಲಿ ಸಂತರ್ದನರೇ ಆದಿ ಐದು ಕೈಕಯ ರಾಜಕುಮಾರರು ಹುಟ್ಟಿದರು. ॥ ೩೮ ॥ ರಾಜಾಧಿದೇವಿಯ ವಿವಾಹವು ಜಯಸೇನ ನೊಂದಿಗೆ ನಡೆಯಿತು. ಅವಳಿಗೆ ವಿಂದ ಮತ್ತು ಅನುವಿಂದ ಎಂಬ ಇಬ್ಬರು ಪುತ್ರರಾದರು. ಇವರಿಬ್ಬರೂ ಅವಂತಿ ನರೇಶರಾದರು. ಚೇದಿರಾಜ ದಮಘೋಷನು ಶ್ರುತಶ್ರವಾ ಎಂಬುವಳನ್ನು ಪಾಣಿ ಗ್ರಹಣಮಾಡಿದನು. ॥ ೩೯ ॥ ಅವಳ ಪುತ್ರನೇ ಶಿಶುಪಾಲನು. ಇವನ ವಿಷಯವಾಗಿ ನಾನು ಮೊದಲೇ (ಏಳನೆಯ ಸ್ಕಂಧದಲ್ಲಿ) ವರ್ಣಿಸಿರುವೆನು. ವಸುದೇವನ ತಮ್ಮಂದಿರಲ್ಲಿ ದೇವಭಾಗನ ಪತ್ನಿಯಾದ ಕಂಸೆಯಿಂದ ಚಿತ್ರಕೇತು ಮತ್ತು ಬೃಹದ್ಬಲರೆಂಬ ಇಬ್ಬರು ಪುತ್ರರು ಹುಟ್ಟಿದರು. ॥ ೪೦ ॥

ಕಂಸವತ್ಯಾಂ ದೇವಶ್ರವಸಃ ಸುವೀರ ಇಷುಮಾಂಸ್ತಥಾ ।
ಕಂಕಾಯಾಮಾನಕಾಜ್ಜಾತಃ ಸತ್ಯಜಿತ್ಪುರುಜಿತ್ತಥಾ ॥ ೪೧ ॥

ಸೃಂಜಯೋ ರಾಷ್ಟ್ರಪಾಲ್ಯಾಂ ಚ ವೃಷದುರ್ಮರ್ಷಣಾದಿಕಾನ್ ।
ಹರಿಕೇಶಹಿರಣ್ಯಾಕ್ಷೌ ಶೂರಭೂಮ್ಯಾಂ ಚ ಶ್ಯಾಮಕಃ ॥ ೪೨ ॥

ಮಿಶ್ರಕೇಶ್ಯಾಮಪ್ಸರಸಿ ವೃಕಾದೀನ್ವತ್ಸಕಸ್ತಥಾ ।
ತಕ್ಷಪುಷ್ಕರಶಾಲಾದೀಂದುರ್ವಾರ್ಕ್ಷ್ಯಾಂ ವೃಕ ಆದಧೇ ॥ ೪೩ ॥

ಸುಮಿತ್ರಾರ್ಜುನಪಾಲಾದೀನ್ ಶಮೀಕಾತ್ತು ಸುದಾಮಿನೀ ।
ಕಂಕಶ್ಚ ಕರ್ಣಿಕಾಯಾಂ ವೈ ಋತಧಾಮಜಯಾವಪಿ ॥ ೪೪ ॥

ಪೌರವೀ ರೋಹಿಣೀ ಭದ್ರಾ ಮದಿರಾ ರೋಚನಾ ಇಲಾ ।
ದೇವಕೀಪ್ರಮುಖಾ ಆಸನ್ಪತ್ನ್ಯ ಆನಕದುಂದುಭೇಃ ॥ ೪೫ ॥

ಬಲಂ ಗದಂ ಸಾರಣಂ ಚ ದುರ್ಮದಂ ವಿಪುಲಂ ಧ್ರುವಮ್ ।
ವಸುದೇವಸ್ತು ರೋಹಿಣ್ಯಾಂ ಕೃತಾದೀನುದಪಾದಯತ್ ॥ ೪೬ ॥

ಸುಭದ್ರೋ ಭದ್ರವಾಹಶ್ಚ ದುರ್ಮದೋ ಭದ್ರ ಏವ ಚ ।
ಪೌರವ್ಯಾಸ್ತನಯಾ ಹ್ಯೇತೇ ಭೂತಾದ್ಯಾ ದ್ವಾದಶಾಭವನ್ ॥ ೪೭ ॥

ನಂದೋಪನಂದಕೃತಕಶೂರಾದ್ಯಾ ಮದಿರಾತ್ಮಜಾಃ ।
ಕೌಸಲ್ಯಾ ಕೇಶಿನಂ ತ್ವೇಕಮಸೂತ ಕುಲನಂದನಮ್ ॥ ೪೮ ॥

ರೋಚನಾಯಾಮತೋ ಜಾತಾ ಹಸ್ತಹೇಮಾಂಗದಾದಯಃ ।
ಇಲಾಯಾ ಮುರುವಲ್ಕಾದೀನ್ಯದುಮುಖ್ಯಾನಜೀಜನತ್ ॥ ೪೯ ॥

ವಿಪೃಷ್ಠೋ ಧೃತದೇವಾಯಾಮೇಕ ಆನಕದುಂದುಭೇಃ ।
ಶಾಂತಿದೇವಾತ್ಮಜಾ ರಾಜನ್ ಶ್ರಮಪ್ರತಿಶ್ರುತಾದಯಃ ॥ ೫೦ ॥

ರಾಜಾನಃ ಕಲ್ಪವರ್ಷಾದ್ಯಾ ಉಪದೇವಾಸುತಾ ದಶ ।
ವಸುಹಂಸಸುವಂಶಾದ್ಯಾಃ ಶ್ರೀದೇವಾಯಾಸ್ತು ಷಟ್ಸುತಾಃ ॥ ೫೧ ॥

ದೇವರಕ್ಷಿತಯಾ ಲಬ್ಧಾ ನವ ಚಾತ್ರ ಗದಾದಯಃ ।
ವಸುದೇವಃ ಸುತಾನಷ್ಟಾವಾದಧೇ ಸಹದೇವಯಾ ॥ ೫೨ ॥

ಪುರುವಿಶ್ರುತಮುಖ್ಯಾಂಸ್ತು ಸಾಕ್ಷಾದ್ಧರ್ಮೋ ವಸೂನಿವ ।
ವಸುದೇವಸ್ತು ದೇವಕ್ಯಾಮಷ್ಟ ಪುತ್ರಾನಜೀಜನತ್ ॥ ೫೩ ॥

ಕೀರ್ತಿಮಂತಂ ಸುಷೇಣಂ ಚ ಭದ್ರಸೇನಮುದಾರಧೀಃ ।
ಋಜುಂ ಸಮ್ಮರ್ದನಂ ಭದ್ರಂ ಸಂಕರ್ಷಣಮಹೀಶ್ವರಮ್ ॥ ೫೪ ॥

ದೇವಶ್ರವಾನ ಪತ್ನಿಯಾದ ಕಂಸವತಿಯಿಂದ ಸುವೀರ ಹಾಗೂ ಇಷುಮಾನ್‌ರೆಂಬ ಇಬ್ಬರು ಪುತ್ರರಾದರು. ಆನಕನ ಪತ್ನಿಯಾದ ಕಂಕಾಳಿಂದ - ಶತ್ರುಜಿತ್ ಮತ್ತು ಪುರುಜಿತ್‌ರೆಂಬ ಇಬ್ಬರು ಪುತ್ರರು ಹುಟ್ಟಿದರು. ॥ ೪೧ ॥ ಸೃಂಜಯನು ತನ್ನ ಪತ್ನಿಯಾದ ರಾಷ್ಟ್ರಪಾಲಿಕೆಯಿಂದ ವೃಷ ಮತ್ತು ದುರ್ಮರ್ಷಣರೇ ಮೊದಲಾದ ಅನೇಕ ಪುತ್ರರನ್ನು ಪಡೆದನು. ಹೀಗೆಯೇ ಶ್ಯಾಮಕನು ಶೂರಭೂಮಿ (ಶೂರಭೂ) ಎಂಬ ಪತ್ನಿಯಿಂದ ಹರಿಕೇಶ ಮತ್ತು ಹಿರಣ್ಯಾಕ್ಷರೆಂಬ ಇಬ್ಬರು ಮಕ್ಕಳನ್ನು ಪಡೆದನು. ॥ ೪೨ ॥ ಮಿಶ್ರಕೇಶೀ ಅಪ್ಸರೆಯ ಗರ್ಭದಿಂದ ವತ್ಸಕನೂ ಕೂಡ ವೃಕ ಮೊದಲಾದ ಅನೇಕ ಪುತ್ರರನ್ನು ಹೊಂದಿದನು. ವೃಕನು ದುರ್ವಾರ್ಕ್ಷಿಯಿಂದ ತಕ್ಷ, ಪುಷ್ಕರ, ಶಾಲ ಮೊದಲಾದ ಹಲವು ಮಕ್ಕಳನ್ನು ಪಡೆದುಕೊಂಡನು. ॥ ೪೩ ॥ ಶಮೀಕನ ಪತ್ನಿಯಾದ ಸುದಾಮಿನಿಯು ಸುಮಿತ್ರ, ಅರ್ಜುನಪಾಲ ಮೊದಲಾದ ಅನೇಕ ಮಕ್ಕಳನ್ನು ಪಡೆದಳು. ಕಂಕನ ಪತ್ನಿ ಕರ್ಣಿಕೆಯಿಂದ ಋತುಧಾಮ ಮತ್ತು ಜಯರೆಂಬ ಇಬ್ಬರು ಮಕ್ಕಳು ಉಂಟಾದರು. ॥ ೪೪ ॥

ಆನಕದುಂದುಭಿಯಾದ ವಸುದೇವನಿಗೆ ಪೌರವೀ, ರೋಹಿಣೀ, ಭದ್ರಾ, ಮದಿರಾ, ರೋಚನಾ, ಇಲಾ ಮತ್ತು ದೇವಕಿ ಮುಂತಾದ ಅನೇಕ ಪತ್ನಿಯರಿದ್ದರು. ॥ ೪೫ ॥ ರೋಹಿಣಿಯ ಗರ್ಭದಿಂದ ವಸುದೇವನು ಬಲರಾಮ, ಗದ, ಸಾರಣ, ದುರ್ಮದ, ವಿಪುಲ, ಧ್ರುವ ಮತ್ತು ಕೃತ ಮುಂತಾದ ಪುತ್ರರನ್ನು ಪಡೆದನು. ॥ ೪೬ ॥ ಪೌರವಿಯ ಗರ್ಭದಿಂದ ಭೂತ ಸುಭದ್ರ, ಭದ್ರವಾಹ, ದುರ್ಮದ, ಭದ್ರ ಮೊದಲಾದ ಹನ್ನೆರಡು ಮಕ್ಕಳನ್ನು ಪಡೆದನು. ॥ ೪೭ ॥ ಮದಿರೆಯ ಗರ್ಭದಿಂದ ನಂದ, ಉಪನಂದ, ಕೃತಕ, ಶೂರ ಮುಂತಾದವರು ಹುಟ್ಟಿದರು. ಕೌಸಲ್ಯೆಯು ಕುಲಕ್ಕೆ ಆನಂದ ದಾಯಕನಾದ 'ಕೇಶೀ' ಎಂಬ ಓರ್ವನೇ ಪುತ್ರನನ್ನು ಪಡೆದಳು. ॥ ೪೮ ॥ ರೋಚನಾ ಎಂಬುವಳಲ್ಲಿ ಹಸ್ತ, ಹೇಮಾಂಗ ಮೊದಲಾದವರು, ಇಲೆಯಿಂದ ಉರುವಲ್ಕ ಮೊದಲಾದ ಯಾದವ ಮುಖ್ಯರಾದ ಪುತ್ರರನ್ನು ಪಡೆದನು. ॥ ೪೯ ॥ ಪರೀಕ್ಷಿತನೇ! ವಸುದೇವನ ಪತ್ನಿಯಾದ ಧೃತದೇವಾ ಎಂಬುವಳಲ್ಲಿ ವಿಪೃಷ್ಠ ಎಂಬ ಒಬ್ಬ ಮಗನಾದನು. ಶಾಂತಿದೇವಿಯಲ್ಲಿ ಶ್ರಮ ಮತ್ತು ಪ್ರತಿಶ್ರುತ ಮೊದಲಾದ ಅನೇಕ ಪುತ್ರರು ಹುಟ್ಟಿದರು. ॥ ೫೦ ॥

ಉಪದೇವಾ ಎಂಬುವಳಿಂದ ಕಲ್ಪವರ್ಷ ಮೊದಲಾದ ಹತ್ತು ರಾಜರನ್ನು ಪಡೆದನು. ಶ್ರೀದೇವಾಳಿಂದ ವಸು, ಹಂಸ, ಸುವಂಶ ಮೊದಲಾದ ಆರು ಪುತ್ರರಾದರು. ॥ ೫೧ ॥ ದೇವರಕ್ಷಿತೆಯಿಂದ ಗದ ಮೊದಲಾದ ಒಂಭತ್ತು ಪುತ್ರರಾದರು. ಧರ್ಮನು ಎಂಟು ವಸುಗಳನ್ನು ಪಡೆದುಕೊಂಡಂತೆ ವಸುದೇವನು ಸಹದೇವಾಳಿಂದ ಪುರುವಿಶ್ರುತ ಮೊದಲಾದ ಎಂಟು ಪುತ್ರರನ್ನು ಪಡೆದನು. ಪರಮಉದಾರ ವಸುದೇವನು ದೇವಕಿಯ ಗರ್ಭದಿಂದಲೂ ಎಂಟುಮಂದಿ ಪುತ್ರರನ್ನು ಪಡೆದನು - ಅವರಲ್ಲಿ ಏಳರ ಹೆಸರು - ಕೀರ್ತಿಮಾನ್, ಸುಷೇಣ, ಭದ್ರಸೇನ, ಋಜು, ಸಮ್ಮರ್ದನ, ಭದ್ರ ಮತ್ತು ಶೇಷಾವತಾರೀ ಶ್ರೀಬಲರಾಮ ಎಂದಿತ್ತು. ॥ ೫೨-೫೪ ॥

ಅಷ್ಟಮಸ್ತು ತಯೋರಾಸೀತ್ಸ್ವಯಮೇವ ಹರಿಃ ಕಿಲ ।
ಸುಭದ್ರಾ ಚ ಮಹಾಭಾಗಾ ತವ ರಾಜನ್ಪಿತಾಮಹೀ ॥ ೫೫ ॥

ಯದಾ ಯದೇಹ ಧರ್ಮಸ್ಯ ಕ್ಷಯೋ ವೃದ್ಧಿಶ್ಚ ಪಾಪ್ಮನಃ ।
ತದಾ ತು ಭಗವಾನೀಶ ಆತ್ಮಾನಂ ಸೃಜತೇ ಹರಿಃ ॥ ೫೬ ॥

ನ ಹ್ಯಸ್ಯ ಜನ್ಮನೋ ಹೇತುಃ ಕರ್ಮಣೋ ವಾ ಮಹೀಪತೇ ।
ಆತ್ಮಮಾಯಾಂ ವಿನೇಶಸ್ಯ ಪರಸ್ಯ ದ್ರಷ್ಟುರಾತ್ಮನಃ ॥ ೫೭ ॥

ಯನ್ಮಾಯಾಚೇಷ್ಟಿತಂ ಪುಂಸಃ ಸ್ಥಿತ್ಯುತ್ಪತ್ತ್ಯಪ್ಯಯಾಯ ಹಿ ।
ಅನುಗ್ರಹಸ್ತನ್ನಿವೃತ್ತೇರಾತ್ಮಲಾಭಾಯ ಚೇಷ್ಯತೇ ॥ ೫೮ ॥

ಅಕ್ಷೌಹಿಣೀನಾಂ ಪತಿಭಿರಸುರೈರ್ನೃಪಲಾಂಛನೈಃ ।
ಭುವ ಆಕ್ರಮ್ಯಮಾಣಾಯಾ ಅಭಾರಾಯ ಕೃತೋದ್ಯಮಃ ॥ ೫೯ ॥

ಕರ್ಮಾಣ್ಯಪರಿಮೇಯಾಣಿ ಮನಸಾಪಿ ಸುರೇಶ್ವರೈಃ ।
ಸಹಸಂಕರ್ಷಣಶ್ಚಕ್ರೇ ಭಗವಾನ್ಮಧುಸೂದನಃ ॥ ೬೦ ॥

ಕಲೌ ಜನಿಷ್ಯಮಾಣಾನಾಂ ದುಃಖಶೋಕತಮೋನುದಮ್ ।
ಅನುಗ್ರಹಾಯ ಭಕ್ತಾನಾಂ ಸುಪುಣ್ಯಂ ವ್ಯತನೋದ್ಯಶಃ ॥ ೬೧ ॥

ಯಸ್ಮಿನ್ಸತ್ಕರ್ಣಪೀಯೂಷೇ ಯಶಸ್ತೀರ್ಥವರೇ ಸಕೃತ್ ।
ಶ್ರೋತ್ರಾಂಜಲಿರುಪಸ್ಪೃಶ್ಯ ಧುನುತೇ ಕರ್ಮವಾಸನಾಮ್ ॥ ೬೨ ॥

ಭೋಜವೃಷ್ಣ್ಯಂಧಕಮಧುಶೂರಸೇನದಶಾರ್ಹಕೈಃ ।
ಶ್ಲಾಘನೀಯೇಹಿತಃ ಶಶ್ವತ್ಕುರುಸೃಂಜಯಪಾಂಡುಭಿಃ ॥ ೬೩ ॥

ಸ್ನಿಗ್ಧಸ್ಮಿತೇಕ್ಷಿತೋದಾರೈರ್ವಾಕ್ಯೈರ್ವಿಕ್ರಮಲೀಲಯಾ ।
ನೃಲೋಕಂ ರಮಯಾಮಾಸ ಮೂರ್ತ್ಯಾ ಸರ್ವಾಂಗರಮ್ಯಯಾ ॥ ೬೪ ॥

ಯಸ್ಯಾನನಂ ಮಕರಕುಂಡಲಚಾರುಕರ್ಣ-
ಭ್ರಾಜತ್ಕಪೋಲಸುಭಗಂ ಸವಿಲಾಸಹಾಸಮ್ ।
ನಿತ್ಯೋತ್ಸವಂ ನ ತತೃಪುರ್ದೃಶಿಭಿಃ ಪಿಬಂತ್ಯೋ
ನಾರ್ಯೋ ನರಾಶ್ಚ ಮುದಿತಾಃ ಕುಪಿತಾ ನಿಮೇಶ್ಚ ॥ ೬೫ ॥

ಅವರಿಬ್ಬರಲ್ಲಿ ಎಂಟನೆಯವನಾಗಿ ಸ್ವತಃ ಭಗವಂತನೇ ಆಗಿದ್ದನು. ಪರೀಕ್ಷಿತನೇ! ನಿನ್ನ ಪಿತಾಮಹಿ ಪರಮ ಸೌಭಾಗ್ಯವತಿಯಾದ ಸುಭದ್ರೆಯೂ ದೇವಕನ ಮಗಳಾಗಿದ್ದಳು. ॥ ೫೫ ॥

ಪ್ರಪಂಚದಲ್ಲಿ ಧರ್ಮದ ಹ್ರಾಸ ಮತ್ತು ಪಾಪದ ವೃದ್ಧಿಯಾದಾಗಲೆಲ್ಲ ಸರ್ವಶಕ್ತನಾದ ಭಗವಾನ್ ಶ್ರೀಹರಿಯು ಅವತರಿಸುವನು. ॥ ೫೬ ॥ ಪರೀಕ್ಷಿತನೇ! ಭಗವಂತನು ಎಲ್ಲರ ದ್ರಷ್ಟಾ ಮತ್ತು ವಾಸ್ತವವಾಗಿ ಅಸಂಗನಾದ ಆತ್ಮನೇ ಆಗಿರುವನು. ಅದಕ್ಕಾಗಿ ಅವನ ಜನ್ಮ ಮತ್ತು ಕರ್ಮಗಳಿಗೆ ಆತ್ಮಸ್ವರೂಪಿಣಿಯಾದ ಯೋಗಮಾಯೆಯಲ್ಲದೆ ಬೇರೆ ಯಾವ ಕಾರಣವೂ ಇಲ್ಲ. ॥ ೫೭ ॥ ಅವನ ಮಾಯೆಯ ವಿಲಾಸವೇ ಜೀವಿಯ ಜನ್ಮ, ಜೀವನ, ಮರಣ ಇವುಗಳ ಕಾರಣವಾಗಿದೆ. ಅವನ ಅನುಗ್ರಹವೇ ಮಾಯೆಯನ್ನು ಕಳೆದು ಆತ್ಮಸ್ವರೂಪವನ್ನು ದೊರಕಿಸಿಕೊಡುವಂತಹುದಾಗಿದೆ. ॥ ೫೮ ॥ ಅಸುರರು ರಾಜರ ವೇಷವನ್ನು ತೊಟ್ಟು ಬಹಳಷ್ಟು ಅಕ್ಷೌಹಿಣೀ ಸೈನ್ಯವನ್ನು ಒಟ್ಟುಗೂಡಿಸಿ ಪೃಥ್ವಿಯನ್ನು ಆಕ್ರಮಿಸಿ ಭೂಭಾರವಾದಾಗ ಭಗವಾನ್ ಮಧುಸೂದನನು ಬಲರಾಮನೊಂದಿಗೆ ಅವತರಿಸಿದನು. ಸಂಕರ್ಷಣನೊಂದಿಗೆ ಆ ಭಗವಂತನು ದೇವತೆಗಳೂ ಕೂಡ ಮನಸ್ಸಿನಿಂದಲೂ ಎಣಿಸಲಾರದ ಪರಮಾದ್ಭುತವಾದ ಲೀಲೆಗಳನ್ನು ನಡೆಸಿದನು. ॥ ೫೯-೬೦ ॥ ಭೂಭಾರವನ್ನು ಇಳಿಸುವುದರ ಜೊತೆಗೆ ಕಲಿಯುಗದಲ್ಲಿ ಹುಟ್ಟಿದ, ಹುಟ್ಟಲಿರುವ ಭಕ್ತರ ಮೇಲೆ ಅನುಗ್ರಹ ಮಾಡಲಿಕ್ಕಾಗಿ ಭಗವಂತನು – ಕೇವಲ ಶ್ರವಣಮಾತ್ರ ದಿಂದಲೇ ಭಕ್ತರ ಶೋಕ-ದುಃಖಗಳನ್ನೂ, ಅಜ್ಞಾನವನ್ನೂ ತೊಲಗಿಸುವಂತಹ ಪರಮ ಪವಿತ್ರ, ಪುಣ್ಯಕರವಾದ ಯಶವನ್ನು ಹರಡಿದನು. ॥ ೬೧ ॥ ಅವನ ಪವಿತ್ರಕೀರ್ತಿಯು ಜನರನ್ನು ಪವಿತ್ರಗೊಳಿಸುವಂತಹ ಪುಣ್ಯತೀರ್ಥವಾಗಿದೆ. ಸಾಧು-ಸಂತರ ಕಿವಿಗಳಿಗೆ ಅದಾದರೋ ಪ್ರತ್ಯಕ್ಷ ಅಮೃತವೇ ಆಗಿದೆ. ಒಂದೇ ಬಾರಿ ಕಿವಿಗಳೆಂಬ ಅಂಜಲಿಯಿಂದ ಪಾನಮಾಡಿದರೆ ಕರ್ಮವಾಸನೆಗಳು ನಿರ್ಮೂಲವಾಗುವುವು. ॥ ೬೨ ॥

ಪರೀಕ್ಷಿತನೇ! ಭೋಜ, ವೃಷ್ಣಿ, ಅಂಧಕ, ಮಧು, ಶೂರಸೇನ, ದಶಾರ್ಹ, ಕುರು, ಸೃಂಜಯ ಮತ್ತು ಪಾಂಡುವಂಶದ ವೀರರು ನಿರಂತರವಾಗಿ ಭಗವಂತನ ಲೀಲೆಗಳನ್ನು ಆದರದಿಂದ ಪ್ರಶಂಸಿಸುತ್ತಾರೆ. ॥ ೬೩ ॥ ಅವನ ಶ್ಯಾಮಲ ಶರೀರವು ಸರ್ವಾಂಗ ಸುಂದರವಾಗಿತ್ತು. ಅವನು ಆ ಮನೋಹರ ವಿಗ್ರಹದಿಂದ ಹಾಗೂ ತನ್ನ ಪ್ರೇಮತುಂಬಿದ ಮುಗುಳ್ನಗೆಯಿಂದ, ಮಧುರ ನೋಟದಿಂದ, ಪ್ರಾಸಾದಿಕ ವಚನಗಳಿಂದ ಮತ್ತು ಪರಾಕ್ರಮದಿಂದ ಕೂಡಿದ ಲೀಲೆಗಳಿಂದ ಇಡೀ ಮನುಷ್ಯಲೋಕವನ್ನು ಆನಂದ ಸಾಗರದಲ್ಲಿ ಮುಳುಗಿಸಿ ಬಿಟ್ಟನು. ॥ ೬೪ ॥ ಭಗವಂತನ ಮುಖ ಕಮಲದ ಶೋಭೆಯು ಅದ್ಭುತವಾಗಿತ್ತು. ಮಕರಾಕೃತಿಯ ಕುಂಡಲಗಳಿಂದ ಅವನ ಕಿವಿಗಳು ಕಮನೀಯವಾಗಿದ್ದವು. ಕುಂಡಲಗಳ ಕಾಂತಿಯಿಂದ ಕಪೋಲಗಳ ಕಾಂತಿಯು ಇನ್ನೂ ಝಗ-ಝಗಿಸುತ್ತಿತ್ತು. ಅವನು ಹುಸಿನಗೆಯಿಂದ ಕೂಡಿದ್ದ ಸರ್ವದಾ ಸಂತೋಷವನ್ನೇ ಉಂಟುಮಾಡುತ್ತಿದ್ದ ಶ್ರೀಕೃಷ್ಣನ ಮುಖಾರವಿಂದ ಮಾಧುರಿಯನ್ನು ಸ್ತ್ರೀ-ಪುರುಷರಾದಿಯಾಗಿ ಸಮಸ್ತ ಜನರು ಕಣ್ಣುಗಳೆಂಬ ಪಾತ್ರೆಯಿಂದ ಪಾನಮಾಡುತ್ತಿದ್ದರು. ಅವರಿಗೆ ಎಷ್ಟು ನೋಡಿದರೂ ತೃಪ್ತಿಯೇ ಆಗುತ್ತಿರಲಿಲ್ಲ. ಕಣ್ಣುಗಳನ್ನು ಮುಚ್ಚಿ ತೆರೆಯುವುದಕ್ಕೆ ನಿಯಾಮಕನಾದ ನಿಮಿಯನ್ನೇ ಅವರು ನಿಂದಿಸುತ್ತಿದ್ದರು. ॥ ೬೫ ॥

ಜಾತೋ ಗತಃ ಪಿತೃಗೃಹಾದ್ವ್ರಜಮೇಧಿತಾರ್ಥೋ
ಹತ್ವಾ ರಿಪೂನ್ಸುತಶತಾನಿ ಕೃತೋರುದಾರಃ ।
ಉತ್ಪಾದ್ಯ ತೇಷು ಪುರುಷಃ ಕ್ರತುಭಿಃ ಸಮೀಜೇ
ಆತ್ಮಾನಮಾತ್ಮನಿಗಮಂ ಪ್ರಥಯಂಜನೇಷು ॥ ೬೬ ॥

ಇಂತಹ ಜಗದಾನಂದಕರನಾದ ಭಗವಂತನು ಮಥುರೆಯ ವಸುದೇವನ ಮನೆಯಲ್ಲಿ ಅವತರಿಸಿದ್ದರೂ ಅವನು ಅಲ್ಲಿರದೆ ಗೋಕುಲದ ನಂದಮಹಾರಾಜನ ಮನೆಗೆ ಹೋದನು. ಅಲ್ಲಿ ಗೋಪರನ್ನೂ, ಗೋಪಿಯರನ್ನೂ, ಗೋವುಗಳನ್ನೂ ಸಂತೋಷಪಡಿಸಿ ಮಥುರೆಗೆ ಮರಳಿದನು. ವ್ರಜದಲ್ಲಿ, ಮಥುರೆಯಲ್ಲಿ, ದ್ವಾರಕೆಯಲ್ಲಿ ಇದ್ದು ಕೊಂಡು ಅನೇಕ ಶತ್ರುಗಳನ್ನು ಸಂಹರಿಸಿದನು. ಸಾವಿರಾರು ಕನ್ಯೆಯರನ್ನು ವಿವಾಹವಾದನು. ಅವರಲ್ಲಿ ಅಸಂಖ್ಯಾತ ಮಕ್ಕಳನ್ನು ಪಡೆದನು. ಜೊತೆಗೆ ಜನರಲ್ಲಿ ತನ್ನ ಸ್ವರೂಪವನ್ನು ಸಾಕ್ಷಾತ್ಕಾರ ಮಾಡಿಸುವಂತಹ ಶ್ರುತಿಗಳ ಮರ್ಯಾದೆಯನ್ನು ಸ್ಥಾಪಿಸಲಿಕ್ಕಾಗಿ ಅನೇಕ ಯಜ್ಞಗಳ ಮೂಲಕ ಸ್ವಯಂ ತನ್ನನ್ನೇ ತಾನು ಆರಾಧಿಸಿಕೊಂಡನು. ॥ ೬೬ ॥ ಕೌರವ-ಪಾಂಡವರಲ್ಲಿ ಉಂಟಾದ ಪರಸ್ಪರ ಕಲಹದಿಂದ ಅವನು ಪೃಥಿವಿಯ ಬಹಳಷ್ಟು ಭಾರವನ್ನು ತಗ್ಗಿಸಿದನು. ಕುರುಕ್ಷೇತ್ರದ ಯುದ್ಧದಲ್ಲಿ ತನ್ನ ದೃಷ್ಟಿಮಾತ್ರದಿಂದ ರಾಜರ ಅನೇಕ ಅಕ್ಷೌಹಿಣಿಗಳನ್ನು ಧ್ವಂಸಮಾಡಿ ಜಗತ್ತಿನಲ್ಲಿ ಅರ್ಜುನನ ವಿಜಯದುಂದುಭಿಯನ್ನು ಮೊಳಗಿಸಿದನು. ಮತ್ತೆ ಉದ್ಧವನಿಗೆ ಆತ್ಮತತ್ತ್ವವನ್ನು ಉಪದೇಶಿಸಿ ಕೊನೆಗೆ ತನ್ನ ಪರಮ ಧಾಮಕ್ಕೆ ತೆರಳಿದನು. ॥ ೬೭ ॥

ಪೃಥ್ವ್ಯಾಃ ಸ ವೈ ಗುರುಭರಂ ಕ್ಷಪಯನ್ಕುರೂಣಾ-
ಮಂತಃ ಸಮುತ್ಥಕಲಿನಾ ಯುಧಿ ಭೂಪಚಮ್ವಃ ।
ದೃಷ್ಟ್ವಾ ವಿಧೂಯ ವಿಜಯೇ ಜಯಮುದ್ವಿಘೋಷ್ಯ
ಪ್ರೋಚ್ಯೋದ್ಧವಾಯ ಚ ಪರಂ ಸಮಗಾತ್ಸ್ವಧಾಮ ॥ ೬೭ ॥

*ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೨೪ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ನವಮ ಸ್ಕಂಧೇ
ಶ್ರೀಸೂರ್ಯಸೋಮವಂಶಾನುಕೀರ್ತನೇ ಯದುವಂಶಾನುಕೀರ್ತನಂ ನಾಮ ಚತುರ್ವಿಂಶೋಽಧ್ಯಾಯಃ ॥ ೨೪ ॥

ಒಂಭತ್ತನೆಯ ಸ್ಕಂಧವು ಸಂಪೂರ್ಣವಾಯಿತು.



॥ ಶ್ರೀರಾಧಾಕೃಷ್ಣಾಭ್ಯಾಂ ನಮಃ ॥

# ಶ್ರೀಮದ್ಭಾಗವತಮಹಾಪುರಾಣ

## ದಶಮ ಸ್ಕಂಧ (ಪೂರ್ವಾರ್ಧ)



ದೇವಕ್ಯಾ ಪಾಲಿತೋ ಗರ್ಭೇ ಲಾಲಿತೋಽಂಕೇ ಯಶೋದಯಾ ।
ಯಶೋದಯಾಯುತೋ ಬಾಲೋ ಗೋಪಾಲೋ ರಮತಾಂ ಹೃದಿ ॥

॥ ಓಂ ನಮೋ ಭಗವತೇ ವಾಸುದೇವಾಯ ॥

# ಶ್ರೀಮದ್ಭಾಗವತಮಹಾಪುರಾಣಮ್

## ದಶಮಃ ಸ್ಕಂಧಃ (ಪೂರ್ವಾರ್ಧ)

## ಮೊದಲನೆಯ ಅಧ್ಯಾಯ

### ಭಗವಂತನು ಭೂದೇವಿಯನ್ನು ಸಂತೈಸಿದುದು, ವಸುದೇವ ದೇವಕಿಯರ ವಿವಾಹ ಮತ್ತು ಕಂಸನು ದೇವಕಿಯ ಆರು ಪುತ್ರರನ್ನು ವಧಿಸಿದುದು

*ರಾಜೋವಾಚ*

**ಕಥಿತೋ ವಂಶವಿಸ್ತಾರೋ ಭವತಾ ಸೋಮಸೂರ್ಯಯೋಃ ।**
**ರಾಜ್ಞಾಂ ಚೋಭಯವಂಶ್ಯಾನಾಂ ಚರಿತಂ ಪರಮಾದ್ಭುತಮ್ ॥ ೧ ॥**

**ಯದೋಶ್ಚ ಧರ್ಮಶೀಲಸ್ಯ ನಿತರಾಂ ಮುನಿಸತ್ತಮ ।**
**ತತ್ರಾಂಶೇನಾವತೀರ್ಣಸ್ಯ ವಿಷ್ಣೋರ್ವೀರ್ಯಾಣಿ ಶಂಸ ನಃ ॥ ೨ ॥**

**ಅವತೀರ್ಯ ಯದೋರ್ವಂಶೇ ಭಗವಾನ್ಭೂತಭಾವನಃ ।**
**ಕೃತವಾನ್ಯಾನಿ ವಿಶ್ವಾತ್ಮಾ ತಾನಿ ನೋ ವದ ವಿಸ್ತರಾತ್ ॥ ೩ ॥**

**ನಿವೃತ್ತತರ್ಷೈರುಪಗೀಯಮಾನಾದ್**
**ಭವೌಷಧಾಚ್ಛ್ರೋತ್ರಮನೋಽಭಿರಾಮಾತ್ ।**
**ಕ ಉತ್ತಮಶ್ಲೋಕಗುಣಾನುವಾದಾತ್**
**ಪುಮಾನ್ವಿರಜ್ಯೇತ ವಿನಾ ಪಶುಘ್ನಾತ್ ॥ ೪ ॥**

**ಪಿತಾಮಹಾ ಮೇ ಸಮರೇಽಮರಂಜಯೈ-**
**ರ್ದೇವವ್ರತಾದ್ಯಾತಿರಥೈಸ್ತಿಮಿಂಗಿಲೈಃ ।**
**ದುರತ್ಯಯಂ ಕೌರವಸೈನ್ಯಸಾಗರಂ**
**ಕೃತ್ವಾತರನ್ವತ್ಸಪದಂ ಸ್ಮ ಯತ್ಪ್ಲವಾಃ ॥ ೫ ॥**

**ದ್ರೌಣ್ಯಸ್ತ್ರವಿಪ್ಲುಷ್ಟಮಿದಂ ಮದಂಗಂ**
**ಸಂತಾನಬೀಜಂ ಕುರುಪಾಂಡವಾನಾಮ್ ।**
**ಜುಗೋಪ ಕುಕ್ಷಿಂಗತ ಆತ್ತಚಕ್ರೋ**
**ಮಾತುಶ್ಚ ಮೇ ಯಃ ಶರಣಂ ಗತಾಯಾಃ ॥ ೬ ॥**

**ಪರೀಕ್ಷಿದ್ರಾಜನು ಕೇಳಿದನು** – ಎಲೈ ಮುನಿಶ್ರೇಷ್ಠರೇ! ತಾವು ಇಲ್ಲಿಯವರೆಗೆ ಚಂದ್ರವಂಶ ಮತ್ತು ಸೂರ್ಯವಂಶಗಳನ್ನು ವಿಸ್ತಾರವಾಗಿ ವರ್ಣಿಸಿದಿರಿ. ಎರಡೂ ವಂಶದ ರಾಜರುಗಳ ಅತ್ಯಂತ ಅದ್ಭುತವಾದ ಚರಿತ್ರೆಯನ್ನೂ ನಿರೂಪಿಸಿದಿರಿ. ಭಗವಂತನ ಪರಮ ಪ್ರೇಮಿಗಳಾದ ಮುನಿವರ್ಯರೇ! ತಾವು ಸ್ವಾಭಾವಿಕವಾದ ಧರ್ಮಶೀಲವಾದ ಯದುವಂಶವನ್ನೂ ವಿಶದವಾಗಿ ವರ್ಣಿಸಿದಿರಿ. ಈಗ ದಯಮಾಡಿ ಅದೇ ವಂಶದಲ್ಲಿ ತನ್ನ ಅಂಶವಾದ ಶ್ರೀಬಲರಾಮನೊಂದಿಗೆ ಅವತರಿಸಿದ ಭಗವಾನ್ ಶ್ರೀಕೃಷ್ಣನ ಪರಮ ಪವಿತ್ರ ಚರಿತ್ರೆಯನ್ನು ಹೇಳುವವರಾಗಿರಿ. ॥ ೧-೨ ॥ ಭಗವಾನ್ ಶ್ರೀಕೃಷ್ಣನು ಸಮಸ್ತ ಪ್ರಾಣಿಗಳ ಪ್ರಾಣಾಧಾರನೂ, ಸರ್ವಾತ್ಮಕನೂ ಆಗಿರುವನು. ಅವನು ಯದುವಂಶದಲ್ಲಿ ಅವತರಿಸಿ ಮಾಡಿದ ಎಲ್ಲ ಲೀಲೆಗಳನ್ನು ನಮಗೆ ವಿಸ್ತಾರವಾಗಿ ಶ್ರವಣ ಮಾಡಿಸಿರಿ. ॥ ೩ ॥ ಪುಣ್ಯಶ್ಲೋಕನಾದ ಆ ಪರಮಾತ್ಮನ ಕಲ್ಯಾಣ ಗುಣಗಳನ್ನು ಆಶಾಪಾಶಗಳನ್ನು ತೊರೆದ ನಿತ್ಯತೃಪ್ತರಾದ ಮಹಾತ್ಮರು ಎಷ್ಟು ಅನುಭವಿಸಿದರೂ ತೃಪ್ತಿಯಿಲ್ಲದೆ ಕೀರ್ತನೆ ಮಾಡುತ್ತಾ ಇರುತ್ತಾರೆ. ಅದು ಸಂಸಾರವ್ಯಾಧಿಗೆ ದಿವ್ಯೌಷಧವಾಗಿದೆ. ಕಿವಿಗಳಿಗೂ ಮನಸ್ಸಿಗೂ ಅಮೃತಪ್ರಾಯವಾಗಿದೆ. ಅದರ ಕುರಿತು ಯಾರಿಗೆ ತಾನೇ ಬೇಸರ ಉಂಟಾದೀತು? ಅದರಲ್ಲಿ ಬೇಸರ ಪಡಬೇಕಾದರೆ ಅವನು ಪಶುಘಾತಿಯಾದ ಕಟುಕನೇ ಆಗಿರಬೇಕು. ಆತನನ್ನು ಬಿಟ್ಟು ಬೇರೆ ಯಾರಿಗೂ ಅದರಲ್ಲಿ ವಿರಕ್ತಿ ಉಂಟಾಗುವುದಿಲ್ಲ. ॥ ೪ ॥ ಶ್ರೀಕೃಷ್ಣನಾದರೋ ನನಗೆ ಕುಲದೈವನೇ ಆಗಿರುವನು. ಈ ಭಗವಾನ್ ಶ್ರೀಕೃಷ್ಣನ ಚರಣರೂಪಿ ನೌಕೆಯಿಂದಲೇ ನನ್ನ ತಾತಂದಿರಾದ ಪಾಂಡವರು ಮಹಾಭಾರತ ಯುದ್ಧದಲ್ಲಿ ದೇವತೆಗಳನ್ನು ಜಯಿಸಬಲ್ಲ ಭೀಷ್ಮ ಪಿತಾಮಹರೇ ಆದಿ ಅತಿರಥಯೋಧರೆಂಬ ತಿಮಿಂಗಿಲಗಳಿಂದ ಕೂಡಿದ ದಾಟಲು ಅಸಾಧ್ಯವಾದ ಕೌರವ ಸೈನ್ಯವೆಂಬ ಮಹಾಸಾಗರವನ್ನು ಕರುವಿನ ಹೆಜ್ಜೆಯಷ್ಟು ಹೊಂಡವನ್ನು ದಾಟುವಂತೆ ಲೀಲಾಜಾಲವಾಗಿ ದಾಟಿಬಿಟ್ಟರು. ॥ ೫ ॥ ತನ್ನನ್ನು ಮರೆಹೊಕ್ಕ ನನ್ನ ತಾಯಿಯ ಗರ್ಭವನ್ನು ಒಳಹೊಕ್ಕು ಚಕ್ರಾಯುಧವನ್ನು ಧರಿಸಿ, ಅಶ್ವತ್ಥಾಮನು ಪ್ರಯೋಗಿಸಿದ ಬ್ರಹ್ಮಾಸ್ತ್ರದಿಂದ ಸುಟ್ಟುಹೋಗುವುದರಲ್ಲಿದ್ದ ಕೌರವ-ಪಾಂಡವ ವಂಶಗಳೆರಡರ ಬೀಜವಾಗಿದ್ದ ನಿಮ್ಮ ಮುಂದೆ ಇರುವ ಈ ದೇಹವನ್ನು ಕಾಪಾಡಿದವನೂ ಅವನೇ. ॥ ೬ ॥

ವೀರ್ಯಾಣಿ ತಸ್ಯಾಖಿಲದೇಹಭಾಜಾ-
ಮಂತರ್ಬಹಿಃ ಪೂರುಷಕಾಲರೂಪೈಃ ।
ಪ್ರಯಚ್ಛತೋ ಮೃತ್ಯುಮುತಾಮೃತಂ ಚ
ಮಾಯಾಮನುಷ್ಯಸ್ಯ ವದಸ್ವ ವಿದ್ವನ್ ॥ ೭ ॥

ಕೇವಲ ನನ್ನ ಮಾತಲ್ಲ, ಅವನು ಸಮಸ್ತ ಶರೀರಧಾರಿಗಳ ಒಳಗೆ ಅಂತರ್ಯಾಮಿ ಆತ್ಮರೂಪದಿಂದ ಇದ್ದು ಅಮೃತತ್ತ್ವವನ್ನು ಕರುಣಿಸುತ್ತಿರುವನು ಮತ್ತು ಹೊರಗೆ ಕಾಲರೂಪದಿಂದ ಇದ್ದು ಮೃತ್ಯುವನ್ನೊಡ್ಡುವನು.* ಮನುಷ್ಯರೂಪದಲ್ಲಿ ಕಾಣಿಸಿಕೊಳ್ಳುವುದು ಅವನ ಒಂದು ಲೀಲೆಯೇ ಆಗಿದೆ. ಅಂತಹವನ ಐಶ್ವರ್ಯ-ಮಾಧುರ್ಯಗಳಿಂದ ಕೂಡಿದ ಲೀಲೆಗಳನ್ನು ತಾವು ವರ್ಣಿಸಿರಿ.॥ ೭ ॥

ರೋಹಿಣ್ಯಾಸ್ತನಯಃ ಪ್ರೋಕ್ತೋ ರಾಮಃ ಸಂಕರ್ಷಣಸ್ತ್ವಯಾ ।
ದೇವಕ್ಯಾ ಗರ್ಭಸಂಬಂಧಃ ಕುತೋ ದೇಹಾಂತರಂ ವಿನಾ ॥ ೮ ॥

ಪೂಜ್ಯರೇ! ಸಂಕರ್ಷಣನೆಂದು ಪ್ರಸಿದ್ಧನಾದ ಬಲರಾಮನು ರೋಹಿಣೀದೇವಿಯ ಪುತ್ರನೆಂದು ನೀವೇ ಹೇಳಿದ್ದಿರಿ. ಬಳಿಕ ಇದೇ ಬಲರಾಮನನ್ನು ದೇವಕಿಯ ಪುತ್ರನೆಂದೂ ಹೇಳಿದಿರಿ. ಜನ್ಮಾಂತರ ವಿಲ್ಲದೆ ಒಂದೇ ಜನ್ಮದಲ್ಲಿ ಇಬ್ಬರು ತಾಯಂದಿರಿಗೆ ಮಗನಾಗಲು ಹೇಗೆ ಸಾಧ್ಯವಾಗುವುದು? ॥ ೮ ॥

ಕಸ್ಮಾನ್ಮುಕುಂದೋ ಭಗವಾನ್ಪಿತುರ್ಗೇಹಾದ್ವ್ರಜಂ ಗತಃ ।
ಕ್ವ ವಾಸಂ ಜ್ಞಾತಿಭಿಃ ಸಾರ್ಧಂ ಕೃತವಾನ್ಸಾತ್ವತಾಂ ಪತಿಃ ॥ ೯ ॥

ಅಸುರರಿಗೆ ಮುಕ್ತಿಯನ್ನು ಕರುಣಿಸುವವನೂ, ಭಕ್ತರಿಗೆ ಪ್ರೇಮವನ್ನು ವಿತರಿಸುವವನೂ ಆದ ಭಗವಾನ್ ಶ್ರೀಕೃಷ್ಣನು ತನ್ನ ವಾತ್ಸಲ್ಯ-ಸ್ನೇಹದಿಂದ ತುಂಬಿದ ತಂದೆಯ ಮನೆಯನ್ನು ಬಿಟ್ಟು ವ್ರಜಕ್ಕೆ ಏಕೆ ಹೋದನು? ಯದುವಂಶ ಶಿರೋಮಣಿ ಭಕ್ತವತ್ಸಲನಾದ ಪ್ರಭುವು ನಂದಾದಿ ಗೋಪ ಬಾಂಧವರೊಂದಿಗೆ ಎಲ್ಲೆಲ್ಲಿ ವಾಸಮಾಡಿದನು. ॥ ೯ ॥

ವ್ರಜೇ ವಸನ್ಕಿಮಕರೋನ್ಮಧುಪುರ್ಯಾಂ ಚ ಕೇಶವಃ ।
ಭ್ರಾತರಂ ಚಾವಧೀತ್ಕಂಸಂ ಮಾತುರದ್ಧಾತದರ್ಹಣಮ್ ॥ ೧೦ ॥

ಬ್ರಹ್ಮ-ರುದ್ರಾದಿಗಳಿಗೆ ನಿಯಾಮಕನಾದ ಕೇಶವನು ವ್ರಜದಲ್ಲಿ, ಮಥುರೆಯಲ್ಲಿ ನೆಲೆಸಿ ಯಾವ-ಯಾವ ಲೀಲೆಗಳನ್ನು ಮಾಡಿದನು? ಸ್ವಾಮಿ! ಅವನು ತನಗೆ ಸೋದರಮಾವನಾದ ಕಂಸನನ್ನು ತನ್ನ ಕೈಯ್ಯಾರೆ ಏಕೆ ಕೊಂದನು? ಏಕೆಂದರೆ, ಅವನು ತಾಯಿಗೆ ಸೋದರನಾಗಿದ್ದುದರಿಂದ ಶ್ರೀಕೃಷ್ಣನಿಂದ ವಧಿಸಲು ಅನರ್ಹನಾಗಿದ್ದನು.॥ ೧೦ ॥

ದೇಹಂ ಮಾನುಷಮಾಶ್ರಿತ್ಯ ಕತಿ ವರ್ಷಾಣಿ ವೃಷ್ಣಿಭಿಃ ।
ಯದುಪುರ್ಯಾಂ ಸಹಾವಾತ್ಸೀತ್ಪತ್ನ್ಯಃ ಕತ್ಯಭವನ್ಪ್ರಭೋಃ ॥ ೧೧ ॥

ಸಚ್ಚಿದಾನಂದ ಪ್ರಭುವು ಮನುಷ್ಯಶರೀರವನ್ನು ಆಶ್ರಯಿಸಿ ವೃಷ್ಣಿವಂಶೀಯರೊಡನೆ ಎಷ್ಟು ವರ್ಷಗಳವರೆಗೆ ವಾಸಿಸಿದನು? ಸರ್ವಶಕ್ತಿವಂತನಾದ ಶ್ರೀಕೃಷ್ಣನಿಗೆ ಎಷ್ಟು ಮಂದಿ ಪತ್ನಿಯರಿದ್ದರು? ॥ ೧೧ ॥

ಏತದನ್ಯಚ್ಚ ಸರ್ವಂ ಮೇ ಮುನೇ ಕೃಷ್ಣ ವಿಚೇಷ್ಟಿತಮ್ ।
ವಕ್ತುಮರ್ಹಸಿ ಸರ್ವಜ್ಞ ಶ್ರದ್ದಧಾನಾಯ ವಿಸ್ತೃತಮ್ ॥ ೧೨ ॥

ಮುನಿಶ್ರೇಷ್ಠರೇ! ನಾನು ಕೇಳಿರುವ ಎಲ್ಲ ಪ್ರಶ್ನೆಗಳಿಗೂ ತಾವು ದಯಮಾಡಿ ಉತ್ತರಿಸಬೇಕು. ನಾನು ಪ್ರಶ್ನಿಸದೇ ಇರುವ ಶ್ರೀಕೃಷ್ಣನ ಲೀಲಾವಿನೋದಗಳನ್ನೂ ವಿಸ್ತಾರವಾಗಿ ತಾವು ಹೇಳಿರಿ. ಏಕೆಂದರೆ, ತಾವು ಎಲ್ಲವನ್ನೂ ಬಲ್ಲವರಾಗಿದ್ದೀರಿ. ನಾನು ಶ್ರದ್ಧೆಯಿಂದ ಅದನ್ನು ಕೇಳಲಿಚ್ಛಿಸುತ್ತೇನೆ. ॥ ೧೨ ॥

ನೈಷಾತಿದುಃಸಹಾ ಕ್ಷುನ್ಮಾಂ ತ್ಯಕ್ತೋದಮಪಿ ಬಾಧತೇ ।
ಪಿಬಂತಂ ತ್ವನ್ಮುಖಾಂಭೋಜಚ್ಯುತಂ ಹರಿಕಥಾಮೃತಮ್ ॥ ೧೩ ॥

ಪೂಜ್ಯರೇ! ಅನ್ನದ ಮಾತಿರಲಿ, ನಾನು ಜಲವನ್ನೂ ತ್ಯಜಿಸಿ ಬಿಟ್ಟಿರುವೆನು. ಹೀಗಿದ್ದರೂ ಸಹಿಸಲು ಅಶಕ್ಯವಾದ ಹಸಿವು-ಬಾಯಾರಿಕೆಗಳು (ಆ ಕಾರಣದಿಂದಲೇ ನಾನು ಮುನಿಯ ಕತ್ತಿನಲ್ಲಿ ಸತ್ತ ಸರ್ಪವನ್ನು ಹಾಕಿದ ಅನ್ಯಾಯವನ್ನು ಮಾಡಿದ್ದೆ) ನನಗೆ ಬಾಧಿಸುವುದಿಲ್ಲ, ಏಕೆಂದರೆ, ತಮ್ಮ ಮುಖಾರವಿಂದದಿಂದ ಸ್ರವಿಸುತ್ತಿರುವ ಹರಿಕಥಾಮೃತವನ್ನು ಪಾನಮಾಡುತ್ತಿರುವನು. ॥ ೧೩ ॥

* ಸಮಸ್ತ ದೇಹಧಾರಿಗಳ ಅಂತಃಕರಣದಲ್ಲಿ ಅಂತರ್ಯಾಮಿಯಾಗಿ ನೆಲೆಸಿರುವ ಭಗವಂತನು ಅವರ ಜೀವನಕ್ಕೆ ಕಾರಣನಾಗಿರುವನು ಹಾಗೂ ಹೊರಗೆ ಕಾಲರೂಪದಿಂದಿದ್ದು ಅವನೇ ಅವರನ್ನು ನಾಶಮಾಡುತ್ತಾನೆ. ಆದ್ದರಿಂದ ಆತ್ಮಜ್ಞಾನಿಗಳಾದವರು ಅಂತರ್ದೃಷ್ಟಿಯಿಂದ ಆ ಅಂತರ್ಯಾಮಿಯನ್ನು ಉಪಾಸಿಸಿ ಮೋಕ್ಷವೆಂಬ ಅಮರ ಪದವನ್ನು ಹೊಂದುವರು. ವಿಷಯ ಪರಾಯಣ ಅಜ್ಞಾನಿಗಳು ಬಾಹ್ಯದೃಷ್ಟಿಯಿಂದ ವಿಷಯಚಿಂತನೆಯಲ್ಲೇ ತೊಡಗಿರುವವರು ಜನ್ಮ-ಮರಣರೂಪೀ ಮೃತ್ಯುವಿಗೆ ತುತ್ತಾಗುತ್ತಾರೆ.

*ಸೂತ ಉವಾಚ*

ಏವಂ ನಿಶಮ್ಯ ಭೃಗುನಂದನ ಸಾಧುವಾದಂ
ವೈಯಾಸಕಿಃ ಸ ಭಗವಾನಥ ವಿಷ್ಣುರಾತಮ್ ।
ಪ್ರತ್ಯರ್ಚ್ಯ ಕೃಷ್ಣಚರಿತಂ ಕಲಿಕಲ್ಮಷಘ್ನಂ
ವ್ಯಾಹರ್ತುಮಾರಭತ ಭಾಗವತಪ್ರಧಾನಃ ॥ ೧೪ ॥

*ಶ್ರೀಶುಕ ಉವಾಚ*

ಸಮ್ಯಗ್ವ್ಯವಸಿತಾ ಬುದ್ಧಿಸ್ತವ ರಾಜರ್ಷಿಸತ್ತಮ ।
ವಾಸುದೇವಕಥಾಯಾಂ ತೇ ಯಜ್ಜಾತಾ ನೈಷ್ಠಿಕೀ ರತಿಃ
॥ ೧೫ ॥

ವಾಸುದೇವಕಥಾಪ್ರಶ್ನಃ ಪುರುಷಾಂಸ್ತ್ರೀನ್ಪುನಾತಿ ಹಿ ।
ವಕ್ತಾರಂ ಪೃಚ್ಛಕಂ ಶ್ರೋತೄಂಸ್ತತ್ಪಾದಸಲಿಲಂ ಯಥಾ
॥ ೧೬ ॥

ಭೂಮಿರ್ದೃಪ್ತನೃಪವ್ಯಾಜದೈತ್ಯಾನೀಕಶತಾಯುತೈಃ ।
ಆಕ್ರಾಂತಾ ಭೂರಿಭಾರೇಣ ಬ್ರಹ್ಮಾಣಂ ಶರಣಂ ಯಯೌ
॥ ೧೭ ॥

ಗೌರ್ಭೂತ್ವಾಶ್ರುಮುಖೀ ಖಿನ್ನಾ ಕ್ರಂದಂತೀ ಕರುಣಂ ವಿಭೋಃ ।
ಉಪಸ್ಥಿತಾಂತಿಕೇ ತಸ್ಮೈ ವ್ಯಸನಂ ಸ್ವಮವೋಚತ
॥ ೧೮ ॥

ಬ್ರಹ್ಮಾ ತದುಪಧಾರ್ಯಾಥ ಸಹ ದೇವೈಸ್ತಯಾ ಸಹ ।
ಜಗಾಮ ಸತ್ರಿನಯನಸ್ತೀರಂ ಕ್ಷೀರಪಯೋನಿಧೇಃ
॥ ೧೯ ॥

ತತ್ರ ಗತ್ವಾ ಜಗನ್ನಾಥಂ ದೇವದೇವಂ ವೃಷಾಕಪಿಮ್ ।
ಪುರುಷಂ ಪುರುಷಸೂಕ್ತೇನ ಉಪತಸ್ಥೇ ಸಮಾಹಿತಃ
॥ ೨೦ ॥

ಗಿರಂ ಸಮಾಧೌ ಗಗನೇ ಸಮೀರಿತಾಂ
ನಿಶಮ್ಯ ವೇಧಾಸ್ತ್ರಿದಶಾನುವಾಚ ಹ ।
ಗಾಂ ಪೌರುಷೀಂ ಮೇ ಶೃಣುತಾಮರಾಃ ಪುನ-
ರ್ವಿಧೀಯತಾಮಾಶು ತಥೈವ ಮಾ ಚಿರಮ್ ॥ ೨೧ ॥

**ಸೂತ ಪುರಾಣಿಕರು ಹೇಳುತ್ತಾರೆ** – ಶೌನಕಾದಿ ಋಷಿಗಳೇ! ಭಗವಂತನ ಪ್ರೇಮಿಗಳಲ್ಲಿ ಅಗ್ರಗಣ್ಯರೂ, ಸರ್ವಜ್ಞರೂ ಆದ ಶ್ರೀಶುಕಮಹಾಮುನಿಗಳು ಪರೀಕ್ಷಿದ್ರಾಜನ ಇಂತಹ ಸಮೀಚೀನವಾದ ಪ್ರಶ್ನೆಯನ್ನು ಕೇಳಿ (ಸಂತರ ಸಭೆಯಲ್ಲಿ ಭಗವಂತನ ಲೀಲೆಗಳ ವರ್ಣನೆಯ ಉದ್ದೇಶವಿರುತ್ತದೆ.) ಅವನನ್ನು ಅಭಿನಂದಿಸಿ ಸಮಸ್ತ ಕಲಿಮಲದೋಷಗಳನ್ನು ಪೂರ್ಣವಾಗಿ ತೊಳೆದು ಹಾಕುವಂತಹ ಭಗವಾನ್ ಶ್ರೀಕೃಷ್ಣನ ಕರ್ಣಾನಂದಕರವಾದ ಲೀಲೆಗಳನ್ನು ವರ್ಣಿಸಲು ಪ್ರಾರಂಭಿಸಿದರು. ॥ ೧೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಭಗವಂತನ ಲೀಲಾಕಥೆಗಳ ರಸಿಕನಾದ ರಾಜರ್ಷಿ ಶ್ರೇಷ್ಠನೇ! ನೀನು ಭಗವತ್ಕಥೆಯನ್ನು ಕೇಳಲು ಮಾಡಿರುವ ನಿಶ್ಚಯವು ಸುಂದರವೂ, ಆದರಣೀಯವೂ ಆಗಿದೆ. ಏಕೆಂದರೆ, ಎಲ್ಲರ ಹೃದಯದಲ್ಲಿ ಆರಾಧ್ಯಮೂರ್ತಿಯಾಗಿ ನೆಲೆಸಿರುವ ಶ್ರೀವಾಸುದೇವನ ಲೀಲೆಗಳ ಕಥಾಶ್ರವಣ ಮಾಡುವುದರಲ್ಲಿ ನಿನಗೆ ಸಹಜವಾದ ಸುದೃಢಪ್ರೀತಿ ಉಂಟಾಗಿದೆಯಲ್ಲ! ॥ ೧೫ ॥ ವಿಷ್ಣುಪಾದೋದ್ಭವೆಯಾದ ಗಂಗಾದೇವಿಯ ಪವಿತ್ರತೀರ್ಥವು ಮೂರು ಲೋಕಗಳನ್ನು ಪಾವನಗೊಳಿಸುವಂತೆ ಶ್ರೀವಾಸುದೇವನ ಕಥೆಗಳ ಸಂಬಂಧವಾಗಿ ಕೇಳುವ ಪ್ರಶ್ನೆಯು ಪ್ರಶ್ನೆಮಾಡುವವನು, ಪ್ರವಚನಮಾಡುವವನು ಮತ್ತು ಕೇಳುವವನು ಹೀಗೆ ಮೂವರನ್ನೂ ಪವಿತ್ರಗೊಳಿಸುತ್ತದೆ. ॥ ೧೬ ॥

ಪರೀಕ್ಷಿತನೇ! ಹಿಂದೊಮ್ಮೆ ರಾಜರ ರೂಪದಲ್ಲಿ ದರ್ಪಿಷ್ಠರಾಗಿದ್ದ, ಅಧರ್ಮನಿಷ್ಠರಾಗಿದ್ದ ಸಾವಿರಾರು ಲಕ್ಷ-ಲಕ್ಷ ದೈತ್ಯರು ಭೂಮಂಡಲವನ್ನು ಆಕ್ರಮಿಸಿಕೊಂಡುಬಿಟ್ಟಿದ್ದರು. ಭೂಭಾರದಿಂದ ತತ್ತರಿಸಿದ ಭೂದೇವಿಯು ರಕ್ಷಣೆಗಾಗಿ ಬ್ರಹ್ಮದೇವರನ್ನು ಮೊರೆಹೊಕ್ಕಳು. ॥ ೧೭ ॥ ಆಗ ಭೂದೇವಿಯು ಗೋವಿನ ರೂಪವನ್ನು ಧರಿಸಿ ಬ್ರಹ್ಮನ ಬಳಿಗೆ ಬಂದಿದ್ದಳು. ಕಣ್ಣೀರನ್ನು ಸುರಿಸುತ್ತಾ ಅದು ಮುಖದ ಮೇಲೆಲ್ಲ ಹರಿಯುತ್ತಿತ್ತು. ಶರೀರವು ಕೃಶವಾಗಿದ್ದು ಅವಳು ಅತ್ಯಂತ ಖಿನ್ನಳಾಗಿ ಕರುಣಾಜನಕ ರೀತಿಯಲ್ಲಿ ಹಂಬಲಿಸುತ್ತಿದ್ದಳು. ಬ್ರಹ್ಮನ ಬಳಿಗೆ ಬಂದು ಆಕೆಯು ತನ್ನೆಲ್ಲ ಕಷ್ಟ ಕಾರ್ಪಣ್ಯಗಳನ್ನು ಹೇಳಿಕೊಂಡಳು. ॥ ೧೮ ॥ ಬ್ರಹ್ಮದೇವರು ತುಂಬಾ ಸಹಾನುಭೂತಿಯಿಂದ ಆಕೆಯ ದುಃಖತುಂಬಿದ ಕಥೆಯನ್ನು ಕೇಳಿದರು. ಬಳಿಕ ಅವರು ಭಗವಾನ್ ಶಂಕರ, ಇಂದ್ರಾದಿದೇವತೆಗಳು, ಗೋರೂಪದಲ್ಲಿದ್ದ ಭೂದೇವಿ ಇವರನ್ನೆಲ್ಲ ಜೊತೆಗೆ ಸೇರಿಸಿಕೊಂಡು ಕ್ಷೀರಸಾಗರದ ತಡಿಗೆ ಹೋದರು.॥ ೧೯ ॥ ಚತುರ್ಮುಖ ಬ್ರಹ್ಮದೇವರು ದೇವತೆಗಳೊಡನೆ ಕ್ಷೀರಸಮುದ್ರದ ತೀರಕ್ಕೆ ಹೋಗಿ ಸಮಸ್ತ ಜಗತ್ತಿಗೆ ಸ್ವಾಮಿಯಾದ, ದೇವದೇವನಾದ, ವೃಷಾಕಪಿಯಾದ, ಪರಮಪುರುಷನಾದ ಶ್ರೀಮನ್ನಾರಾಯಣನನ್ನು ಏಕಾಗ್ರಚಿತ್ತನಾಗಿ ಪುರುಷಸೂಕ್ತ ಮಂತ್ರಗಳಿಂದ ಸ್ತೋತ್ರ ಮಾಡಿದರು. ಸ್ತುತಿಸುತ್ತಿರುವಂತೆಯೇ, ಬ್ರಹ್ಮದೇವರು ಸಮಾಧಿಸ್ಥರಾದರು. ॥ ೨೦ ॥ ಅವರು ಸಮಾಧಿಸ್ಥಿತಿಯಲ್ಲೇ ಆಕಾಶದಲ್ಲಿ ಸುಸ್ಪಷ್ಟವಾಗಿ ಕೇಳಿಬಂದ ದಿವ್ಯವಾಣಿಯನ್ನು ಆಲಿಸಿ, ದೇವತೆಗಳಿಗೆ ಇಂತೆಂದರು – ದೇವತೆಗಳಿರಾ! ನಾನು ಭಗವಂತನ ವಾಣಿಯನ್ನು ಕೇಳಿದೆನು. ನೀವೆಲ್ಲರೂ ನನ್ನಿಂದ ಕೇಳಿ ಅದರಂತೆ ನಡೆಯಿರಿ. ವಿಳಂಬಮಾಡದೆ ಕಾರ್ಯಮಾಡಿರಿ. ॥ ೨೧ ॥

ಪುರೈವ ಪುಂಸಾವಧೃತೋ ಧರಾಜ್ವರೋ
ಭವದ್ಭಿರಂಶೈರ್ಯದುಷೂಪಜನ್ಯತಾಮ್ ।
ಸ ಯಾವದುರ್ವ್ಯಾ ಭರಮೀಶ್ವರೇಶ್ವರಃ
ಸ್ವಕಾಲಶಕ್ತ್ಯಾ ಕ್ಷಪಯಂಶ್ಚರೇದ್ಭುವಿ ॥ ೨೨ ॥

ವಸುದೇವಗೃಹೇ ಸಾಕ್ಷಾದ್ಭಗವಾನ್ಪುರುಷಃ ಪರಃ ।
ಜನಿಷ್ಯತೇ ತತ್ಪ್ರಿಯಾರ್ಥಂ ಸಂಭವಂತು ಸುರಸ್ತ್ರಿಯಃ ॥ ೨೩ ॥

ವಾಸುದೇವಕಲಾನಂತಃ ಸಹಸ್ರವದನಃ ಸ್ವರಾಟ್ ।
ಅಗ್ರತೋ ಭವಿತಾ ದೇವೋ ಹರೇಃ ಪ್ರಿಯಚಿಕೀರ್ಷಯಾ ॥ ೨೪ ॥

ವಿಷ್ಣೋರ್ಮಾಯಾ ಭಗವತೀ ಯಯಾ ಸಮ್ಮೋಹಿತಂ ಜಗತ್ ।
ಆದಿಷ್ಟಾ ಪ್ರಭುಣಾಂಶೇನ ಕಾರ್ಯಾರ್ಥೇ ಸಂಭವಿಷ್ಯತಿ ॥ ೨೫ ॥

ಶ್ರೀಶುಕ ಉವಾಚ

ಇತ್ಯಾದಿಶ್ಯಾಮರಗಣಾನ್ಪ್ರಜಾಪತಿಪತಿರ್ವಿಭುಃ ।
ಆಶ್ವಾಸ್ಯ ಚ ಮಹೀಂ ಗೀರ್ಭಿಃ ಸ್ವಧಾಮ ಪರಮಂ ಯಯೌ ॥ ೨೬ ॥

ಶೂರಸೇನೋ ಯದುಪತಿರ್ಮಥುರಾಮಾವಸನ್ಪುರೀಮ್ ।
ಮಾಥುರಾನ್ ಶೂರಸೇನಾಂಶ್ಚ ವಿಷಯಾನ್ಬುಭುಜೇ ಪುರಾ ॥ ೨೭ ॥

ರಾಜಧಾನೀ ತತಃ ಸಾಭೂತ್ಸರ್ವಯಾದವಭೂಭುಜಾಮ್ ।
ಮಥುರಾ ಭಗವಾನ್ಯತ್ರ ನಿತ್ಯಂ ಸಂನಿಹಿತೋ ಹರಿಃ ॥ ೨೮ ॥

ತಸ್ಯಾಂ ತು ಕರ್ಹಿಚಿಚ್ಛೌರಿರ್ವಸುದೇವಃ ಕೃತೋದ್ವಹಃ ।
ದೇವಕ್ಯಾ ಸೂರ್ಯಯಾ ಸಾರ್ಧಂ ಪ್ರಯಾಣೇ ರಥಮಾರುಹತ್ ॥ ೨೯ ॥

ಉಗ್ರಸೇನಸುತಃ ಕಂಸಃ ಸ್ವಸುಃ ಪ್ರಿಯಚಿಕೀರ್ಷಯಾ ।
ರಶ್ಮೀನ್ಹಯಾನಾಂ ಜಗ್ರಾಹ ರೌಕ್ಮೈ ರಥಶತೈರ್ವೃತಃ ॥ ೩೦ ॥

ಚತುಃಶತಂ ಪಾರಿಬರ್ಹಂ ಗಜಾನಾಂ ಹೇಮಮಾಲಿನಾಮ್ ।
ಅಶ್ವಾನಾಮಯುತಂ ಸಾರ್ಧಂ ರಥಾನಾಂ ಚ ತ್ರಿಷಟ್ ಶತಮ್ ॥ ೩೧ ॥

ದಾಸೀನಾಂ ಸುಕುಮಾರೀಣಾಂ ದ್ವೇ ಶತೇ ಸಮಲಂಕೃತೇ ।
ದುಹಿತ್ರೇ ದೇವಕಃ ಪ್ರಾದಾದ್ಯಾನೇ ದುಹಿತೃವತ್ಸಲಃ ॥ ೩೨ ॥

ಶಂಖತೂರ್ಯಮೃದಂಗಾಶ್ಚ ನೇದುರ್ದುಂದುಭಯಃ ಸಮಮ್ ।
ಪ್ರಯಾಣಪ್ರಕ್ರಮೇ ತಾವದ್ವರವಧ್ವೋಃ ಸುಮಂಗಲಮ್ ॥ ೩೩ ॥

ಭೂದೇವಿಗೆ ಒದಗಿದ ಕಷ್ಟವು ಈ ಹಿಂದೆಯೇ ಪರಮ ಪುರುಷನಿಗೆ ತಿಳಿದಿದೆ. ಅವನು ಈಶ್ವರರಿಗೂ ಈಶ್ವರನಾಗಿರುವನು. ತನ್ನ ಕಾಲಶಕ್ತಿಯ ಮೂಲಕ ಅವತರಿಸಿ ಭೂಭಾರವನ್ನು ಹರಿಸುತ್ತಾ ಪೃಥಿವಿಯಲ್ಲಿ ಲೀಲೆಗಳನ್ನು ನಡೆಸುವಾಗ ನೀವುಗಳೂ ಕೂಡ ತಮ್ಮ-ತಮ್ಮ ಅಂಶಗಳೊಡನೆ ಯದುಕುಲದಲ್ಲಿ ಹುಟ್ಟಿ ಅವನ ಲೀಲೆಯಲ್ಲಿ ಸಹಯೋಗಿಗಳಾಗಿರಿ. ॥ ೨೨ ॥ ವಸುದೇವನ ಮನೆಯಲ್ಲಿ ಸಾಕ್ಷಾತ್ ಪರಮಪುರುಷನಾದ ಶ್ರೀಹರಿಯು ಪ್ರಕಟಗೊಳ್ಳುವನು. ಅವನಿಗೆ ಪ್ರಿಯವನ್ನುಂಟುಮಾಡುವ ಸಲುವಾಗಿ ದೇವತಾಸ್ತ್ರೀಯರೂ ಯದುವಂಶದಲ್ಲಿ ಅವತರಿಸಲಿ. ॥ ೨೩ ॥ ಅನಂತನಾದ ವಾಸುದೇವನ ಕಲೆಯಿಂದ ಪ್ರಾದುರ್ಭೂತನಾಗಿ ಅನಂತನೇ ಆಗಿರುವ, ಸಹಸ್ರಮುಖನಾದ, ಸ್ವಯಂಪ್ರಕಾಶನಾದ ಶೇಷನು ಶ್ರೀಹರಿಗೆ ಪ್ರಿಯವನ್ನುಂಟುಮಾಡಲು ಯದುವಂಶದಲ್ಲಿ ಶ್ರೀಹರಿಯ ಅಗ್ರಜನಾಗಿ ಅವತರಿಸುವನು. ॥ ೨೪ ॥ ಜಗತ್ತನ್ನೇ ವಿಮೋಹಗೊಳಿಸುವ ಭಗವತಿ ವಿಷ್ಣುಮಾಯೆಯೂ ಪ್ರಭುವಿನಿಂದ ಆಜ್ಞಪ್ತಳಾಗಿ ಅವನ ಕಾರ್ಯಾರ್ಥವಾಗಿ ಅವನ ಅಂಶರೂಪದಿಂದಲೇ ಭುವಿಯಲ್ಲಿ ಅವತರಿಸುವಳು. ॥ ೨೫ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ಪ್ರಜಾಪತಿಗಳಿಗೆ ಸ್ವಾಮಿಯಾದ ಬ್ರಹ್ಮದೇವರು ದೇವತೆಗಳಿಗೆ ಹೀಗೆ ಆದೇಶವನ್ನು ನೀಡಿ, ಭೂದೇವಿಯನ್ನು ಸಾಂತ್ವನಗೊಳಿಸಿ ಶ್ರೇಷ್ಠವಾದ ತಮ್ಮ ಸತ್ಯಲೋಕಕ್ಕೆ ಹೊರಟುಹೋದರು. ॥ ೨೬ ॥ ಹಿಂದೆ ಯದುವಂಶದಲ್ಲಿ ಶೂರಸೇನನೆಂಬ ರಾಜನಿದ್ದನು. ಅವನು ಮಥುರಾಪಟ್ಟಣದಲ್ಲಿದ್ದು ಮಥುರಾಮಂಡಲವನ್ನೂ, ಶೂರಸೇನ ಮಂಡಲವನ್ನೂ ಆಳುತ್ತಿದ್ದನು. ॥ ೨೭ ॥ ನಿತ್ಯನಿರಂತರ ಭಗವಾನ್ ಶ್ರೀಹರಿಯ ಸಾನ್ನಿಧ್ಯವನ್ನು ಹೊಂದಿದ್ದ ಆ ಮಥುರಾಪಟ್ಟಣವೇ ಸಮಸ್ತ ಯದುವಂಶೀಯ ರಾಜರಿಗೂ ರಾಜಧಾನಿಯಾಗಿತ್ತು. ॥ ೨೮ ॥ ಒಮ್ಮೆ ಮಥುರೆಯಲ್ಲಿ ಶೂರನ ಪುತ್ರನಾದ ವಸುದೇವನು ವಿವಾಹಮಾಡಿಕೊಂಡು ನೂತನ ವಧುವಾದ ದೇವಕಿಯೊಡನೆ ಮನೆಗೆ ಹೋಗಲು ರಥಾರೂಢನಾದನು. ॥ ೨೯ ॥ ಉಗ್ರಸೇನನ ಮಗನಾದ ಕಂಸನು ತನ್ನ ತಂಗಿಯಾದ ದೇವಕಿಗೆ ಸಂತೋಷವನ್ನುಂಟುಮಾಡಲು ಅವರ ರಥದ ವಾಘೆಯನ್ನು ತಾನೇ ಹಿಡಿದುಕೊಂಡು ರಥವನ್ನು ನಡೆಸತೊಡಗಿದನು. ಆ ದಿವ್ಯರಥವು ನೂರಾರು ಸುವರ್ಣಮಯವಾದ ರಥಗಳಿಂದ ಸಮಾವೃತವಾಗಿತ್ತು. ॥ ೩೦ ॥ ಮಗಳಲ್ಲಿ ವಿಶೇಷವಾದ ಅಕ್ಕರೆಯನ್ನು ಹೊಂದಿದ್ದ ದೇವಕನು ದೇವಕಿಗೆ ಬಳುವಳಿಯಾಗಿ ಚಿನ್ನದ ಹಾರಗಳಿಂದ ಅಲಂಕೃತವಾದ ನಾಲ್ಕುನೂರು ಆನೆಗಳೂ, ಹದಿನೈದುಸಾವಿರ ಕುದುರೆಗಳೂ, ಹದಿನೆಂಟುನೂರು ರಥಗಳೂ ಹಾಗೂ ಸುಂದರವಾದ ವಸ್ತ್ರಾಭೂಷಣಗಳಿಂದ ಅಲಂಕೃತರಾದ ಇನ್ನೂರು ಸುಂದರ ಸುಕುಮಾರಿ ದಾಸಿಯರನ್ನೂ ಕೊಟ್ಟನು. ॥ ೩೧-೩೨ ॥ ಆ ವಧೂವರರ ಪ್ರಯಾಣಕಾಲದಲ್ಲಿ ಮಂಗಳಾರ್ಥವಾಗಿ ಶಂಖ, ಭೇರಿ, ಮೃದಂಗ, ದುಂದುಭಿಗಳು ಏಕಕಾಲದಲ್ಲಿ ಮೊಳಗಿದವು. ॥ ೩೩ ॥

ಪಥಿ ಪ್ರಗ್ರಹಿಣಂ ಕಂಸಮಾಭಾಷ್ಯಾಹಾಶರೀರವಾಕ್ ।
ಅಸ್ಯಾಸ್ತ್ವಾಮಷ್ಟಮೋ ಗರ್ಭೋ ಹಂತಾ ಯಾಂ ವಹಸೇಽಬುಧ ॥ ೩೪ ॥

ಇತ್ಯುಕ್ತಃ ಸ ಖಲಃ ಪಾಪೋ ಭೋಜಾನಾಂ ಕುಲಪಾಂಸನಃ ।
ಭಗಿನೀಂ ಹಂತುಮಾರಬ್ಧಃ ಖಡ್ಗಪಾಣಿಃ ಕಚೇಽಗ್ರಹೀತ್ ॥ ೩೫ ॥

ತಂ ಜುಗುಪ್ಸಿತಕರ್ಮಾಣಂ ನೃಶಂಸಂ ನಿರಪತ್ರಪಮ್ ।
ವಸುದೇವೋ ಮಹಾಭಾಗ ಉವಾಚ ಪರಿಸಾನ್ತ್ವಯನ್ ॥ ೩೬ ॥

ವಸುದೇವ ಉವಾಚ

ಶ್ಲಾಘನೀಯಗುಣಃ ಶೂರೈರ್ಭವಾನ್ಭೋಜಯಶಸ್ಕರಃ ।
ಸ ಕಥಂ ಭಗಿನೀಂ ಹನ್ಯಾತ್ ಸ್ತ್ರಿಯಮುದ್ವಾಹಪರ್ವಣಿ ॥ ೩೭ ॥

ಮೃತ್ಯುರ್ಜನ್ಮವತಾಂ ವೀರ ದೇಹೇನ ಸಹ ಜಾಯತೇ ।
ಅದ್ಯ ವಾಬ್ದಶತಾಂತೇ ವಾ ಮೃತ್ಯುರ್ವೈ ಪ್ರಾಣಿನಾಂ ಧ್ರುವಃ ॥ ೩೮ ॥

ದೇಹೇ ಪಂಚತ್ವಮಾಪನ್ನೇ ದೇಹೀ ಕರ್ಮಾನುಗೋಽವಶಃ ।
ದೇಹಾಂತರಮನುಪ್ರಾಪ್ಯ ಪ್ರಾಕ್ತನಂ ತ್ಯಜತೇ ವಪುಃ ॥ ೩೯ ॥

ವ್ರಜಂಸ್ತಿಷ್ಠನ್ಪದೈಕೇನ ಯಥೈವೈಕೇನ ಗಚ್ಛತಿ ।
ಯಥಾ ತೃಣಜಲೂಕೈವಂ ದೇಹೀ ಕರ್ಮಗತಿಂ ಗತಃ ॥ ೪೦ ॥

ಸ್ವಪ್ನೇ ಯಥಾ ಪಶ್ಯತಿ ದೇಹಮೀದೃಶಂ
ಮನೋರಥೇನಾಭಿನಿವಿಷ್ಟಚೇತನಃ ।
ದೃಷ್ಟಶ್ರುತಾಭ್ಯಾಂ ಮನಸಾನುಚಿಂತಯನ್
ಪ್ರಪದ್ಯತೇ ತತ್ಕಿಮಪಿ ಹ್ಯಪಸ್ಮೃತಿಃ ॥ ೪೧ ॥

ಹೀಗೆ ಬಾಜಾಬಜಂತ್ರಿಗಳೊಂದಿಗೆ ಸಂಭ್ರಮದಿಂದ ಕಂಸನು ರಥವನ್ನು ನಡೆಸುತ್ತಿರುವಾಗ ಅವನನ್ನು ಸಂಬೋಧಿಸಿ ಆಕಾಶವಾಣಿಯೊಂದು ಇಂತು ನುಡಿಯಿತು – "ಎಲೈ ಮೂರ್ಖನೇ! ಈಗ ನೀನು ಸಂಭ್ರಮದಿಂದ ಕರೆದೊಯ್ಯುತ್ತಿರುವ ನಿನ್ನ ಈ ತಂಗಿಯ ಎಂಟನೆಯ ಗರ್ಭದಲ್ಲಿ ಹುಟ್ಟುವ ಶಿಶುವು ನಿನಗೆ ಮೃತ್ಯುವಾಗಲಿದೆ." ॥ ೩೪ ॥ ಕಂಸನು ಮಹಾಪಾಪಿಯಾಗಿದ್ದನು. ಅವನ ದುಷ್ಟತನಕ್ಕೆ ಎಲ್ಲೆಯೇ ಇರಲಿಲ್ಲ. ಅವನು ಭೋಜವಂಶಕ್ಕೆ ಕಲಂಕಪ್ರಾಯನಾಗಿದ್ದನು. ಆಕಾಶವಾಣಿಯನ್ನೂ ಕೇಳುತ್ತಲೇ ಖಡ್ಗವನ್ನೆತ್ತಿಕೊಂಡು ತಂಗಿಯ ಮುಡಿಯನ್ನು ಹಿಡಿದು ಅವಳನ್ನು ಕೊಲ್ಲಲು ಸಿದ್ಧನಾದನು. ॥ ೩೫ ॥ ಅವನು ಅತ್ಯಂತ ಕ್ರೂರನಾಗಿದ್ದು, ಪಾಪಕರ್ಮಗಳನ್ನು ಮಾಡಲು ನಿರ್ಲಜ್ಜನೂ ಆಗಿದ್ದನು. ಅವನ ಈ ಕೃತ್ಯವನ್ನು ನೋಡಿ ಮಹಾನುಭಾವನಾದ ವಸುದೇವನು ಅವನನ್ನು ಸಮಾಧಾನಗೊಳಿಸುತ್ತಾ ಇಂತೆಂದನು. ॥ ೩೬ ॥

**ವಸುದೇವನು ಹೇಳಿದನು** – ರಾಜಕುಮಾರ! ನಿನ್ನ ಗುಣಗಳನ್ನು ಶೂರರು ಹೊಗಳುತ್ತಾರೆ. ನೀನು ಭೋಜವಂಶಕ್ಕೆ ಯಶೋದಾಯಕನಾಗಿರುವೆ. ಅಂತಹ ನೀನು ಒಬ್ಬ ಸ್ತ್ರೀಯನ್ನು, ಅದರಲ್ಲಿಯೂ ಸಾಕ್ಷಾತ್ ತಂಗಿಯನ್ನು, ಇನ್ನು ಮದುವಣಗಿತ್ತಿಯನ್ನು ವಿವಾಹದ ಶುಭಸಮಯದಲ್ಲಿ ಹೇಗೆ ತಾನೇ ಕೊಲ್ಲಬಲ್ಲೆ? ॥ ೩೭ ॥ ವೀರನೇ! ಈ ಲೋಕದಲ್ಲಿ ಜನ್ಮವನ್ನು ತಾಳಿದವರ ಶರೀರದೊಡನೆಯೇ ಮೃತ್ಯುವು ಹುಟ್ಟಿಕೊಳ್ಳುತ್ತದೆ. ಮೃತ್ಯುವು ಇಂದು ಬರಬಹುದು, ಇಲ್ಲವೇ ನೂರುವರ್ಷದ ಮೇಲೆ ಬರಬಹುದು. ಆದರೆ ಹುಟ್ಟಿದ ಪ್ರಾಣಿಗಳಿಗೆ ಮರಣವೆಂಬುದು ಶತಃಸಿದ್ಧ. ॥ ೩೮ ॥ ದೇಹವು ಪಂಚಭೂತಗಳಲ್ಲಿ ಲೀನವಾಗಿ ಹೋದಾಗ (ಸತ್ತಾಗ) ಜೀವನು ಅಸ್ವತಂತ್ರನಾಗಿ ತನ್ನ ಕರ್ಮಕ್ಕೆ ಅನುಸಾರ ಬೇರೆ ಶರೀರವನ್ನು ಪಡೆದು ತನ್ನ ಮೊದಲ ಶರೀರವನ್ನು ಬಿಟ್ಟುಬಿಡುತ್ತಾನೆ. ॥ ೩೯ ॥ ಮನುಷ್ಯನು ನಡೆಯುವಾಗ ಒಂದು ಕಾಲನ್ನು ಊರಿ ಇನ್ನೊಂದನ್ನು ಮೇಲೆತ್ತುವನು ಹಾಗೂ ಜಿಗಣೆಯು ಮುಂದಿನ ಹುಲ್ಲುಕಡ್ಡಿಯನ್ನು ಹಿಡಿದ ನಂತರ ಹಿಂದಿನ ಹುಲ್ಲುಕಡ್ಡಿಯನ್ನು ಬಿಡುವಂತೆಯೇ ಜೀವನು ತನ್ನ ಕರ್ಮಕ್ಕನುಸಾರವಾಗಿ ಯಾವುದೋ ಶರೀರವನ್ನು ಪಡೆದ ನಂತರವೇ ಈ ಶರೀರವನ್ನು ಬಿಡುತ್ತಾನೆ. ॥ ೪೦ ॥ ಒಬ್ಬ ಮನುಷ್ಯನು ಜಾಗ್ರತಾವಸ್ಥೆಯಲ್ಲಿ ರಾಜನ ಐಶ್ವರ್ಯವನ್ನು ನೋಡಿ, ಇಂದ್ರಾದಿಗಳ ಐಶ್ವರ್ಯವನ್ನು ಕೇಳಿ, ಅದಕ್ಕೆ ಆಸೆಪಡುತ್ತಾ ಅದನ್ನೇ ಚಿಂತಿಸುತ್ತಾ-ಚಿಂತಿಸುತ್ತಾ, ಮೈಮರೆತುಬಿಡುತ್ತಾನೆ. ಸ್ವಪ್ನದಲ್ಲಿ ತನ್ನನ್ನು ರಾಜನೆಂದೋ, ಇಂದ್ರನೆಂದೋ ಅನುಭವ ಪಡೆಯುತ್ತಾನೆ. ಜೊತೆಗೆ ತನ್ನ ದಾರಿದ್ರ್ಯದ ಶರೀರವನ್ನು ಮರೆತುಬಿಡುತ್ತಾನೆ. ಕೆಲವೊಮ್ಮೆ ಎಚ್ಚರವಾಗಿರುವಾಗಲೇ ಮನೋರಾಜ್ಯವನ್ನು ಕಟ್ಟಿಕೊಂಡು ತನ್ಮಯನಾಗುತ್ತಾನೆ. ಅವನಿಗೆ ಸ್ಥೂಲಶರೀರದ ಎಚ್ಚರವೂ ಇರುವುದಿಲ್ಲ. ಹೀಗೆಯೇ ಜೀವನು ಕರ್ಮಕೃತ ಕಾಮನೆ ಮತ್ತು ಕಾಮನಾಕೃತ ಕರ್ಮಕ್ಕೆ ವಶನಾಗಿ ಇನ್ನೊಂದು ಶರೀರವನ್ನು ಹೊಂದುತ್ತಾನೆ ಹಾಗೂ ತನ್ನ ಮೊದಲಿನ ಶರೀರವನ್ನು ಮರೆತುಬಿಡುತ್ತಾನೆ. ॥ ೪೧ ॥

ಯತೋ ಯತೋ ಧಾವತಿ ದೈವಚೋದಿತಂ
ಮನೋ ವಿಕಾರಾತ್ಮಕಮಾಪ ಪಂಚಸು ।
ಗುಣೇಷು ಮಾಯಾರಚಿತೇಷು ದೇಹ್ಯಸೌ
ಪ್ರಪದ್ಯಮಾನಃ ಸಹ ತೇನ ಜಾಯತೇ ॥ ೪೨ ॥

ಜ್ಯೋತಿರ್ಯಥೈವೋದಕ ಪಾರ್ಥಿವೇಷ್ವದಃ
ಸಮೀರವೇಗಾನುಗತಂ ವಿಭಾವ್ಯತೇ ।
ಏವಂ ಸ್ವಮಾಯಾರಚಿತೇಷ್ವಸೌ ಪುಮಾನ್
ಗುಣೇಷು ರಾಗಾನುಗತೋ ವಿಮುಹ್ಯತಿ ॥ ೪೩ ॥

ತಸ್ಮಾನ್ನ ಕಸ್ಯಚಿದ್ದ್ರೋಹಮಾಚರೇತ್ಸ ತಥಾವಿಧಃ ।
ಆತ್ಮನಃ ಕ್ಷೇಮಮನ್ವಿಚ್ಛನ್ ದ್ರೋಗ್ಧುರ್ವೈ ಪರತೋ ಭಯಮ್
॥ ೪೪ ॥

ಏಷಾ ತವಾನುಜಾ ಬಾಲಾ ಕೃಪಣಾ ಪುತ್ರಿಕೋಪಮಾ ।
ಹಂತುಂ ನಾರ್ಹಸಿ ಕಲ್ಯಾಣೀಮಿಮಾಂ ತ್ವಂ ದೀನವತ್ಸಲಃ
॥ ೪೫ ॥

ಶ್ರೀಶುಕ ಉವಾಚ

ಏವಂ ಸ ಸಾಮಭಿರ್ಭೇದೈರ್ಬೋಧ್ಯಮಾನೋಽಪಿ ದಾರುಣಃ ।
ನ ನ್ಯವರ್ತತ ಕೌರವ್ಯ ಪುರುಷಾದಾನನುವ್ರತಃ
॥ ೪೬ ॥

ನಿರ್ಬಂಧಂ ತಸ್ಯ ತಂ ಜ್ಞಾತ್ವಾ ವಿಚಿಂತ್ಯಾನಕದುಂದುಭಿಃ ।
ಪ್ರಾಪ್ತಂ ಕಾಲಂ ಪ್ರತಿವ್ಯೋಢುಮಿದಂ ತತ್ರಾನ್ವಪದ್ಯತ
॥ ೪೭ ॥

ಮೃತ್ಯುರ್ಬುದ್ಧಿಮತಾಪೋಹ್ಯೋ ಯಾವದ್ಬುದ್ಧಿಬಲೋದಯಮ್ ।
ಯದ್ಯಸೌ ನ ನಿವರ್ತೇತ ನಾಪರಾಧೋಽಸ್ತಿ ದೇಹಿನಃ
॥ ೪೮ ॥

ಪ್ರದಾಯ ಮೃತ್ಯವೇ ಪುತ್ರಾನ್ಮೋಚಯೇ ಕೃಪಣಾಮಿಮಾಮ್ ।
ಸುತಾ ಮೇ ಯದಿ ಜಾಯೇರನ್ಮೃತ್ಯುರ್ವಾ ನ ಮ್ರಿಯೇತ ಚೇತ್
॥ ೪೯ ॥

ವಿಪರ್ಯಯೋ ವಾ ಕಿಂ ನ ಸ್ಯಾದ್ಗತಿರ್ಧಾತುರ್ದುರತ್ಯಯಾ ।
ಉಪಸ್ಥಿತೋ ನಿವರ್ತೇತ ನಿವೃತ್ತಃ ಪುನರಾಪತೇತ್
॥ ೫೦ ॥

ಜೀವಿಯ ಮನಸ್ಸು ಅನೇಕ ವಿಕಾರಗಳ ಪುಂಜವಾಗಿದೆ. ದೇಹಾಂತ್ಯದ ಸಮಯದಲ್ಲಿ ಅವನು ಅನೇಕ ಜನ್ಮಗಳ ಸಂಚಿತ ಮತ್ತು ಪ್ರಾರಬ್ಧ ಕರ್ಮಗಳ ವಾಸನೆಗಳಿಗೆ ಅಧೀನನಾಗಿ, ಮಾಯೆಯಿಂದ ರಚಿತವಾದ ಅನೇಕ ಪಾಂಚಭೌತಿಕ ದೇಹಗಳಲ್ಲಿನ ಯಾವ ಶರೀರವನ್ನು ಚಿಂತಿಸುವನೋ, ನಾನು ಇದೇ ಆಗಿದ್ದೇನೆ ಎಂದು ತಿಳಿದುಕೊಳ್ಳುವನೋ, ಅದೇ ಶರೀರವನ್ನು ಪಡೆದು ಅವನು ಹುಟ್ಟಬೇಕಾಗುತ್ತದೆ. ॥ ೪೨ ॥ ಸೂರ್ಯ-ಚಂದ್ರರೇ ಮುಂತಾದ ಜ್ಯೋತಿಗಳು ಗಡಿಗೆಯಲ್ಲಿರುವ ನೀರಿನಲ್ಲಿ ಅಥವಾ ಎಣ್ಣೆಯಲ್ಲಿ ಪ್ರತಿಬಿಂಬಿಸುತ್ತವೆ. ಗಾಳಿಯಿಂದ ನೀರು-ಎಣ್ಣೆ ಅಲುಗಾಡಿದರೆ ಅವರೂ ಅಲುಗಾಡುವಂತೆ ಕಾಣುತ್ತಾರೆ. ಹಾಗೆಯೇ ಜೀವನು ತನ್ನ ಸ್ವರೂಪದ ಅಜ್ಞಾನದಿಂದ ರಚಿತವಾದ ಶರೀರಗಳಲ್ಲಿ ಅನುರಾಗವನ್ನು ಹೊಂದಿ ಅವನ್ನೇ ತಾನು ಎಂದು ತಿಳಿದುಬಿಡುತ್ತಾನೆ. ಮೋಹವಶದಿಂದ ಅವುಗಳ ಬಂದು-ಹೋಗುವಿಕೆಯನ್ನೇ ತನ್ನ ಆವಾಗಮನವೆಂದು ತಿಳಿಯತೊಡಗುತ್ತಾನೆ. ॥ ೪೩ ॥ ಆದ್ದರಿಂದ ತನ್ನ ಶ್ರೇಯಸ್ಸನ್ನು ಬಯಸುವವನು ಯಾರಿಗೂ ದ್ರೋಹವನ್ನೆಸಗಬಾರದು. ಏಕೆಂದರೆ, ಜೀವನು ಕರ್ಮಕ್ಕೆ ಅಧೀನನಾದವನು. ದ್ರೋಹವೆಸಗಿದವನಿಗೆ ಈ ಲೋಕದಲ್ಲಿ ಶತ್ರುವಿನಿಂದಲೂ, ಪರಲೋಕದಲ್ಲಿ ಯಮಧರ್ಮನಿಂದಲೂ ಭಯಪಡಬೇಕಾಗುತ್ತದೆ. ॥ ೪೪ ॥ ಕಂಸನೇ ! ನಿನ್ನ ತಂಗಿಯಾದ ಇವಳು ಇನ್ನು ಬಾಲಕಿ, ದೀನಳಾಗಿರುವಳು. ನಿನ್ನ ಮಗಳಿಗೆ ಸಮಾನಳು. ವೈವಾಹಿಕ ಮಂಗಳ ಚಿಹ್ನೆಗಳು ಇನ್ನೂ ಇವಳ ಶರೀರದಲ್ಲಿ ಅಚ್ಚಳಿಯದಂತೆ ಇವೆ. ಇಂತಹ ಸ್ಥಿತಿಯಲ್ಲಿ ನಿನ್ನಂತಹ ದೀನವತ್ಸಲನು ಈ ಬಡಪಾಯಿಯನ್ನು ವಧಿಸುವುದು ಉಚಿತವಲ್ಲ. ॥ ೪೫ ॥

**ಶ್ರೀಶುಕ ಮಹಾಮುನಿಗಳು ಹೇಳುತ್ತಾರೆ –** ಪರೀಕ್ಷಿತನೇ ! ಹೀಗೆ ವಸುದೇವನು ಕಂಸನಿಗೆ ಸಾಮ-ದಾನ-ಭೇದೋಪಾಯಗಳಿಂದ ಹಿತವನ್ನು ಬೋಧಿಸಿದರೂ, ದಾರುಣನಾದ, ರಾಕ್ಷಸರ ಅನುಯಾಯಿಯಾದ ಆ ಕಂಸನು ತನ್ನ ನಿಶ್ಚಯದಿಂದ ಹಿಂದೆಗೆಯಲಿಲ್ಲ. ॥ ೪೬ ॥ ಆಗ ವಸುದೇವನು ಕಂಸನ ಹಟವನ್ನು ನೋಡಿ, ತತ್ಕಾಲದಲ್ಲಿ ಒದಗಿ ಬಂದಿರುವ ಆಪತ್ತನ್ನು ನಿವಾರಿಸಿಕೊಳ್ಳಲು ಹೀಗೆ ನಿಶ್ಚಯಿಸಿದನು. ॥ ೪೭ ॥ ಲೋಕದಲ್ಲಿ ಬುದ್ಧಿವಂತನಾದವನು ತನ್ನ ಬುದ್ಧಿಶಕ್ತಿ ಇರುವಷ್ಟನ್ನು ಉಪಯೋಗಿಸಿ ಮೃತ್ಯುವನ್ನು ಮುಂದೂಡಲು ಪ್ರಯತ್ನಿಸಬೇಕು. ಪ್ರಯತ್ನಿಸಿದರೂ ನಿವಾರಣೆಯಾಗದಿದ್ದರೆ ಮತ್ತೆ ಪ್ರಯತ್ನಿಸುವವನಲ್ಲಿ ದೋಷವಿರುವುದಿಲ್ಲ. ಕರ್ತವ್ಯಲೋಪವಾಗುವುದಿಲ್ಲ. ॥ ೪೮ ॥ ಆದಕ್ಕಾಗಿ ಈ ಮೃತ್ಯುರೂಪೀ ಕಂಸನಿಗೆ ಇವಳಲ್ಲಿ ಹುಟ್ಟುವ ಪುತ್ರರನ್ನು ಕೊಟ್ಟುಬಿಡುವ ಪ್ರತಿಜ್ಞೆಯನ್ನು ಮಾಡಿ ನಾನು ದೀನಳಾದ ದೇವಕಿಯನ್ನು ಉಳಿಸುವೆನು. ಈಕೆಯಲ್ಲಿ ನನಗೆ ಮಕ್ಕಳಾಗಿಯೂ ಈ ಕಂಸನು ಸಾಯದಿದ್ದರೆ ದೈವೇಚ್ಛೆಯಿದ್ದಂತಾಗಲೀ. ॥ ೪೯ ॥ ಈ ವಿಷಯದಲ್ಲಿ ವ್ಯತ್ಯಾಸವಾದರೂ ಏಕಾಗಬಾರದು ? ನನ್ನ ಮಗನೇ ಇವನನ್ನು ಕೊಂದುಹಾಕಲೂಬಹುದು. ಏಕೆಂದರೆ, ದೈವಗತಿಯು ದಾಟಲು ಅಸಾಧ್ಯವಾದುದು. ಅದನ್ನು ಮೀರಿ ನಡೆಯಲು ಯಾರಿಂದಲೂ ಸಾಧ್ಯವಿಲ್ಲ. ಸನ್ನಿಹಿತವಾದ ಮೃತ್ಯುವೂ ತಪ್ಪಿಹೋಗ ಬಹುದು ; ತಪ್ಪಿಹೋದ ಮೃತ್ಯುವೂ ಪುನಃ ಬಳಿಗೆ ಬರಬಹುದು. ॥ ೫೦ ॥

ಅಗ್ನೇರ್ಯಥಾ ದಾರುವಿಯೋಗಯೋಗಯೋ-
ರದೃಷ್ಟತೋಽನ್ಯನ್ನ ನಿಮಿತ್ತಮಸ್ತಿ ।
ಏವಂ ಹಿ ಜಂತೋರಪಿ ದುರ್ವಿಭಾವ್ಯಃ
ಶರೀರಸಂಯೋಗವಿಯೋಗ ಹೇತುಃ ॥ ೫೧ ॥

ಏವಂ ವಿಮೃಶ್ಯ ತಂ ಪಾಪಂ ಯಾವದಾತ್ಮನಿದರ್ಶನಮ್ ।
ಪೂಜಯಾಮಾಸ ವೈ ಶೌರಿರ್ಬಹುಮಾನಪುರಃಸರಮ್
॥ ೫೨ ॥

ಪ್ರಸನ್ನವದನಾಂಭೋಜೋ ನೃಶಂಸಂ ನಿರಪತ್ರಪಮ್ ।
ಮನಸಾ ದೂಯಮಾನೇನ ವಿಹಸನ್ನಿದಮಬ್ರವೀತ್
॥ ೫೩ ॥

*ವಸುದೇವ ಉವಾಚ*

ನ ಹ್ಯಸ್ಯಾಸ್ತೇ ಭಯಂ ಸೌಮ್ಯ ಯದ್ವಾಗಾಹಾಶರೀರಿಣೀ ।
ಪುತ್ರಾನ್ಸಮರ್ಪಯಿಷ್ಯೇಽಸ್ಯಾ ಯತಸ್ತೇ ಭಯಮುತ್ಥಿತಮ್
॥ ೫೪ ॥

*ಶ್ರೀಶುಕ ಉವಾಚ*

ಸ್ವಸುರ್ವಧಾನ್ನಿವವೃತೇ ಕಂಸಸ್ತದ್ವಾಕ್ಯಸಾರವಿತ್ ।
ವಸುದೇವೋಽಪಿ ತಂ ಪ್ರೀತಃ ಪ್ರಶಸ್ಯ ಪ್ರಾವಿಶದ್ಗೃಹಮ್
॥ ೫೫ ॥

ಅಥ ಕಾಲ ಉಪಾವೃತ್ತೇ ದೇವಕೀ ಸರ್ವದೇವತಾ ।
ಪುತ್ರಾನ್ಪ್ರಸುಷುವೇ ಚಾಷ್ಟೌ ಕನ್ಯಾಂ ಚೈವಾನುವತ್ಸರಮ್
॥ ೫೬ ॥

ಕೀರ್ತಿಮಂತಂ ಪ್ರಥಮಜಂ ಕಂಸಾಯಾನಕದುಂದುಭಿಃ ।
ಅರ್ಪಯಾಮಾಸ ಕೃಚ್ಛ್ರೇಣ ಸೋಽನೃತಾದತಿವಿಹ್ವಲಃ
॥ ೫೭ ॥

ಕಿಂ ದುಃಸಹಂ ನು ಸಾಧೂನಾಂ ವಿದುಷಾಂ ಕಿಮಪೇಕ್ಷಿತಮ್ ।
ಕಿಮಕಾರ್ಯಂ ಕದರ್ಯಾಣಾಂ ದುಸ್ತ್ಯಜಂ ಕಿಂ ಧೃತಾತ್ಮನಾಮ್
॥ ೫೮ ॥

ದೃಷ್ಟ್ವಾ ಸಮತ್ವಂ ತಚ್ಛೌರೇಃ ಸತ್ಯೇ ಚೈವ ವ್ಯವಸ್ಥಿತಿಮ್ ।
ಕಂಸಸ್ತುಷ್ಟಮನಾ ರಾಜನ್ಪ್ರಹಸನ್ನಿದಮಬ್ರವೀತ್
॥ ೫೯ ॥

ಪ್ರತಿಯಾತು ಕುಮಾರೋಽಯಂ ನ ಹ್ಯಸ್ಮಾದಸ್ತಿ ಮೇ ಭಯಮ್ ।
ಅಷ್ಟಮಾದ್ಯುವಯೋರ್ಗರ್ಭಾನ್ಮೃತ್ಯುರ್ಮೇ ವಿಹಿತಃ ಕಿಲ
॥ ೬೦ ॥

ಕಾಡಿಗೆ ಬೆಂಕಿ ತಗುಲಿದಾಗ ಯಾವ ಕಟ್ಟಿಗೆ ಸುಟ್ಟೀತು, ಯಾವುದು ಸುಡದಿರಬಹುದು! ದೂರದಲ್ಲಿರುವುದು ಸುಟ್ಟು ಹೋಗಿ ಹತ್ತಿರದಲ್ಲಿರುವುದು ಸುಡಲಾರದು. ಇವೆಲ್ಲವೂ ಅದೃಷ್ಟವಲ್ಲದೆ ಬೇರೆ ಯಾವ ಕಾರಣವೂ ಇರುವುದಿಲ್ಲ. ಹಾಗೆಯೇ ಯಾವ ಜೀವಿಯ ಯಾವ ಶರೀರವು ಉಳಿಯುವುದು, ಯಾವ ಕಾರಣದಿಂದ ಯಾವ ಶರೀರ ನಾಶವಾದೀತು ಇದನ್ನು ತಿಳಿಯು ವುದು ಬಹಳ ಕಷ್ಟವಾಗಿದೆ. ॥ ೫೧ ॥ ವಸುದೇವನು ತನ್ನ ಶ್ರೇಷ್ಠ ವಾದ ಬುದ್ಧಿಯಿಂದ ಹೀಗೆ ನಿಶ್ಚಯಿಸಿ ಬಹುಮಾನ ಪುರಸ್ಸರವಾಗಿ ಕ್ರೂರಿಯಾದ ಕಂಸನನ್ನು ಬಹಳ ಪ್ರಶಂಸೆ ಮಾಡಿದನು. ॥ ೫೨ ॥ ಪರೀಕ್ಷಿತನೇ! ಕಂಸನು ಮಹಾಕ್ರೂರಿಯೂ, ನಿರ್ಲಜ್ಜನೂ ಆಗಿದ್ದನು. ಆ ಕಾರಣದಿಂದ ವಸುದೇವನ ಮನಸ್ಸಿನಲ್ಲಿ ಅತೀವ ಪೀಡನೆಯಾಗುತ್ತಿದ್ದರೂ, ಹೊರಗೆ ತೋರಿಸಿಕೊಳ್ಳದೆ ಪ್ರಫುಲ್ಲಿತ ಮುಖಕಮಲದಿಂದ ನಗು-ನಗುತ್ತಾ ಕಂಸನಲ್ಲಿ ಇಂತೆಂದನು – ॥ ೫೩ ॥

**ವಸುದೇವನು ಹೇಳಿದನು** – ಸೌಮ್ಯನೇ! ಆಕಾಶವಾಣಿಯು ನುಡಿದಂತೆ ನಿನಗೆ ದೇವಕಿಯಿಂದ ಯಾವ ಭಯವೂ ಇಲ್ಲ. ಭಯವಿರುವುದು ಅವಳ ಪುತ್ರರಿಂದ. ಆದ್ದರಿಂದ ನಾನು ಆಣೆಯಿಟ್ಟು ಹೇಳುತ್ತೇನೆ – 'ಇವಳಲ್ಲಿ ಹುಟ್ಟುವ ಮಕ್ಕಳನ್ನು ನಿನಗೆ ಒಪ್ಪಿಸಿ ಬಿಡುತ್ತೇನೆ.' ॥ ೫೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ವಸುದೇವನು ಸುಳ್ಳು ಹೇಳುತ್ತಿಲ್ಲವೆಂದೂ, ಅವನ ಮಾತು ಯುಕ್ತಿ-ಯುಕ್ತವಾಗಿದೆ ಎಂದು ಭಾವಿಸಿ ಕಂಸನು ತಂಗಿಯಾದ ದೇವಕಿಯನ್ನು ಕೊಲ್ಲದಿರಲು ನಿಶ್ಚಯಿಸಿದನು. ಇದರಿಂದ ಸಂತೋಷಗೊಂಡ ವಸುದೇವನು ಅವನನ್ನು ಹೊಗಳುತ್ತಾ ಪತ್ನಿಯೊಡನೆ ಮನೆಗೆ ಹೊರಟುಹೋದನು. ॥ ೫೫ ॥ ದೇವಕಿಯು ಸಾಧ್ವಿಶಿರೋಮಣಿಯಾಗಿದ್ದಳು. ಎಲ್ಲ ದೇವತೆಗಳು ಅವಳಲ್ಲಿ ವಾಸಿಸುತ್ತಿದ್ದರು. ಕಾಲವು ಕಳೆದಂತೆ ವರ್ಷಕ್ಕೊಂದರಂತೆ ದೇವಕಿಯ ಗರ್ಭದಿಂದ ಎಂಟು ಪುತ್ರರು ಓರ್ವ ಪುತ್ರಿಯೂ ಜನಿಸಿದರು. ॥ ೫೬ ॥ ಮೊದಲನೆಯ ಪುತ್ರನಾದ ಕೀರ್ತಿಮಂತನನ್ನು ವಸುದೇವನು ತಂದು ಕಂಸನಿಗೆ ಒಪ್ಪಿಸಿದನು. ವಸುದೇವನಿಗೆ ಮಗುವನ್ನು ಒಪ್ಪಿಸುವುದಕ್ಕಿಂತಲೂ, ಸುಳ್ಳುಗಾರನಾಗುವುದು ಅತಿ ಕಷ್ಟಕರವಾಗಿತ್ತು. ॥ ೫೭ ॥ ಪರೀಕ್ಷಿತನೇ! ಸತ್ಯ ಸಂಧರಾದ ಸತ್ಪುರುಷರು ದೊಡ್ಡ-ದೊಡ್ಡ ಕಷ್ಟಗಳನ್ನೂ ಸಹಿಸಿ ಕೊಳ್ಳುವರು. ಜ್ಞಾನಿಗಳಿಗಾದರೋ ಯಾವುದರ ಅಪೇಕ್ಷೆಯೂ ಇರುವುದಿಲ್ಲ. ನೀಚ-ಪುರುಷರು ನೀಚಾತಿನೀಚ ಕೆಲಸವನ್ನೂ ಮಾಡಿಬಿಡುತ್ತಾರೆ. ಜಿತೇಂದ್ರಿಯರಾದವರು ಭಗವಂತನನ್ನು ಹೃದಯದಲ್ಲಿ ಧರಿಸಿಕೊಂಡಿರುವರು. ಅವರು ಎಲ್ಲವನ್ನೂ ತ್ಯಾಗ ಮಾಡಬಲ್ಲರು. ॥ ೫೮ ॥ ವಸುದೇವನಿಗೆ ತನ್ನ ಪುತ್ರನ ಜೀವನ ಮೃತ್ಯುವಿನಲ್ಲಿ ಸಮಭಾವವಿದೆ ಹಾಗೂ ಅವನು ಸತ್ಯನಿಷ್ಠನಾಗಿದ್ದಾನೆ ಎಂಬುದನ್ನು ನೋಡಿ ಕಂಸನು ತುಂಬಾ ಸಂತೋಷಗೊಂಡು ನಗುತ್ತಾ ಶೌರಿಯಲ್ಲಿ ಹೇಳಿದನು – ॥ ೫೯ ॥

ವಸುದೇವನೇ! ನೀನು ಈ ಹಸುಳೆಯನ್ನು ತೆಗೆದುಕೊಂಡು ಹೋಗು. ಇದರಿಂದ ನನಗೇನೂ ಭಯವಿಲ್ಲ. ಏಕೆಂದರೆ, 'ಆಕಾಶವಾಣಿಯು ನುಡಿದುದು – ದೇವಕಿಯ ಎಂಟನೆಯ ಗರ್ಭದಿಂದ ಹುಟ್ಟಿದವನಿಂದ ನಿನ್ನ ಮೃತ್ಯುವಾದೀತು' ಎಂದಿದೆಯಲ್ಲ. ॥ ೬೦ ॥

ತಥೇತಿ ಸುತಮಾದಾಯ ಯಯಾವಾನಕದುಂದುಭಿಃ ।
ನಾಭ್ಯನಂದತ ತದ್ವಾಕ್ಯಮಸತೋಽವಿಜಿತಾತ್ಮನಃ ॥ ೬೧ ॥

ನಂದಾದ್ಯಾ ಯೇ ವ್ರಜೇ ಗೋಪಾ ಯಾಶ್ಚಾಮೀಷಾಂ ಚ ಯೋಷಿತಃ ।
ವೃಷ್ಣಯೋ ವಸುದೇವಾದ್ಯಾ ದೇವಕ್ಯಾದ್ಯಾ ಯದುಸ್ತ್ರಿಯಃ ॥ ೬೨ ॥

ಸರ್ವೇ ವೈ ದೇವತಾಪ್ರಾಯಾ ಉಭಯೋರಪಿ ಭಾರತ ।
ಜ್ಞಾತಯೋ ಬಂಧುಸುಹೃದೋ ಯೇ ಚ ಕಂಸಮನುವ್ರತಾಃ ॥ ೬೩ ॥

ಏತತ್ ಕಂಸಾಯ ಭಗವಾನ್ ಶಶಂಸಾಭ್ಯೇತ್ಯ ನಾರದಃ ।
ಭೂಮೇರ್ಭಾರಾಯಮಾಣಾನಾಂ ದೈತ್ಯಾನಾಂ ಚ ವಧೋದ್ಯಮಮ್ ॥ ೬೪ ॥

ಋಷೇರ್ವಿನಿರ್ಗಮೇ ಕಂಸೋ ಯದೂನ್ಮತ್ವಾ ಸುರಾನಿತಿ ।
ದೇವಕ್ಯಾ ಗರ್ಭಸಂಭೂತಂ ವಿಷ್ಣುಂ ಚ ಸ್ವವಧಂ ಪ್ರತಿ ॥ ೬೫ ॥

ದೇವಕೀಂ ವಸುದೇವಂ ಚ ನಿಗೃಹ್ಯ ನಿಗಡೈರ್ಗೃಹೇ ।
ಜಾತಂ ಜಾತಮಹನ್ಪುತ್ರಂ ತಯೋರಜನಶಂಕಯಾ ॥ ೬೬ ॥

ಮಾತರಂ ಪಿತರಂ ಭ್ರಾತೄನ್ಸರ್ವಾಂಶ್ಚ ಸುಹೃದಸ್ತಥಾ ।
ಘ್ನಂತಿ ಹ್ಯಸುತೃಪೋ ಲುಬ್ಧಾ ರಾಜಾನಃ ಪ್ರಾಯಶೋ ಭುವಿ ॥ ೬೭ ॥

ಆತ್ಮಾನಮಿಹ ಸಂಜಾತಂ ಜಾನನ್ಪ್ರಾಗ್ವಿಷ್ಣುನಾ ಹತಮ್ ।
ಮಹಾಸುರಂ ಕಾಲನೇಮಿಂ ಯದುಭಿಃ ಸ ವ್ಯರುಧ್ಯತ ॥ ೬೮ ॥

ಉಗ್ರಸೇನಂ ಚ ಪಿತರಂ ಯದುಭೋಜಾಂಧಕಾಧಿಪಮ್ ।
ಸ್ವಯಂ ನಿಗೃಹ್ಯ ಬುಭುಜೇ ಶೂರಸೇನಾನ್ಮಹಾಬಲಃ ॥ ೬೯ ॥

ಕಂಸನ ಮಾತಿನಂತೆ ವಸುದೇವನು ಶಿಶುವನ್ನು ಎತ್ತಿಕೊಂಡು ಮನೆಗೆ ಮರಳಿದನು. ಆದರೆ ಕಂಸನು ಅತಿದುಷ್ಟನಾಗಿದ್ದು, ಅವನ ಮನಸ್ಸು ಅವನ ಹತೋಟಿಯಲ್ಲಿಲ್ಲ, ಮರುಕ್ಷಣದಲ್ಲೇ ಬದಲಾಗಬಹುದು ಎಂಬುದನ್ನು ವಸುದೇವನು ಬಲ್ಲನು. ಆದ್ದರಿಂದ ಅವನಿಗೆ ಕಂಸನ ಮಾತಿನಲ್ಲಿ ವಿಶ್ವಾಸ ಉಂಟಾಗಲಿಲ್ಲ. ॥ ೬೧ ॥

ಪರೀಕ್ಷಿತನೇ! ಇತ್ತ ದೇವಋಷಿಗಳಾದ ನಾರದರು ಕಂಸನ ಬಳಿಗೆ ಬಂದು ಕಂಸನಿಂದ ಸತ್ಕೃತರಾಗಿ ಅವನಿಗೆ ಇಂತೆಂದರು – 'ಎಲೈ ಕಂಸನೇ! ವ್ರಜದಲ್ಲಿ ವಾಸಿಸುವ ನಂದನೇ ಮೊದಲಾದ ಗೋಪರೂ, ಅವನ ಪತ್ನಿಯರೂ, ವಸುದೇವನೇ ಮೊದಲಾದ ವೃಷ್ಣಿವಂಶೀಯ ಯಾದವರೂ, ದೇವಕಿಯೇ ಮೊದಲಾದ ಸ್ತ್ರೀಯರೂ ಹೀಗೆ ನಂದ-ವಸುದೇವರ ಜ್ಞಾತಿಬಾಂಧವರೆಲ್ಲರೂ ದೈವಾಂಶಸಂಭೂತರು. ಈ ಸಮಯದಲ್ಲಿ ನಿನ್ನ ಸೇವೆಯಲ್ಲಿರುವವರೆಲ್ಲರೂ ದೇವತೆಗಳೇ ಆಗಿದ್ದಾರೆ. ದೈತ್ಯರ ಪ್ರಾಬಲ್ಯವು ಹೆಚ್ಚಾಗಿದ್ದು ಪೃಥಿವಿಯ ಭಾರವು ಹೆಚ್ಚಾಗಿದೆ. ಆದ್ದರಿಂದ ದೈತ್ಯರನ್ನು ವಧಿಸಲು ದೇವತೆಗಳೆಲ್ಲ ಸೇರಿ ಕಾರ್ಯಕ್ರಮವನ್ನು ರೂಪಿಸುತ್ತಿದ್ದಾರೆ. ಇರುವ ವಿಷಯ ನಿನಗೆ ಅರುಹಿದೆನು. ನೀನು ಜಾಗರೂಕನಾಗಿರು' ಎಂದು ಹೇಳಿದರು. ॥ ೬೨-೬೪ ॥ ದೇವಋಷಿ ನಾರದರು ಇಷ್ಟು ಹೇಳಿ ಹೊರಟುಹೋದ ಬಳಿಕ ಕಂಸನಿಗೆ – ಈ ಯದುವಂಶೀಯರೆಲ್ಲರು ದೇವತೆಗಳು ಹಾಗೂ ದೇವಕಿಯ ಗರ್ಭದಿಂದ ಭಗವಾನ್ ವಿಷ್ಣುವೇ ನನ್ನನ್ನು ಕೊಲ್ಲಲು ಹುಟ್ಟಲಿರುವನು ಎಂದು ನಿಶ್ಚಯಿಸಿದನು. ಆದ್ದರಿಂದ ಅವನು ವಸುದೇವ ದೇವಕಿಯರಿಬ್ಬರನ್ನು ಸಂಕೋಲೆಗಳಿಂದ ಬಂಧಿಸಿ ಕಾರಾಗೃಹದಲ್ಲಿಟ್ಟನು. ಅವರಲ್ಲಿ ಹುಟ್ಟಿದ ಮಕ್ಕಳನ್ನು ಕೊಲ್ಲುತ್ತಾ ಹೋದನು. ಪ್ರತಿಬಾರಿಯೂ ಅವನಿಗೆ – 'ಎಲ್ಲಾದರೂ ವಿಷ್ಣುವೇ ಈ ಬಾಲಕನ ರೂಪದಲ್ಲಿ ಬಂದಿರಬಹುದೇ ?' ಎಂಬ ಸಂಶಯವು ಯಾವಾಗಲೂ ಇರುತ್ತಿತ್ತು. ॥ ೬೫-೬೬ ॥ ಪರೀಕ್ಷಿತನೇ! ಪ್ರಾಯಶಃ ಈ ಲೋಕದಲ್ಲಿ ತಮ್ಮ ಪ್ರಾಣಗಳನ್ನು ಪೋಷಿಸುವ ಲೋಭಿಗಳಾದ ರಾಜರು ತಮ್ಮ ಸ್ವಾರ್ಥಕ್ಕಾಗಿ ತಂದೆ-ತಾಯಿ, ಬಂಧು-ಬಾಂಧವರು ಹಾಗೂ ತಮ್ಮ ಅತ್ಯಂತ ಹಿತೈಷಿಗಳಾದ ಇಷ್ಟ-ಮಿತ್ರರನ್ನು ಕೊಂದುಬಿಡುವುದನ್ನು ನಾವು ನೋಡುತ್ತೇವೆ. ॥ ೬೭ ॥ ನಾನು ಮೊದಲು ಕಾಲನೇಮಿಯೆಂಬ ಅಸುರನಾಗಿದ್ದು, ವಿಷ್ಣುವು ನನ್ನನ್ನು ಕೊಂದುಬಿಟ್ಟಿರುವನೆಂದು ಕಂಸನಿಗೆ ತಿಳಿದಿತ್ತು. ಇದರಿಂದ ಅವನು ಯದುವಂಶೀಯರಲ್ಲಿ ಘೋರವಾದ ವಿರೋಧವನ್ನು ಕಟ್ಟಿಕೊಂಡನು. ॥ ೬೮ ॥ ಮಹಾಬಲಿಷ್ಠನಾದ ಕಂಸನು ಯದು, ಭೋಜ, ಅಂಧಕ ವಂಶಗಳಿಗೆ ಅಧಿನಾಯಕನಾಗಿದ್ದ ತನ್ನ ತಂದೆ ಉಗ್ರಸೇನನನ್ನೂ ಕಾರಾಗೃಹದಲ್ಲಿಟ್ಟು ಶೂರಸೇನ ರಾಜ್ಯವನ್ನು ತಾನೇ ಆಳತೊಡಗಿದನು. ॥ ೬೯ ॥

ಮೊದಲನೆಯ ಅಧ್ಯಾಯವು ಮುಗಿಯಿತು. ॥ ೧ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮಸ್ಕಂಧೇ ಪೂರ್ವಾರ್ಧೇ ಶ್ರೀಕೃಷ್ಣಾವತಾರೋಪಕ್ರಮೇ ಪ್ರಥಮೋಽಧ್ಯಾಯಃ ॥ ೧ ॥

# ಎರಡನೆಯ ಅಧ್ಯಾಯ

## ಭಗವಂತನು ದೇವಕಿಯ ಗರ್ಭವನ್ನು ಪ್ರವೇಶಿಸಿದುದು, ದೇವತೆಗಳಿಂದ ಗರ್ಭಸ್ತುತಿ

*ಶ್ರೀಶುಕ ಉವಾಚ*

ಪ್ರಲಂಬಬಕಚಾಣೂರತೃಣಾವರ್ತಮಹಾಶನೈಃ ।
ಮುಷ್ಟಿಕಾರಿಷ್ಟದ್ವಿವಿದಪೂತನಾಕೇಶಿಧೇನುಕೈಃ ॥ ೧ ॥

ಅನ್ಯೈಶ್ಚಾಸುರಭೂಪಾಲೈರ್ಬಾಣಭೌಮಾದಿಭಿರ್ಯುತಃ ।
ಯದೂನಾಂ ಕದನಂ ಚಕ್ರೇ ಬಲೀ ಮಾಗಧಸಂಶ್ರಯಃ ॥ ೨ ॥

ತೇ ಪೀಡಿತಾ ನಿವಿವಿಶುಃ ಕುರುಪಂಚಾಲಕೇಕಯಾನ್ ।
ಶಾಲ್ವಾನ್ವಿದರ್ಭಾನ್ನಿಷಧಾನ್ವಿದೇಹಾನ್ಕೋಸಲಾನಪಿ ॥ ೩ ॥

ಏಕೇ ತಮನುರುಂಧಾನಾ ಜ್ಞಾತಯಃ ಪರ್ಯುಪಾಸತೇ ।
ಹತೇಷು ಷಟ್ಸು ಬಾಲೇಷು ದೇವಕ್ಯಾ ಔಗ್ರಸೇನಿನಾ ॥ ೪ ॥

ಸಪ್ತಮೋ ವೈಷ್ಣವಂ ಧಾಮ ಯಮನಂತಂ ಪ್ರಚಕ್ಷತೇ ।
ಗರ್ಭೋ ಬಭೂವ ದೇವಕ್ಯಾ ಹರ್ಷಶೋಕವಿವರ್ಧನಃ ॥ ೫ ॥

ಭಗವಾನಪಿ ವಿಶ್ವಾತ್ಮಾ ವಿದಿತ್ವಾ ಕಂಸಜಂ ಭಯಮ್ ।
ಯದೂನಾಂ ನಿಜನಾಥಾನಾಂ ಯೋಗಮಾಯಾಂ ಸಮಾದಿಶತ್ ॥ ೬ ॥

ಗಚ್ಛ ದೇವಿ ವ್ರಜಂ ಭದ್ರೇ ಗೋಪಗೋಭಿರಲಂಕೃತಮ್ ।
ರೋಹಿಣೀ ವಸುದೇವಸ್ಯ ಭಾರ್ಯಾಽಽಸ್ತೇ ನಂದಗೋಕುಲೇ ।
ಅನ್ಯಾಶ್ಚ ಕಂಸಸಂವಿಗ್ನಾ ವಿವರೇಷು ವಸಂತಿ ಹಿ ॥ ೭ ॥

ದೇವಕ್ಯಾ ಜಠರೇ ಗರ್ಭಂ ಶೇಷಾಖ್ಯಂ ಧಾಮ ಮಾಮಕಮ್ ।
ತತ್ಸಂನಿಕೃಷ್ಯ ರೋಹಿಣ್ಯಾ ಉದರೇ ಸಂನಿವೇಶಯ ॥ ೮ ॥

ಅಥಾಹಮಂಶಭಾಗೇನ ದೇವಕ್ಯಾಃ ಪುತ್ರತಾಂ ಶುಭೇ ।
ಪ್ರಾಪ್ಸ್ಯಾಮಿ ತ್ವಂ ಯಶೋದಾಯಾಂ ನಂದಪತ್ನ್ಯಾಂ ಭವಿಷ್ಯಸಿ ॥ ೯ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಎಲೈ ಪರೀಕ್ಷಿತನೇ! ಮಗಧಾಧಿಪತಿಯಾದ ಜರಾಸಂಧನ ಆಶ್ರಯವನ್ನು ಪಡೆದುಕೊಂಡಿದ್ದ ಮಹಾಬಲಿಷ್ಠನಾಗಿದ್ದ ಕಂಸನಿಗೆ – ಪ್ರಲಂಬಾಸುರ, ಬಕಾಸುರ, ಚಾಣೂರ, ತೃಣಾವರ್ತ, ಅಘಾಸುರ, ಮುಷ್ಟಿಕ, ಅರಿಷ್ಟಾಸುರ, ದ್ವಿವಿದ, ಪೂತನಾ, ಕೇಶೀ ಮತ್ತು ಧೇನುಕ, ಬಾಣಾಸುರ, ಭೌಮಾಸುರ ಮೊದಲಾದ ಮಹಾಸುರರು ಸಹಾಯಕರಾಗಿದ್ದರು. ಇವರನ್ನು ಜೊತೆ ಸೇರಿಸಿಕೊಂಡು ಯದುವಂಶೀಯರನ್ನು ನಾಶಗೊಳಿಸತೊಡಗಿದನು. ॥ ೧-೨ ॥ ಅವರೆಲ್ಲರೂ ಭಯಗೊಂಡು ಕುರು, ಪಾಂಚಾಲ, ಕೇಕಯ, ಶಾಲ್ವ, ವಿದರ್ಭ, ನಿಷಧ, ವಿದೇಹ, ಕೋಸಲ ಮುಂತಾದ ದೇಶಗಳಿಗೆ ವಲಸೆ ಹೋದರು. ॥ ೩ ॥ ವಲಸೆ ಹೋಗಲಾಗದ ಕೆಲವರು ಬಹಿರಂಗದಲ್ಲಿ ಕಂಸನಿಗೆ ನಿಷ್ಠರಾಗಿ ಅವನ ಸೇವೆಯಲ್ಲಿ ನಿರತರಾಗಿದ್ದರು. ಕಂಸನು ಒಂದಾದ ಮೇಲೊಂದರಂತೆ ದೇವಕಿಯ ಆರು ಮಂದಿ ಮಕ್ಕಳನ್ನು ಕೊಂದುಹಾಕಿದಾಗ, ದೇವಕಿಯ ಏಳನೆಯ ಗರ್ಭದಲ್ಲಿ ಭಗವಂತನ ಅಂಶರೂಪನಾದ ಅನಂತನೆಂದು ಕರೆಸಿಕೊಳ್ಳುವ ಶ್ರೀಶೇಷದೇವನು* ನೆಲೆಸಿದನು. ಆನಂದಸ್ವರೂಪನಾದ ಮಹಾಶೇಷನು ಗರ್ಭದಲ್ಲಿ ನೆಲೆಸಿದಾಗ ದೇವಕಿಗೆ ಸ್ವಾಭಾವಿಕವಾಗಿಯೇ ಹರ್ಷವುಂಟಾಯಿತು. ಆದರೆ ಕಂಸನು ಇವನನ್ನೂ ಕೊಂದುಬಿಡಬಹುದೆಂಬ ಭಯದಿಂದ ಶೋಕವು ಹೆಚ್ಚಿತು. ॥ ೪-೫ ॥

ತನ್ನನ್ನೇ ನಾಥನನ್ನಾಗಿ ಭಾವಿಸಿರುವ ಯದುವಂಶೀಯರಿಗೆ ಕಂಸನು ಉಪಟಳವನ್ನು ಕೊಡುತ್ತಿರುವನೆಂಬುದನ್ನೂ ತಿಳಿದ ವಿಶ್ವಾತ್ಮನಾದ ಭಗವಂತನು ತನ್ನ ಯೋಗಮಾಯೆಗೆ ಹೀಗೆ ಆದೇಶಿಸಿದನು. ॥ ೬ ॥ ದೇವೀ! ಕಲ್ಯಾಣೀ! ನೀನೀಗಲೇ ವ್ರಜಭೂಮಿಗೆ ಹೋಗು. ಅದು ಗೋಪಾಲಕರಿಂದಲೂ, ಗೋವುಗಳಿಂದಲೂ ಸುಶೋಭಿತವಾಗಿದೆ. ನಂದನ ಆ ಗೋಕುಲದಲ್ಲಿ ವಸುದೇವನ ಪತ್ನಿಯಾದ ರೋಹಿಣಿಯು ವಾಸವಾಗಿದ್ದಾಳೆ. ಅವನ ಇತರ ಪತ್ನಿಯರು ಕಂಸನ ಭಯದಿಂದ ಗುಪ್ತಸ್ಥಳಗಳಲ್ಲಿ ಅಡಗಿಕೊಂಡಿದ್ದಾರೆ. ॥ ೭ ॥ ಈ ಸಮಯದಲ್ಲಿ ನನ್ನ ಅಂಶನಾದ ಮಹಾಶೇಷನು ದೇವಕಿಯ ಗರ್ಭದಲ್ಲಿ ನೆಲೆಸಿರುವನು. ಅವನನ್ನು ಅಲ್ಲಿಂದ ಸೆಳೆದುಕೊಂಡು ನೀನು ರೋಹಿಣಿಯ ಉದರದಲ್ಲಿರಿಸು. ॥ ೮ ॥ ಕಲ್ಯಾಣಿ! ಈಗ ನಾನು ನನ್ನ ಸಮಸ್ತಜ್ಞಾನ, ಬಲ ಮುಂತಾದ ಅಂಶಗಳೊಂದಿಗೆ ದೇವಕಿಗೆ ಪುತ್ರನಾಗುವೆನು. ನೀನು ನಂದಮಹಾರಾಜನ ಪತ್ನಿಯಾದ ಯಶೋದೆಯ ಗರ್ಭದಲ್ಲಿ ಹುಟ್ಟುವೆ. ॥ ೯ ॥

* ರಾಮಾವತಾರದಲ್ಲಿ ಭಗವಂತನಿಗೆ ನಾನು ತಮ್ಮನಾಗಿದ್ದೆ ಇದರಿಂದ ಅಣ್ಣನ ಆಜ್ಞೆಯನ್ನು ಪಾಲಿಸಬೇಕಾಯಿತು. ಅವನು ಕಾಡಿಗೆ ಹೋಗುವಾಗ ತಡೆಯಲಾಗಲಿಲ್ಲ, ಈಗ ಕೃಷ್ಣಾವತಾರದಲ್ಲಿ ಅಣ್ಣನಾಗಿ ಭಗವಂತನ ಸೇವೆಯನ್ನು ಚೆನ್ನಾಗಿ ಮಾಡುವೆನು ಎಂದು ವಿಚಾರಮಾಡಿದ ಶೇಷದೇವರು ಶ್ರೀಕೃಷ್ಣನಿಂದ ಮೊದಲೇ ಗರ್ಭವನ್ನು ಪ್ರವೇಶಿಸಿದರು.

ಅರ್ಚಿಷ್ಯಂತಿ ಮನುಷ್ಯಾಸ್ತ್ವಾಂ ಸರ್ವಕಾಮವರೇಶ್ವರೀಮ್ ।
ಧೂಪೋಪಹಾರಬಲಿಭಿಃ ಸರ್ವಕಾಮವರಪ್ರದಾಮ್ ॥ ೧೦ ॥

ನಾಮಧೇಯಾನಿ ಕುರ್ವಂತಿ ಸ್ಥಾನಾನಿ ಚ ನರಾ ಭುವಿ ।
ದುರ್ಗೇತಿ ಭದ್ರಕಾಲೀತಿ ವಿಜಯಾ ವೈಷ್ಣವೀತಿ ಚ ॥ ೧೧ ॥

ಕುಮುದಾ ಚಂಡಿಕಾ ಕೃಷ್ಣಾ ಮಾಧವೀ ಕನ್ಯಕೇತಿ ಚ ।
ಮಾಯಾ ನಾರಾಯಣೀಶಾನಿ ಶಾರದೇತ್ಯಂಬಿಕೇತಿ ಚ ॥ ೧೨ ॥

ಗರ್ಭಸಂಕರ್ಷಣಾತ್ತಂ ವೈ ಪ್ರಾಹುಃ ಸಂಕರ್ಷಣಂ ಭುವಿ ।
ರಾಮೇತಿ ಲೋಕರಮಣಾದ್ಬಲಂ ಬಲವದುಚ್ಛ್ರಯಾತ್ ॥ ೧೩ ॥

ಸಂದಿಷ್ಟೈವಂ ಭಗವತಾ ತಥೇತ್ಯೋಮಿತಿ ತದ್ವಚಃ ।
ಪ್ರತಿಗೃಹ್ಯ ಪರಿಕ್ರಮ್ಯ ಗಾಂ ಗತಾ ತತ್ತಥಾಕರೋತ್ ॥ ೧೪ ॥

ಗರ್ಭೇ ಪ್ರಣೀತೇ ದೇವಕ್ಯಾ ರೋಹಿಣೀಂ ಯೋಗನಿದ್ರಯಾ ।
ಅಹೋ ವಿಸ್ರಂಸಿತೋ ಗರ್ಭ ಇತಿ ಪೌರಾ ವಿಚುಕ್ರುಶುಃ ॥ ೧೫ ॥

ಭಗವಾನಪಿ ವಿಶ್ವಾತ್ಮಾ ಭಕ್ತಾನಾಮಭಯಂಕರಃ ।
ಆವಿವೇಶಾಂಶಭಾಗೇನ ಮನ ಆನಕದುಂದುಭೇಃ ॥ ೧೬ ॥

ಸ ಬಿಭ್ರತ್ಪೌರುಷಂ ಧಾಮ ಭ್ರಾಜಮಾನೋ ಯಥಾ ರವಿಃ ।
ದುರಾಸದೋಽತಿದುರ್ಧರ್ಷೋ ಭೂತಾನಾಂ ಸಂಬಭೂವ ಹ ॥ ೧೭ ॥

ತತೋ ಜಗನ್ಮಂಗಲಮಚ್ಯುತಾಂಶಂ
ಸಮಾಹಿತಂ ಶೂರಸುತೇನ ದೇವೀ ।
ದಧಾರ ಸರ್ವಾತ್ಮಕಮಾತ್ಮಭೂತಂ
ಕಾಷ್ಠಾ ಯಥಾಽಽನಂದ ಕರಂ ಮನಸ್ತಃ ॥ ೧೮ ॥

ಸಾ ದೇವಕೀ ಸರ್ವಜಗನ್ನಿವಾಸ-
ನಿವಾಸಭೂತಾ ನಿತರಾಂ ನ ರೇಜೇ ।
ಭೋಜೇಂದ್ರಗೇಹೇಽಗ್ನಿಶಿಖೇವ ರುದ್ಧಾ
ಸರಸ್ವತೀ ಜ್ಞಾನಖಲೇ ಯಥಾ ಸತೀ ॥ ೧೯ ॥

ಜನರು ಬೇಡಿದ ವರಗಳನ್ನು ಕೊಡುವುದರಲ್ಲಿ ನೀನು ಸಮರ್ಥಳಾಗುವೆ. ಮನುಷ್ಯರು ತಮ್ಮ ಸಮಸ್ತ ಅಭಿಲಾಷೆಗಳನ್ನು ಪೂರೈಸುವವಳು ಎಂದು ತಿಳಿದು ನಿನ್ನನ್ನು ಧೂಪ-ದೀಪ ನೈವೇದ್ಯಾದಿ ಉಪಚಾರಗಳಿಂದ ಪೂಜಿಸುವರು. ॥ ೧೦ ॥ ಭೂಲೋಕದಲ್ಲಿ ನಿನ್ನನ್ನು ದುರ್ಗಾ, ಭದ್ರಕಾಳಿ, ವಿಜಯಾ, ವೈಷ್ಣವೀ, ಕುಮುದಾ, ಚಂಡಿಕಾ, ಕೃಷ್ಣಾ, ಮಾಧವೀ, ಕನ್ಯಕಾ, ಮಹಾಮಾಯಾ, ನಾರಾಯಣೀ, ಈಶಾನೀ, ಶಾರದಾ, ಅಂಬಿಕಾ ಇವೇ ಮುಂತಾದ ಅನೇಕ ನಾಮಗಳಿಂದ ಕೊಂಡಾಡುವರು. ॥ ೧೧-೧೨ ॥ ದೇವಕಿಯ ಗರ್ಭದಿಂದ ಸಳೆಯಲ್ಪಟ್ಟ ಕಾರಣದಿಂದ ಮಹಾಶೇಷನನ್ನು ಪ್ರಪಂಚದಲ್ಲಿ ಜನರು 'ಸಂಕರ್ಷಣ'ನೆಂದು ಹೇಳುವರು. ಲೋಕರಂಜಕನಾದ್ದರಿಂದ 'ರಾಮ' ಎಂದೂ, ಬಲವಂತರಲ್ಲಿ ಶ್ರೇಷ್ಠನಾದ್ದರಿಂದ 'ಬಲಭದ್ರ' ಎಂದೂ ಹೇಳುವರು. ॥ ೧೩ ॥

ಭಗವಂತನು ಹೀಗೆ ಆಜ್ಞಾಪಿಸಿದಾಗ ಯೋಗಮಾಯೆಯು 'ಹಾಗೆಯೇ ಆಗಲಿ' ಎಂದು ಹೇಳಿ ಅವನ ಮಾತನ್ನು ಶಿರಸಾವಹಿಸಿ, ಅವನಿಗೆ ಪ್ರದಕ್ಷಿಣೆ ಮಾಡಿ ಭೂಲೋಕಕ್ಕೆ ಬಂದು ಭಗವಂತನು ಹೇಳಿದಂತೆಯೇ ಮಾಡಿದಳು. ॥ ೧೪ ॥ ಯೋಗಮಾಯೆಯು ದೇವಕಿಯ ಗರ್ಭವನ್ನು ಕೊಂಡುಹೋಗಿ ರೋಹಿಣಿಯ ಉದರದಲ್ಲಿ ಸ್ಥಾಪಿಸಿದಾಗ ಮಥುರಾಪುರವಾಸಿಗಳು ದುಃಖದಿಂದ ಅಯ್ಯೋ! ಬಡಪಾಯಿ ದೇವಕಿಯ ಈ ಗರ್ಭವು ನಾಶವಾಗಿ ಹೋಯಿತಲ್ಲ! ಎಂದು ಪರಸ್ಪರ ಆಡಿಕೊಳ್ಳತೊಡಗಿದರು. ॥ ೧೫ ॥

ಭಕ್ತರಿಗೆ ಅಭಯವನ್ನು ಕೊಡುವವನೂ, ಎಲ್ಲೆಡೆಗಳಲ್ಲಿ ಎಲ್ಲ ರೂಪಗಳಿಂದ ಇರುವವನೂ, ಬರುವಿಕೆ-ಹೋಗುವಿಕೆ ಎಂಬುದಿಲ್ಲದವನೂ ಆದ ಭಗವಂತನು ತನ್ನ ಸಮಸ್ತ ಕಲೆಗಳೊಂದಿಗೆ ವಸುದೇವನ ಮನಸ್ಸಿನಲ್ಲಿ ಪ್ರಕಟಗೊಂಡನು. ॥ ೧೬ ॥ ಮನಸ್ಸಿನಲ್ಲಿ ಮೊದಲಿನಿಂದಲೂ ಅವ್ಯಕ್ತನಾಗಿದ್ದವನು ವ್ಯಕ್ತನಾದನು. ಭಗವಂತನ ದಿವ್ಯತೇಜಸ್ಸನ್ನು ಧರಿಸಿದ ವಸುದೇವನು ಸೂರ್ಯನಂತೆ ದೇದೀಪ್ಯಮಾನನಾಗಿ ಕಂಗೊಳಿಸಿದನು. ಅವನನ್ನು ನೋಡಿದವರ ಕಣ್ಣುಗಳು ಕುಕ್ಕುತ್ತಿದ್ದವು. ಯಾರೂ ಅವನನ್ನು ಬಲದಿಂದಾಗಲೀ, ವಾಣಿಯಿಂದಾಗಲೀ, ಪ್ರಭಾವದಿಂದಾಗಲೀ ಎದುರಿಸಲಾಗುತ್ತಿರಲಿಲ್ಲ. ॥ ೧೭ ॥ ಜಗತ್ತಿಗೆ ಪರಮ ಮಂಗಳಕರವಾದ ಭಗವಂತನ ಆ ಜ್ಯೋತಿರ್ಮಯ ಅಂಶವು ವಸುದೇವನ ಮೂಲಕ ಆಧಾನ ಮಾಡಲ್ಪಟ್ಟಾಗ ಪೂರ್ವದಿಕ್ಕು ಚಂದ್ರನನ್ನು ಧರಿಸುವಂತೆಯೇ ಶುದ್ಧ ಸತ್ತ್ವಸಂಪನ್ನಳಾದ ದೇವಕೀದೇವಿಯು ವಿಶುದ್ಧ ಮನಸ್ಸಿನಿಂದ ಸರ್ವಾತ್ಮನೂ, ಆತ್ಮಸ್ವರೂಪನೂ ಆದ ಭಗವಂತನನ್ನು ಧರಿಸಿಕೊಂಡಳು. ॥ ೧೮ ॥ ಭಗವಂತನು ಇಡೀ ಜಗತ್ತಿಗೆ ನಿವಾಸಸ್ಥಾನನಾಗಿದ್ದಾನೆ. ದೇವಕಿಯು ಅವನಿಗೂ ನಿವಾಸಸ್ಥಾನಳಾದಳು. ಗಡಿಗೆಯಲ್ಲಿಟ್ಟ ದೀಪದ ಬೆಳಕು ಹೊರಗೆ ಹರಡದಂತೆ, ಜ್ಞಾನವಂತನ ವಿದ್ಯೆಯು ಪ್ರಕಾಶಕ್ಕೆ ಬರದಂತೆಯೇ ಕಂಸನ ಕಾರಾಗೃಹದಲ್ಲಿ ಬಂದಿಯಾಗಿದ್ದ ದೇವಕಿಯ ಪ್ರಭೆಯು ಪೂರ್ಣವಾಗಿ ಶೋಭಿಸಲಿಲ್ಲ. ॥ ೧೯ ॥

ತಾಂ ವೀಕ್ಷ್ಯ ಕಂಸಃ ಪ್ರಭಯಾ ಜಿತಾಂತರಾಂ
　ವಿರೋಚಯಂತೀಂ ಭವನಂ ಶುಚಿಸ್ಮಿತಾಮ್ ।
ಆಹೈಷ ಮೇ ಪ್ರಾಣಹರೋ ಹರಿರ್ಗುಹಾಂ
　ಧ್ರುವಂ ಶ್ರಿತೋ ಯನ್ನ ಪುರೇಯಮೀದೃಶೀ ॥ ೨೦ ॥

ಕಿಮದ್ಯ ತಸ್ಮಿನ್ಕರಣೀಯಮಾಶು ಮೇ
　ಯದರ್ಥತಂತ್ರೋ ನ ವಿಹಂತಿ ವಿಕ್ರಮಮ್ ।
ಸ್ತ್ರಿಯಾಃ ಸ್ವಸುರ್ಗುರುಮತ್ಯಾ ವಧೋಽಯಂ
　ಯಶಃ ಶ್ರಿಯಂ ಹಂತ್ಯನುಕಾಲಮಾಯುಃ ॥ ೨೧ ॥

ಸ ಏಷ ಜೀವನ್ ಖಲು ಸಂಪರೇತೋ
　ವರ್ತೇತ ಯೋಽತ್ಯಂತನೃಶಂಸಿತೇನ ।
ದೇಹೇ ಮೃತೇ ತಂ ಮನುಜಾಃ ಶಪಂತಿ
　ಗಂತಾ ತಮೋಽಂಧಂ ತನುಮಾನಿನೋ ಧ್ರುವಮ್ ॥ ೨೨ ॥

ಇತಿ ಘೋರತಮಾದ್ಭಾವಾತ್ಸಂನಿವೃತ್ತಃ ಸ್ವಯಂ ಪ್ರಭುಃ ।
ಆಸ್ತೇ ಪ್ರತೀಕ್ಷಂಸ್ತಜ್ಜನ್ಮ ಹರೇರ್ವೈರಾನುಬಂಧಕೃತ್
　॥ ೨೩ ॥

ಆಸೀನಃ ಸಂವಿಶಂಸ್ತಿಷ್ಠನ್ಭುಂಜಾನಃ ಪರ್ಯಟನ್ಮಹೀಮ್ ।
ಚಿಂತಯಾನೋ ಹೃಷೀಕೇಶಮಪಶ್ಯತ್ತನ್ಮಯಂ ಜಗತ್
　॥ ೨೪ ॥

ಬ್ರಹ್ಮಾ ಭವಶ್ಚ ತತ್ರೈತ್ಯ ಮುನಿಭಿರ್ನಾರದಾದಿಭಿಃ ।
ದೇವೈಃ ಸಾನುಚರೈಃ ಸಾಕಂ ಗೀರ್ಭಿರ್ವೃಷಣಮೈಡಯನ್
　॥ ೨೫ ॥

ಸತ್ಯವ್ರತಂ ಸತ್ಯಪರಂ ತ್ರಿಸತ್ಯಂ
　ಸತ್ಯಸ್ಯ ಯೋನಿಂ ನಿಹಿತಂ ಚ ಸತ್ಯೇ ।
ಸತ್ಯಸ್ಯ ಸತ್ಯಮೃತಸತ್ಯನೇತ್ರಂ
　ಸತ್ಯಾತ್ಮಕಂ ತ್ವಾಂ ಶರಣಂ ಪ್ರಪನ್ನಾಃ ॥ ೨೬ ॥

ಭಗವಂತನು ದೇವಕಿಯ ಗರ್ಭದಲ್ಲಿ ವಿರಾಜ ಮಾನನಾದಾಗ ಆಕೆಯ ಮುಖದಲ್ಲಿ ಪವಿತ್ರ ಮುಗುಳ್ನಗೆ ಇತ್ತು. ಆಕೆಯ ಶರೀರದ ಕಾಂತಿಯಿಂದ ಕಾರಾಗೃಹವು ಬೆಳಗಿ ಹೋಯಿತು. ಕಂಸನು ಬಂದುನೋಡಿದಾಗ ಅವನು ಮನಸ್ಸಿನಲ್ಲೇ ಈ ಬಾರಿ ನನ್ನ ಪ್ರಾಣಹರನಾದ ವಿಷ್ಣುವೇ ಇವಳ ಗರ್ಭದಲ್ಲಿ ಖಂಡಿತವಾಗಿ ಪ್ರವೇಶಿಸಿರುವನು. ಏಕೆಂದರೆ, ಇದಕ್ಕೆ ಮೊದಲು ದೇವಕಿಯು ಹೀಗೆ ಇರಲಿಲ್ಲವಲ್ಲ! ಎಂದು ತರ್ಕಿಸಿದನು. ॥ ೨೦ ॥ ಶತ್ರುವಿನ ನಿರಸನಕ್ಕಾಗಿ ನಾನು ಕೂಡಲೇ ಏನು ಮಾಡಲಿ ? ದೇವಕಿಯನ್ನು ಕೊಲ್ಲುವುದೂ ಸರಿಯಾಗಲಾರದು. ಏಕೆಂದರೆ, ವೀರನಾದವನು ಸ್ವಾರ್ಥವಶನಾಗಿ ತನ್ನ ಪರಾಕ್ರಮವನ್ನು ಕಲಂಕಿತವಾಗಿಸುವುದಿಲ್ಲ. ಮೊದಲನೆಯದಾಗಿ ಇವಳು ಸ್ತ್ರೀಯಾಗಿದ್ದಾಳೆ, ಇನ್ನೊಂದು ನನ್ನ ತಂಗಿಯಾಗಿದ್ದಾಳೆ, ಮೂರನೆಯದು ಗರ್ಭಿಣಿ ಬೇರೆ. ಇವಳನ್ನು ಕೊಂದುಬಿಟ್ಟರೆ ತತ್ಕಾಲವೇ ನನ್ನ ಕೀರ್ತಿ, ಲಕ್ಷ್ಮೀ ಮತ್ತು ಆಯುಸ್ಸು ನಾಶವಾಗಿ ಹೋದೀತು. ॥ ೨೧ ॥ ಅತ್ಯಂತ ಕ್ರೂರವಾಗಿ ವರ್ತಿಸುವವನು ಜೀವಿತನಾಗಿದ್ದರೂ ಸತ್ತಂತೆಯೇ. ಅವನು ಸತ್ತಮೇಲೆ ಜನರು ಅವನನ್ನು ಬೈಯ್ಯುವರು. ಇಷ್ಟೇ ಅಲ್ಲ, ಅವನು ದೇಹಾಭಿಮಾನಿಗಳಿಗೆ ಯೋಗ್ಯವಾದ ಘೋರ ನರಕಕ್ಕೆ ಅವಶ್ಯವಾಗಿ ಹೋಗುತ್ತಾನೆ. ॥ ೨೨ ॥ ಕಂಸನು ದೇವಕಿಯನ್ನು ಕೊಲ್ಲಬಲ್ಲವ ನಾಗಿದ್ದರೂ ಅವನು ಈ ಅತ್ಯಂತ ಕ್ರೂರವಾದ ವಿಚಾರ ದಿಂದ ನಿವೃತ್ತನಾದನು.* ಈಗ ಭಗವಂತನ ಕುರಿತು ದೃಢವಾದ ವೈರವನ್ನು ಕಟ್ಟಿಕೊಂಡು ಅವನ ಬರುವಿಕೆಯನ್ನು ಪ್ರತೀಕ್ಷೆ ಮಾಡುತ್ತಿದ್ದನು. ॥ ೨೩ ॥ ಈಗ ಅವನು ಕುಳಿತಾಗ-ನಿಂತಾಗ, ಉಂಬಾಗ ತಿಂಬಾಗ, ಮಲಗಿದ್ದಾಗ-ಎದ್ದಾಗ, ನಡೆದಾಡುವಾಗ ಎಲ್ಲ ಹೊತ್ತಿನಲ್ಲೂ ಶ್ರೀಕೃಷ್ಣನ ಚಿಂತನೆಯಲ್ಲೇ ಇರುತ್ತಿದ್ದನು. ಅವನು ಹೋದಲ್ಲಿ ಎಲ್ಲಾದರೂ ಎಡವಿದಲ್ಲಿ ಅವನಿಗೆ ಶ್ರೀಕೃಷ್ಣನೇ ಕಂಡು ಬರುತ್ತಿದ್ದನು. ಹೀಗೆ ಅವನಿಗೆ ಇಡೀ ಜಗತ್ತೇ ಶ್ರೀಕೃಷ್ಣಮಯವಾಗಿ ಕಾಣತೊಡಗಿತು. ॥ ೨೪ ॥

ಪರೀಕ್ಷಿತನೇ! ಆ ಸಮಯದಲ್ಲಿ ರುದ್ರದೇವರು ಮತ್ತು ಬ್ರಹ್ಮ ದೇವರು ತಮ್ಮ ಅನುಚರರೊಡನೆಯೂ, ನಾರದರೇ ಮೊದಲಾದ ಋಷಿಗಳೊಡನೆಯೂ ಕಂಸನ ಸೆರೆಮನೆಗೆ ಬಂದು ಸುಮಧುರ ವಾದ ಮಾತುಗಳಿಂದ ಎಲ್ಲರ ಅಭಿಲಾಷೆಗಳನ್ನು ಪೂರ್ಣ ಗೊಳಿಸುವಂತಹ ಶ್ರೀಹರಿಯನ್ನು ಹೀಗೆ ಸ್ತುತಿಸಲು ಪ್ರಾರಂಭಿಸಿದರು. ॥ ೨೫ ॥

ಪ್ರಭುವೇ! ನೀನು ಸತ್ಯಸಂಕಲ್ಪನಾಗಿರುವೆ. ಸತ್ಯವೇ ನಿನ್ನನ್ನು ಪಡೆಯುವ ಶ್ರೇಷ್ಠಸಾಧನವಾಗಿದೆ. ಸೃಷ್ಟಿಯ ಮೊದಲು, ಪ್ರಳಯದ ನಂತರ, ಪ್ರಪಂಚದ ಸ್ಥಿತಿಯ ಸಮಯದಲ್ಲಿ – ಈ ಮೂರೂ ಅವಸ್ಥೆಗಳಲ್ಲಿ ಸತ್ಯನಾದ ನೀನೇ ಇರುವವನು. ಪೃಥಿವಿ, ಜಲ, ತೇಜ, ವಾಯು, ಆಕಾಶ ಈ ಐದು ದೃಶ್ಯಮಾನ ಸತ್ಯಗಳ ಕಾರಣನು ನೀನೇ ಆಗಿರುವೆ ಹಾಗೂ ಅವುಗಳ ಅಂತರ್ಯಾಮಿ

* ವಿವಾಹದ ಮಾಂಗಲಿಕ ಚಿಹ್ನೆಗಳನ್ನು ಧರಿಸಿದ್ದ ದೇವಕಿಯನ್ನು ಕೊಲ್ಲಲು ಮುಂದಾದ ಆ ಕಂಸನೇ ಇಂದು ಇಷ್ಟು ಸದಸತ್ ವಿಚಾರವಂತನಾದನು. ಇದರ ಕಾರಣವೇನು ? ದೇವಕಿಯ ಅಂತರಂಗದಲ್ಲಿ – ಗರ್ಭದಲ್ಲಿ ಶ್ರೀಭಗವಂತನಿರುವನು. ಅಂತಹವಳನ್ನು ಇಂದು ಅವನು ನೋಡುತ್ತಿರುವನು. ಯಾರೊಳಗೆ ಭಗವಂತನಿರುವನೋ ಅವನ ದರ್ಶನದಿಂದ ಸದ್ಬುದ್ಧಿಯು ಉದಯಿಸುವುದು ಆಶ್ಚರ್ಯದ ಮಾತಲ್ಲವಲ್ಲ!

ಏಕಾಯನೋಽಸೌ ದ್ವಿಫಲಸ್ತ್ರಿಮೂಲ-
ಶ್ಚತುರಸಃ ಪಂಚವಿಧಃ ಷಡಾತ್ಮಾ ।
ಸಪ್ತತ್ವಗಷ್ಟವಿಟಪೋ ನವಾಕ್ಷೋ
ದಶಚ್ಛದೀ ದ್ವಿಖಗೋ ಹ್ಯಾದಿವೃಕ್ಷಃ ॥ ೨೭ ॥

ತ್ವಮೇಕ ಏವಾಸ್ಯ ಸತಃ ಪ್ರಸೂತಿ-
ಸ್ತ್ವಂ ಸಂನಿಧಾನಂ ತ್ವಮನುಗ್ರಹಶ್ಚ ।
ತ್ವನ್ಮಾಯಯಾ ಸಂವೃತಚೇತಸಸ್ತ್ವಾಂ
ಪಶ್ಯಂತಿ ನಾನಾ ನ ವಿಪಶ್ಚಿತೋ ಯೇ ॥ ೨೮ ॥

ಬಿಭರ್ಷಿ ರೂಪಾಣ್ಯವಬೋಧ ಆತ್ಮಾ
ಕ್ಷೇಮಾಯ ಲೋಕಸ್ಯ ಚರಾಚರಸ್ಯ ।
ಸತ್ತ್ವೋಪಪನ್ನಾನಿ ಸುಖಾವಹಾನಿ
ಸತಾಮಭದ್ರಾಣಿ ಮುಹುಃ ಖಲಾನಾಮ್ ॥ ೨೯ ॥

ತ್ವಯ್ಯಂಬುಜಾಕ್ಷಾಖಿಲಸತ್ತ್ವಧಾಮ್ನಿ
ಸಮಾಧಿನಾಽಽವೇಶಿತಚೇತಸೈಕೇ ।
ತ್ವತ್ಪಾದಪೋತೇನ ಮಹತ್ಕೃತೇನ
ಕುರ್ವಂತಿ ಗೋವತ್ಸಪದಂ ಭವಾಬ್ಧಿಮ್ ॥ ೩೦ ॥

ಯಾಗಿ ವಿರಾಜಿಸುತ್ತಿರುವೆ. ನೀನೇ ಕಾಣುತ್ತಿರುವ ಈ ಜಗತ್ತಿಗೆ ಪರಮಾರ್ಥಸ್ವರೂಪನಾಗಿರುವೆ. ಸತ್ಯವಚನಕ್ಕೂ, ಸಮದೃಷ್ಟಿಗೂ ನೀನೇ ಪ್ರೇರಕನು. ಹೀಗೆ ಸಮಸ್ತ ವಿಷಯಗಳಲ್ಲಿ ಸತ್ಯಸ್ವರೂಪನೇ ಆಗಿರುವ, ಸತ್ಯನೇ ಆದ ನಿನ್ನನ್ನು ಶರಣುಹೊಂದುತ್ತೇವೆ. ॥ ೨೬ ॥

ಈ ಸಂಸಾರವೆಂಬುದು ಒಂದು ಸನಾತನ ವೃಕ್ಷವಾಗಿದೆ. ಈ ಸನಾತನ ವೃಕ್ಷಕ್ಕೆ ಮೂಲಪ್ರಕೃತಿಯೊಂದೇ ಆಶ್ರಯವು. ಸುಖ-ದುಃಖಗಳೇ ಇದರ ಎರಡು ಫಲಗಳು. ಸತ್ತ್ವ-ರಜ-ತಮಸ್ಸುಗಳೆಂಬುದೇ ಈ ವೃಕ್ಷದ ಬೇರುಗಳು. ಇದಕ್ಕೆ ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ವಿಧವಾದ ರಸಗಳು. ಕಿವಿ, ಚರ್ಮ, ಕಣ್ಣು, ನಾಲಿಗೆ, ಮೂಗು ಈ ಐದು ಇವನ್ನು ತಿಳಿಯುವ ಕರಣಗಳು (ಬೀಳಲು). ಹುಟ್ಟುವುದು, ಇರುವುದು, ಬೆಳೆಯುವುದು, ಬದಲಾಗುವುದು, ಕುಗ್ಗುವುದು, ನಾಶವಾಗುವುದು – ಇವು ಆರು ಇದರ ಸ್ವಭಾವಗಳು. ರಸ, ರುಧಿರ, ಮಾಂಸ, ಮೇದಸ್ಸು ಮೂಳೆ, ಮಜ್ಜೆ ಶುಕ್ರ ಇವು ಏಳು ಇದರ ತೊಗಟೆಗಳು. ಪಂಚ-ಮಹಾಭೂತಗಳು, ಮನಸ್ಸು ಬುದ್ಧಿ ಅಹಂಕಾರ ಈ ಎಂಟು ರೆಂಬೆಗಳು. ನವದ್ವಾರಗಳೇ ಇದರ ಒಂಭತ್ತು ಪೊಟರೆಗಳು. ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ, ನಾಗ, ಕೂರ್ಮ, ಕೃಕಲ, ದೇವದತ್ತ, ಧನಂಜಯ – ಎಂಬ ಹತ್ತು ಪ್ರಾಣಗಳೇ ಇದರ ಎಲೆಗಳು. ಜೀವೇಶ್ವರರು ಈ ಸಂಸಾರವೃಕ್ಷದ ಎರಡು ಹಕ್ಕಿಗಳಂತಿದ್ದಾರೆ. ॥ ೨೭ ॥ ಈ ಸಂಸಾರರೂಪೀ ವೃಕ್ಷದ ಉತ್ಪತ್ತಿಯ ಆಧಾರನೂ ಏಕಮಾತ್ರ ನೀನೇ ಆಗಿರುವೆ. ನಿನ್ನಲ್ಲೇ ಇದರ ಪ್ರಳಯವಾಗುತ್ತದೆ. ನಿನ್ನ ಅನುಗ್ರಹದಿಂದಲೇ ಇದರ ರಕ್ಷಣೆಯೂ ಆಗುತ್ತದೆ. ಮಾಯೆಯಿಂದ ಆವೃತವಾದ ಚಿತ್ತವುಳ್ಳವರು ಈ ಸತ್ಯವನ್ನು ಅರಿಯದೆ ಇದರ ಉತ್ಪತ್ತಿ , ಸ್ಥಿತಿ, ಪ್ರಳಯ ಮಾಡುವಂತಹ ಅನೇಕ ಬ್ರಹ್ಮಾದಿ ದೇವತೆಗಳನ್ನು ನೋಡುತ್ತಾರೆ. ತತ್ತ್ವಜ್ಞಾನಿಗಳಾದವರು ಎಲ್ಲರ ರೂಪದಲ್ಲಿ ಕೇವಲ ನಿನ್ನನ್ನೇ ದರ್ಶಿಸುತ್ತಾರೆ. ॥ ೨೮ ॥ ನೀನು ಜ್ಞಾನಸ್ವರೂಪವಾದ ಆತ್ಮನಾಗಿರುವೆ. ಚರಾಚರ ಜಗತ್ತಿಗೆ ಕಲ್ಯಾಣವನ್ನುಂಟುಮಾಡುವ ಸಲುವಾಗಿ ಅನೇಕ ರೂಪಗಳನ್ನು ಧರಿಸುವೆ. ನಿನ್ನ ಆ ರೂಪಗಳು ಅಪ್ರಾಕೃತವೂ, ಶುದ್ಧ ಸತ್ತ್ವಮಯವೂ ಆಗಿವೆ. ಸತ್ಪುರುಷರಿಗೆ ಸುಖಕರಗಳಾಗಿವೆ. ಜೊತೆಗೆ ದುಷ್ಟರಿಗೆ ದುಷ್ಟತೆಯೇ ಶಿಕ್ಷೆಯನ್ನೂ ಕೊಡುತ್ತವೆ. ಅವರಿಗೆ ಅಮಂಗಳವೂ ಆಗಿರುತ್ತವೆ. ॥ ೨೯ ॥ ಓ ಕಮಲಾಕ್ಷನೇ ! ಪ್ರಭುವೇ ! ಕೆಲವೇ ಜನರು ಸಮಸ್ತ ಪದಾರ್ಥಗಳ, ಪ್ರಾಣಿಗಳ ಆಶ್ರಯಸ್ವರೂಪನಾದ ನಿನ್ನ ರೂಪದಲ್ಲಿ ಪೂರ್ಣ ಏಕಾಗ್ರತೆಯಿಂದ ತಮ್ಮ ಚಿತ್ತವನ್ನು ನೆಡಬಲ್ಲರು. ನಿನ್ನ ಚರಣಕಮಲರೂಪವಾದ ನೌಕೆಯನ್ನು ಆಶ್ರಯಿಸಿ ಈ ಸಂಸಾರಸಾಗರವನ್ನು ಕರುವಿನ ಗೊರಸಿನಷ್ಟು ಹಳ್ಳವನ್ನು ದಾಟುವಂತೆ ಆಯಾಸವಿಲ್ಲದೆ ದಾಟಿಹೋಗುತ್ತಾರೆ. ಏಕೆಂದರೆ, ಇಂದಿನವರೆಗಿನ ಸಂತರು ಈ ನೌಕೆಯಿಂದಲೇ ಸಂಸಾರಸಾಗರವನ್ನು ದಾಟಿಹೋಗಿದ್ದಾರಲ್ಲ! ॥ ೩೦ ॥ ಪರಮ ಪ್ರಕಾಶಸ್ವರೂಪನಾದ ಪರಮಾತ್ಮನೇ ! ನಿನ್ನ ಭಕ್ತಜನರು ಸಮಸ್ತ ಜಗತ್ತಿಗೂ ನಿಷ್ಕಪಟ ಪ್ರೇಮಿಗಳೂ, ಹಿತೈಷಿಗಳೂ ಆಗಿರುತ್ತಾರೆ. ಅವರೇನೋ ಸ್ವತಃ ಈ ದುಷ್ಕರವಾದ ಭಯಂಕರ ಸಂಸಾರಸಾಗರವನ್ನು ದಾಟಿಯೇ ಹೋಗುತ್ತಾರೆ.

ಸ್ವಯಂ ಸಮುತ್ತೀರ್ಯ ಸುದುಸ್ತರಂ ದ್ಯುಮ-
ನ್ಭವಾರ್ಣವಂ ಭೀಮಮದಭ್ರಸೌಹೃದಾಃ ।
ಭವತ್ಪದಾಂಭೋರುಹನಾವಮತ್ರ ತೇ
ನಿಧಾಯ ಯಾತಾಃ ಸದನುಗ್ರಹೋ ಭವಾನ್ ॥ ೩೧ ॥

ಯೇಽನ್ಯೇಽರವಿಂದಾಕ್ಷ ವಿಮುಕ್ತಮಾನಿನ-
ಸ್ತ್ವಯ್ಯಸ್ತಭಾವಾದವಿಶುದ್ಧಬುದ್ಧಯಃ ।
ಆರುಹ್ಯ ಕೃಚ್ಛ್ರೇಣ ಪರಂ ಪದಂ ತತಃ
ಪತಂತ್ಯಧೋಽನಾದೃತಯುಷ್ಮದಂಘ್ರಯಃ ॥ ೩೨ ॥

ತಥಾ ನ ತೇ ಮಾಧವ ತಾವಕಾಃ ಕ್ವಚಿದ್
ಭ್ರಶ್ಯಂತಿ ಮಾರ್ಗಾತ್ತ್ವಯಿ ಬದ್ಧಸೌಹೃದಾಃ ।
ತ್ವಯಾಭಿಗುಪ್ತಾ ವಿಚರಂತಿ ನಿರ್ಭಯಾ
ವಿನಾಯಕಾನೀಕಪಮೂರ್ಧಸು ಪ್ರಭೋ ॥ ೩೩ ॥

ಸತ್ತ್ವಂ ವಿಶುದ್ಧಂ ಶ್ರಯತೇ ಭವಾನ್ ಸ್ಥಿತೌ
ಶರೀರಿಣಾಂ ಶ್ರೇಯ ಉಪಾಯನಂ ವಪುಃ ।
ವೇದಕ್ರಿಯಾಯೋಗತಪಃಸಮಾಧಿಭಿಃ
ತವಾರ್ಹಣಂ ಯೇನ ಜನಃ ಸಮೀಹತೇ ॥ ೩೪ ॥

ಸತ್ತ್ವಂ ನ ಚೇದ್ಧಾತರಿದಂ ನಿಜಂ ಭವೇ-
ದ್ವಿಜ್ಞಾನಮಜ್ಞಾನಭಿದಾಪಮಾರ್ಜನಮ್ ।
ಗುಣಪ್ರಕಾಶೈರನುಮೀಯತೇ ಭವಾನ್
ಪ್ರಕಾಶತೇ ಯಸ್ಯ ಚ ಯೇನ ವಾ ಗುಣಃ ॥ ೩೫ ॥

ನ ನಾಮರೂಪೇ ಗುಣಜನ್ಮಕರ್ಮಭಿ-
ರ್ನಿರೂಪಿತವ್ಯೇ ತವ ತಸ್ಯ ಸಾಕ್ಷಿಣಃ ।
ಮನೋವಚೋಭ್ಯಾಮನುಮೇಯವರ್ತ್ಮನೋ
ದೇವ ಕ್ರಿಯಾಯಾಂ ಪ್ರತಿಯಂತ್ಯಥಾಪಿ ಹಿ ॥ ೩೬ ॥

ಆದರೆ ಬೇರೆಯವರ ಕಲ್ಯಾಣಕ್ಕಾಗಿಯೇ ಅವರು ಇಲ್ಲಿ ನಿನ್ನ ಚರಣ ಕಮಲಗಳ ನೌಕೆಯನ್ನು ಸ್ಥಾಪಿಸಿ ಹೋಗುತ್ತಾರೆ. ನಿಜವಾಗಿ ಸತ್ಪುರುಷರ ಮೇಲೆ ನಿನ್ನ ಮಹತ್ವವೆ ಇದೆ. ಅವರಿಗಾಗಿ ನೀನು ಅನುಗ್ರಹಸ್ವರೂಪನೇ ಆಗಿರುವೆ. ॥ ೩೧ ॥

ಕಮಲನಯನನೇ! ಜ್ಞಾನಮಾರ್ಗವನ್ನು ಹಿಡಿದಿರುವ ಕೆಲವರು ತಾವು ಮುಕ್ತರೆಂದು ಭಾವಿಸುತ್ತಾರೆ. ಅಂತಹವರಿಗೆ ನಿನ್ನಲ್ಲಿ ಅನನ್ಯ ಭಕ್ತಿಯಿಲ್ಲದ ಕಾರಣ ಅವರ ಬುದ್ಧಿಯು ಶುದ್ಧವಾಗಿ ಇರುವುದಿಲ್ಲ. ಅತಿ ಕಷ್ಟಕರ ಸಾಧನೆಯಿಂದ ಅಂತಹವರು ಪರಮಪದದ ಮಾರ್ಗದಲ್ಲಿ ನಡೆಯುತ್ತಿದ್ದರೂ ನಿನ್ನ ಪಾದಾರ ವಿಂದಗಳಲ್ಲಿ ಪ್ರೇಮ ಇಲ್ಲದಿರುವುದರಿಂದ ಸ್ವಲ್ಪಕಾಲದಲ್ಲೇ ಸಂಸಾರದಲ್ಲಿ ಬಿದ್ದು ಪತನರಾಗುವರು. ॥ ೩೨ ॥ ಮಾಧವನೇ! ಪ್ರಭುವೇ! ಆದರೆ ನಿನ್ನ ಚರಣಗಳಲ್ಲಿ ನಿಜವಾದ ಪ್ರೀತಿಯುಳ್ಳ ನಿನ್ನ ನಿಜಭಕ್ತರು ಎಂದಿಗೂ ಈ ಜ್ಞಾನಾಭಿಮಾನಿಗಳಂತೆ ತಮ್ಮ ಸಾಧನೆಯಿಂದ ಭ್ರಷ್ಟರಾಗುವುದಿಲ್ಲ. ನಿನ್ನಿಂದ ರಕ್ಷಿಸಲ್ಪಟ್ಟವರಾಗಿ ನಿನ್ನ ಅನುಗ್ರಹದಿಂದ ವಿಘ್ನದೇವತೆಗಳ ತಲೆಯನ್ನು ಮೆಟ್ಟಿ ನಿರ್ಭಯವಾಗಿ ಸಂಚರಿಸುತ್ತಾರೆ. ॥ ೩೩ ॥ ನೀನು ಪ್ರಪಂಚದ ಸ್ಥಿತಿಗಾಗಿ ಸಮಸ್ತದೇಹಧಾರಿಗಳಿಗೆ ಪರಮ ಶ್ರೇಯಸ್ಸನ್ನು ಪ್ರದಾನ ಮಾಡುವ ವಿಶುದ್ಧ ಸತ್ತ್ವಮಯ ಸಚ್ಚಿದಾನಂದಮಯ, ಪರಮ ದಿವ್ಯ ಮಂಗಳವಿಗ್ರಹನಾಗಿ ಪ್ರಕಟಗೊಳ್ಳುವೆ. ಆ ರೂಪದಲ್ಲಿ ಪ್ರಕಟ ವಾಗುವುದರಿಂದಲೇ ನಿನ್ನ ಭಕ್ತರು ವೇದ, ಕರ್ಮಕಾಂಡ, ಅಷ್ಟಾಂಗಯೋಗ, ತಪಸ್ಸು, ಸಮಾಧಿ ಇವುಗಳ ಮೂಲಕ ನಿನ್ನನ್ನು ಆರಾಧಿಸುತ್ತಾರೆ. ಯಾವುದೇ ಆಶ್ರಯವಿಲ್ಲದೆ ಯಾರ ಆರಾಧನೆ ಮಾಡಬಲ್ಲರು? ॥ ೩೪ ॥ ಪ್ರಭೋ! ನೀನೇ ಎಲ್ಲರ ನಿಯಾಮಕ ನಾಗಿರುವೆ. ನಿನ್ನ ಈ ವಿಶುದ್ಧ ಸತ್ತ್ವಮಯ ನಿಜಸ್ವರೂಪವು ಇಲ್ಲದಿದ್ದರೆ ಅಜ್ಞಾನ ಮತ್ತು ಅದರಿಂದುಂಟಾಗುವ ಭೇದಭಾವ ವನ್ನು ನಾಶಗೊಳಿಸುವಂತಹ ಅಪರೋಕ್ಷಜ್ಞಾನ ಯಾರಿಗೂ ಆಗುತ್ತಿರಲಿಲ್ಲ. ಜಗತ್ತಿನಲ್ಲಿ ಕಂಡುಬರುವ ತ್ರಿಗುಣಗಳು ನಿನ್ನವೇ ಆಗಿವೆ; ನಿನ್ನಿಂದಲೇ ಪ್ರಕಾಶಿತವಾಗುವುದೂ ಸತ್ಯವೇ ಆಗಿದೆ. ಆದರೆ ಈ ಗುಣಗಳ ಪ್ರಕಾಶಕ ವೃತ್ತಿಗಳಿಂದ ನಿನ್ನ ಸ್ವರೂಪದ ಕೇವಲ ಅನುಮಾನವೇ ಆಗುತ್ತದೆ, ವಾಸ್ತವಿಕ ಸ್ವರೂಪದ ಸಾಕ್ಷಾತ್ಕಾರ ವಾಗುವುದಿಲ್ಲ. (ನಿನ್ನ ಸ್ವರೂಪದ ಸಾಕ್ಷಾತ್ಕಾರವಾದರೋ ನಿನ್ನ ಈ ವಿಶುದ್ಧ ಸತ್ತ್ವಮಯ ಸ್ವರೂಪದ ಸೇವೆಮಾಡಿದಾಗಲೇ ನಿನ್ನ ಕೃಪೆಯಿಂದ ಆಗುತ್ತದೆ.) ॥ ೩೫ ॥ ಭಗವಂತನೇ! ಮನಸ್ಸು ಮತ್ತು ವೇದವಾಣಿಯಿಂದ ಕೇವಲ ನಿನ್ನ ಸ್ವರೂಪದ ಅನುಮಾನ ಮಾತ್ರ ವಾಗುತ್ತದೆ. ಏಕೆಂದರೆ, ನೀನು ಅವುಗಳ ಮೂಲಕ ದೃಶ್ಯನಲ್ಲ; ಅವುಗಳ ಸಾಕ್ಷಿಯಾಗಿರುವೆ. ಆದಕ್ಕಾಗಿ ನಿನ್ನ ಗುಣ, ಜನ್ಮ ಮತ್ತು ಕರ್ಮವೇ ಮೊದಲಾದವುಗಳ ಮೂಲಕ ನಿನ್ನ ನಾಮ-ರೂಪಗಳ ನಿರೂಪಣೆ ಮಾಡಲಾಗುವುದಿಲ್ಲ. ಹೀಗಿದ್ದರೂ ಪ್ರಭುವೇ! ನಿನ್ನ ಭಕ್ತಜನರು ಉಪಾಸನಾದಿ ಕ್ರಿಯಾಯೋಗಗಳ ಮೂಲಕ ನಿನ್ನ ಸಾಕ್ಷಾತ್ಕಾರವನ್ನಾದರೋ ಪಡೆದುಕೊಳ್ಳುವರು. ॥ ೩೬ ॥

ಶೃಣ್ವನ್ಗೃಣನ್ಸಂಸ್ಮರಯಂಶ್ಚ ಚಿಂತಯನ್
ನಾಮಾನಿ ರೂಪಾಣಿ ಚ ಮಂಗಲಾನಿ ತೇ ।
ಕ್ರಿಯಾಸು ಯಸ್ತ್ವಚ್ಚರಣಾರವಿಂದಯೋ-
ರಾವಿಷ್ಟಚೇತಾ ನ ಭವಾಯ ಕಲ್ಪತೇ ॥ ೩೭ ॥

ನಿನ್ನ ಮಂಗಳಮಯ ನಾಮಗಳನ್ನು ಮತ್ತು ರೂಪಗಳನ್ನು ಶ್ರವಣಿಸುತ್ತಾ, ಕೀರ್ತಿಸುತ್ತಾ, ಸ್ಮರಿಸುತ್ತಾ, ಧ್ಯಾನಿಸುತ್ತಾ ನಿನ್ನ ಚರಣ ಕಮಲಗಳ ಸೇವೆಯಲ್ಲೇ ಮನಸ್ಸನ್ನು ತೊಡಗಿಸಿದವನಿಗೆ ಮತ್ತೆ ಜನ್ಮ ಮೃತ್ಯುರೂಪವಾದ ಸಂಸಾರಚಕ್ರದಲ್ಲಿ ಸಿಕ್ಕಿಕೊಳ್ಳಬೇಕಾಗುವುದಿಲ್ಲ. ॥ ೩೭ ॥ ಸಮಸ್ತ ದುಃಖಗಳನ್ನು ದೂರಮಾಡುವ ದಯಾಮಯನಾದ ಭಗವಂತನೇ! ನೀನು ಸರ್ವೇಶ್ವರನು. ಈ ಪೃಥಿವಿಯಾದರೋ ನಿನ್ನ ಚರಣಕಮಲವೇ ಆಗಿದೆ. ನಿನ್ನ ಅವತಾರದಿಂದ ಇದರ ಭಾರ ದೂರವಾಗುವುದು. ಪ್ರಭೋ! ನಿನ್ನ ಸುಂದರವಾದ ಚರಣ ಚಿಹ್ನೆಗಳಿರುವ ಚರಣಕಮಲಗಳಿಂದ ಭೂಷಿತವಾದ ಈ ಭೂಮಿಯನ್ನು ನೋಡುವ ನಾವೇ ಭಾಗ್ಯಶಾಲಿಗಳು ಮತ್ತು ಸ್ವರ್ಗಲೋಕವನ್ನೂ ನಿನ್ನ ಕೃಪಾವಿಶೇಷದಿಂದ ಕೃತಾರ್ಥವಾಗಿರುವುದನ್ನು ನೋಡುವೆವು. ॥ ೩೮ ॥

ದಿಷ್ಟ್ಯಾ ಹರೇಽಸ್ಯಾ ಭವತಃ ಪದೋ ಭುವೋ
ಭಾರೋಽಪನೀತಸ್ತವ ಜನ್ಮನೇಶಿತುಃ ।
ದಿಷ್ಟ್ಯಾಂಕಿತಾಂ ತ್ವತ್ಪದಕೈಃ ಸುಶೋಭನೈ-
ರ್ದ್ರಕ್ಷ್ಯಾಮ ಗಾಂ ದ್ಯಾಂ ಚ ತವಾನುಕಂಪಿತಾಮ್ ॥ ೩೮ ॥

ಪ್ರಭುವೇ! ನೀನು ಹುಟ್ಟು ಸಾವುಗಳಿಲ್ಲದವನು. ಆದರೆ ಈಗ ಮನುಷ್ಯರೂಪದಿಂದ ಹುಟ್ಟುತ್ತಿರುವೆ. ಇದರ ಕಾರಣವನ್ನು ನಾವು ಊಹಿಸುವುದಾದರೆ – ನೀನು ಭೂಮಿಯಲ್ಲಿ ಹುಟ್ಟುವುದು, ಬೆಳೆಯುವುದು ನಿನ್ನ ಲೀಲಾವಿನೋದವೆಂದೇ ಹೇಳಬೇಕಾಗಿದೆ. ಹೀಗೆ ಹೇಳುವ ಕಾರಣವು – ನೀನಾದರೋ ದ್ವೈತದ ಲವಲೇಶದಿಂದ ರಹಿತನಾದ, ಸರ್ವಾಧಿಷ್ಠಾನ ಸ್ವರೂಪನಾಗಿರುವೆ. ಈ ಜಗತ್ತಿನ ಉತ್ಪತ್ತಿ, ಸ್ಥಿತಿ, ಪ್ರಳಯ ಇವುಗಳನ್ನು ನಿನ್ನಲ್ಲಿ ಅಜ್ಞಾನದಿಂದಲೇ ಆರೋಪಿಸಲಾಗುತ್ತದೆ. ॥ ೩೯ ॥

ನ ತೇಽಭವಸ್ಯೇಶ ಭವಸ್ಯ ಕಾರಣಂ
ವಿನಾ ವಿನೋದಂ ಬತ ತರ್ಕಯಾಮಹೇ ।
ಭವೋ ನಿರೋಧಃ ಸ್ಥಿತಿರಪ್ಯವಿದ್ಯಯಾ
ಕೃತಾ ಯತಸ್ತ್ವಯ್ಯಭಯಾಶ್ರಯಾತ್ಮನಿ ॥ ೩೯ ॥

ಪ್ರಭುವೇ! ನೀನು ಅನೇಕಬಾರಿ ಮತ್ಸ್ಯ, ಹಯಗ್ರೀವ, ಕಚ್ಛಪ, ನರಸಿಂಹ, ವರಾಹ, ಹಂಸ, ರಾಮ, ಪರಶುರಾಮ, ವಾಮನ ಮೊದಲಾದ ಅನೇಕ ಅವತಾರಗಳನ್ನೆತ್ತಿ ನಮ್ಮನ್ನು ಮತ್ತು ಮೂರು ಲೋಕಗಳನ್ನು ರಕ್ಷಿಸಿದಂತೆಯೇ, ನೀನು ಈ ಸಲವೂ ಭೂಭಾರವನ್ನು ಹರಿಸು. ಯದುನಂದನ! ನಾವು ನಿನ್ನ ಚರಣಗಳಲ್ಲಿ ವಂದಿಸುತ್ತೇವೆ. ॥ ೪೦ ॥

ಮತ್ಸ್ಯಾಶ್ವಕಚ್ಛಪನೃಸಿಂಹವರಾಹಹಂಸ-
ರಾಜನ್ಯವಿಪ್ರವಿಬುಧೇಷು ಕೃತಾವತಾರಃ ।
ತ್ವಂ ಪಾಸಿ ನಸ್ತ್ರಿಭುವನಂ ಚ ಯಥಾಧುನೇಶ
ಭಾರಂ ಭುವೋ ಹರ ಯದೂತ್ತಮ ವಂದನಂ ತೇ ॥ ೪೦ ॥

(ಅನಂತರ ದೇವಕಿಯನ್ನು ಸಂಬೋಧಿಸುತ್ತಾ –) ತಾಯೇ! ಸೌಭಾಗ್ಯವಶದಿಂದ ನಮ್ಮೆಲ್ಲರಿಗೂ ಕಲ್ಯಾಣವನ್ನುಂಟುಮಾಡುವುದಕ್ಕಾಗಿ ಭಗವಾನ್ ಪುರುಷೋತ್ತಮನು ತನ್ನ ಜ್ಞಾನ, ಬಲವೇ ಮೊದಲಾದ ಅಂಶಗಳೊಡನೆ (ಪೂರ್ಣಸ್ವರೂಪನಾಗಿ) ನಿನ್ನ ಗರ್ಭದಲ್ಲಿದ್ದಾನೆ. ಸಾಯಲು ಸಿದ್ಧನಾಗಿ ನಿಂತಿರುವ ಭೋಜಪತಿ ಯಾದ ಕಂಸನಿಂದ ಇನ್ನು ನಿನಗೆ ಯಾವ ಭಯವೂ ಬೇಡ. ನಿನ್ನ ಪುತ್ರನು ಯದುವಂಶವನ್ನು ರಕ್ಷಿಸುವನು. ॥ ೪೧ ॥

ದಿಷ್ಟ್ಯಾಂಬ ತೇ ಕುಕ್ಷಿಗತಃ ಪರಃ ಪುಮಾನ್
ಅಂಶೇನ ಸಾಕ್ಷಾದ್ಭಗವಾನ್ಭವಾಯ ನಃ ।
ಮಾ ಭೂದ್ಭಯಂ ಭೋಜಪತೇರ್ಮುಮೂರ್ಷೋ-
ರ್ಗೋಪ್ತಾ ಯದೂನಾಂ ಭವಿತಾ ತವಾತ್ಮಜಃ ॥ ೪೧ ॥

*ಶ್ರೀಶುಕ ಉವಾಚ*

ಇತ್ಯಭಿಷ್ಟೂಯ ಪುರುಷಂ ಯದ್ರೂಪಮನಿದಂ ಯಥಾ ।
ಬ್ರಹ್ಮೇಶಾನೌ ಪುರೋಧಾಯ ದೇವಾಃ ಪ್ರತಿಯಯುರ್ದಿವಮ್
॥ ೪೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಯಾವನ ರೂಪವನ್ನು ಇಂತಹುದೇ ಎಂದು ನಿಶ್ಚಯಮಾಡಲು ಸಾಧ್ಯವಿಲ್ಲವೋ, ಅಂತಹ ಪರಮಪುರುಷನನ್ನು ಹೀಗೆ ಸ್ತೋತ್ರ ಮಾಡಿದ ಬಳಿಕ ಬ್ರಹ್ಮ-ರುದ್ರರನ್ನು ಮುಂದೆಮಾಡಿಕೊಂಡು ದೇವತೆಗಳು ಸ್ವರ್ಗಕ್ಕೆ ತೆರಳಿದರು. ॥ ೪೨ ॥

*ಎರಡನೆಯ ಅಧ್ಯಾಯವು ಮುಗಿಯಿತು. ॥ ೨ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ಗರ್ಭಗತವಿಷ್ಣೋರ್ಬ್ರಹ್ಮಾದಿಕೃತಸ್ತುತಿರ್ನಾಮ ದ್ವಿತೀಯೋಽಧ್ಯಾಯಃ ॥ ೨ ॥

# ಮೂರನೆಯ ಅಧ್ಯಾಯ

## ಭಗವಾನ್ ಶ್ರೀಕೃಷ್ಣನ ಪ್ರಾಕಟ್ಯ

*ಶ್ರೀಶುಕ ಉವಾಚ*

**ಅಥ ಸರ್ವಗುಣೋಪೇತಃ ಕಾಲಃ ಪರಮಶೋಭನಃ ।**
**ಯರ್ಹ್ಯೇವಾಜನಜನ್ಮರ್ಕ್ಷಂ ಶಾಂತರ್ಕ್ಷಗ್ರಹತಾರಕಮ್ ॥ ೧ ॥**

**ದಿಶಃ ಪ್ರಸೇದುರ್ಗಗನಂ ನಿರ್ಮಲೋಡುಗಣೋದಯಮ್ ।**
**ಮಹೀ ಮಂಗಲಭೂಯಿಷ್ಠಪುರಗ್ರಾಮವ್ರಜಾಕರಾ ॥ ೨ ॥**

**ನದ್ಯಃ ಪ್ರಸನ್ನಸಲಿಲಾ ಹ್ರದಾ ಜಲರುಹಶ್ರಿಯಃ ।**
**ದ್ವಿಜಾಲಿಕುಲಸಂನಾದಸ್ತಬಕಾ ವನರಾಜಯಃ ॥ ೩ ॥**

**ವವೌ ವಾಯುಃ ಸುಖಸ್ಪರ್ಶಃ ಪುಣ್ಯಗಂಧವಹಃ ಶುಚಿಃ ।**
**ಅಗ್ನಯಶ್ಚ ದ್ವಿಜಾತೀನಾಂ ಶಾಂತಾಸ್ತತ್ರ ಸಮಿಂಧತ ॥ ೪ ॥**

**ಮನಾಂಸ್ಯಾಸನ್ಪ್ರಸನ್ನಾನಿ ಸಾಧೂನಾಮಸುರದ್ರುಹಾಮ್ ।**
**ಜಾಯಮಾನೇಽಜನೇ ತಸ್ಮಿನ್ನೇದುರ್ದುಂದುಭಯೋ ದಿವಿ ॥ ೫ ॥**

**ಜಗುಃ ಕಿನ್ನರಗಂಧರ್ವಾಸ್ತುಷ್ಟುವುಃ ಸಿದ್ಧಚಾರಣಾಃ ।**
**ವಿದ್ಯಾಧರ್ಯಶ್ಚ ನನೃತುರಪ್ಸರೋಭಿಃ ಸಮಂ ತದಾ ॥ ೬ ॥**

**ಮುಮುಚುರ್ಮುನಯೋ ದೇವಾಃ ಸುಮನಾಂಸಿ ಮುದಾನ್ವಿತಾಃ ।**
**ಮಂದಂ ಮಂದಂ ಜಲಧರಾ ಜಗರ್ಜುರನುಸಾಗರಮ್ ॥ ೭ ॥**

**ನಿಶೀಥೇ ತಮಉದ್ಭೂತೇ ಜಾಯಮಾನೇ ಜನಾರ್ದನೇ ।**
**ದೇವಕ್ಯಾಂ ದೇವರೂಪಿಣ್ಯಾಂ ವಿಷ್ಣುಃ ಸರ್ವಗುಹಾಶಯಃ ।**
**ಆವಿರಾಸೀದ್ಯಥಾ ಪ್ರಾಚ್ಯಾಂ ದಿಶೀಂದುರಿವ ಪುಷ್ಕಲಃ ॥ ೮ ॥**

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ಅನಂತರ ಸಮಸ್ತ ಗುಣಗಳಿಂದ ಸಂಪನ್ನವಾದ ಅತ್ಯಂತ ಶೋಭಾಯಮಾನವಾದ ಶುಭಸಮಯವು ಸನ್ನಿಹಿತವಾಯಿತು. ಅಂದು ಬ್ರಹ್ಮದೇವತಾತ್ಮಕವಾದ ರೋಹಿಣೀ ನಕ್ಷತ್ರವಿತ್ತು. ಆಕಾಶದಲ್ಲಿ ಸಮಸ್ತ ಗ್ರಹ, ನಕ್ಷತ್ರ, ತಾರೆಗಳೂ ಶಾಂತವಾಗಿದ್ದವು. ॥ ೧ ॥ ದಿಕ್ಕುಗಳು ಸ್ವಚ್ಛವಾಗಿದ್ದು ಪ್ರಸನ್ನವಾಗಿದ್ದವು. ನಿರ್ಮಲಾಕಾಶದಲ್ಲಿ ತಾರೆಗಳು ಜಗ-ಜಗಿಸುತ್ತಿದ್ದವು. ಭೂಮಂಡಲದ ದೊಡ್ಡ-ದೊಡ್ಡ ಪಟ್ಟಣಗಳಲ್ಲಿ, ಗ್ರಾಮಗಳಲ್ಲಿ, ಗೋಪಾಲಕರ ದೊಡ್ಡಿಗಳಲ್ಲಿಯೂ ಮಂಗಳಕರವಾದ ವಾತಾವರಣವಿತ್ತು. ॥ ೨ ॥ ನದಿಗಳು ತಿಳಿಯಾದ ನೀರಿನಿಂದ ತುಂಬಿ ಹರಿಯುತ್ತಿದ್ದವು. ರಾತ್ರಿಯಲ್ಲಿಯೂ ಕೂಡ ಸರೋವರಗಳಲ್ಲಿ ಕಮಲ-ಕನ್ನೈದಿಲೆಗಳು ಅರಳಿದ್ದವು. ವನಗಳಲ್ಲಿ ವೃಕ್ಷಗಳ ಸಾಲುಗಳು ಫಲ-ಪುಷ್ಪಗಳ ಗೊಂಚಲುಗಳಿಂದ ರಾರಾಜಿಸುತ್ತಿದ್ದವು. ಪಕ್ಷಿಗಳು ಅವುಗಳ ಮೇಲೆ ಕುಳಿತು ಚಿಲಿಪಿಲಿಗುಟ್ಟುತ್ತಿದ್ದವು. ದುಂಬಿಗಳು ಝೇಂಕರಿಸುತ್ತಿದ್ದವು. ॥ ೩ ॥ ಆ ಸಮಯದಲ್ಲಿ ಪರಮ ಪವಿತ್ರ ಹಾಗೂ ಶೀತಲ-ಮಂದ-ಸುಗಂಧಿತ ವಾಯುವು ತನ್ನ ಸ್ಪರ್ಶದಿಂದ ಜನರಿಗೆ ಸುಖದಾಯಕವಾಗಿ ಬೀಸುತ್ತಿತ್ತು. ಎಂದೂ ಆರದಿರುವ ಬ್ರಾಹ್ಮಣರ ಅಗ್ನಿಹೋತ್ರದ ಅಗ್ನಿಗಳು ಕಂಸನ ಅತ್ಯಾಚಾರದಿಂದ ನಂದಿಹೋಗಿದ್ದವು. ಅವು ಪುನಃ ತನ್ನಿಂದ ತಾನೇ ಉರಿಯತೊಡಗಿದವು. ॥ ೪ ॥ ಭಗವಂತನು ಆವಿರ್ಭವಿಸುವ ಸಮಯವು ಸನ್ನಿಹಿತವಾದಾಗ ಸತ್ಪುರುಷರ ಮತ್ತು ದೈತ್ಯದ್ರೋಹಿಗಳಾದ ದೇವತೆಗಳ ಮನಸ್ಸು ಪ್ರಸನ್ನತೆಯಿಂದ ತುಂಬಿಹೋಯಿತು. ಸ್ವರ್ಗದಲ್ಲಿ ದೇವದುಂದುಭಿಗಳು ಮೊಳಗತೊಡಗಿದವು. ॥ ೫ ॥ ಗಂಧರ್ವ-ಕಿನ್ನರರು ಮಧುರವಾಗಿ ಹಾಡತೊಡಗಿದರು. ಸಿದ್ಧ-ಚಾರಣರು ಭಗವಂತನ ಮಂಗಲಮಯ ಗುಣಗಳನ್ನು ಸ್ತುತಿಸತೊಡಗಿದರು. ವಿದ್ಯಾಧರ ಸ್ತ್ರೀಯರು ಅಪ್ಸರೆಯರೊಂದಿಗೆ ನಾಟ್ಯವಾಡತೊಡಗಿದರು. ॥ ೬ ॥ ನಾರದರೇ ಮೊದಲಾದ ಮುನಿಗಳು, ಇಂದ್ರಾದಿದೇವತೆಗಳು ಆನಂದ ತುಂದಿಲರಾಗಿ ಹೂಮಳೆಗರೆದರು. ನೀರುತುಂಬಿದ ಮೋಡಗಳು ಕಡಲಿನ ಬಳಿಗೆ ಹೋಗಿ ಗಂಭೀರವಾಗಿ ಗುಡುಗುಟ್ಟುತ್ತಿದ್ದವು. ॥ ೭ ॥ ಹುಟ್ಟು-ಸಾವುಗಳೆಂಬ ಚಕ್ರದಿಂದ ಬಿಡುಗಡೆಗೊಳಿಸುವಂತಹ ಜನಾರ್ದನನ ಅವತಾರದ ಸಮಯ ಮಧ್ಯರಾತ್ರಿಯಾಗಿತ್ತು. ಎಲ್ಲೆಡೆ ಅಂಧಕಾರವೇ ತುಂಬಿತ್ತು. ಅದೇ ಸಮಯದಲ್ಲಿ ಎಲ್ಲರ ಹೃದಯದಲ್ಲಿಯೂ ವಿರಾಜಿಸುವ ಭಗವಾನ್ ಮಹಾವಿಷ್ಣುವು ದೇವರೂಪಿಣಿಯಾದ ದೇವಕಿಯ ಗರ್ಭದಿಂದ ಮೂಡುದಿಕ್ಕಿನಲ್ಲಿ ಷೋಡಶ ಕಲೆಗಳಿಂದ ಕೂಡಿದ ಉಡುಪತಿಯು ಉದಯಿಸುವಂತೆ ಯದುಪತಿಯು ಪ್ರಕಟನಾದನು. ॥ ೮ ॥

ತಮದ್ಭುತಂ ಬಾಲಕಮಂಬುಜೇಕ್ಷಣಂ
ಚತುರ್ಭುಜಂ ಶಂಖಗದಾದ್ಯುದಾಯುಧಮ್ ।
ಶ್ರೀವತ್ಸಲಕ್ಷ್ಮಂ ಗಲಶೋಭಿಕೌಸ್ತುಭಂ
ಪೀತಾಂಬರಂ ಸಾಂದ್ರಪಯೋದಸೌಭಗಮ್ ॥ ೯ ॥

ಮಹಾರ್ಹವೈದೂರ್ಯಕಿರೀಟಕುಂಡಲ-
ತ್ವಿಷಾ ಪರಿಷ್ವಕ್ತ ಸಹಸ್ರಕುಂತಲಮ್ ।
ಉದ್ದಾಮಕಾಂಚ್ಯಂಗದಕಂಕಣಾದಿಭಿ-
ರ್ವಿರೋಚಮಾನಂ ವಸುದೇವ ಐಕ್ಷತ ॥ ೧೦ ॥

ಸ ವಿಸ್ಮಯೋತ್ಫುಲ್ಲವಿಲೋಚನೋ ಹರಿಂ
ಸುತಂ ವಿಲೋಕ್ಯಾನಕದುಂದುಭಿಸ್ತದಾ ।
ಕೃಷ್ಣಾವತಾರೋತ್ಸವಸಂಭ್ರಮೋಽಸ್ಪೃಶನ್
ಮುದಾ ದ್ವಿಜೇಭ್ಯೋಽಯುತಮಾಪ್ಲುತೋ ಗವಾಮ್ ॥ ೧೧ ॥

ಅಥೈನಮಸ್ತೌದವಧಾರ್ಯ ಪೂರುಷಂ
ಪರಂ ನತಾಂಗಃ ಕೃತಧೀಃ ಕೃತಾಂಜಲಿಃ ।
ಸ್ವರೋಚಿಷಾ ಭಾರತ ಸೂತಿಕಾಗೃಹಂ
ವಿರೋಚಯಂತಂ ಗತಭೀಃ ಪ್ರಭಾವವಿತ್ ॥ ೧೨ ॥

*ವಸುದೇವ ಉವಾಚ*

ವಿದಿತೋಽಸಿ ಭವಾನ್ಸಾಕ್ಷಾತ್ಪುರುಷಃ ಪ್ರಕೃತೇಃ ಪರಃ ।
ಕೇವಲಾನುಭವಾನಂದಸ್ವರೂಪಃ ಸರ್ವಬುದ್ಧಿದೃಕ್ ॥ ೧೩ ॥

ಸ ಏವ ಸ್ವಪ್ರಕೃತ್ಯೇದಂ ಸೃಷ್ಟ್ವಾಗ್ರೇ ತ್ರಿಗುಣಾತ್ಮಕಮ್ ।
ತದನು ತ್ವಂ ಹ್ಯಪ್ರವಿಷ್ಟಃ ಪ್ರವಿಷ್ಟ ಇವ ಭಾವ್ಯಸೇ ॥ ೧೪ ॥

ಯಥೇಮೇಽವಿಕೃತಾ ಭಾವಾಸ್ತಥಾ ತೇ ವಿಕೃತೈಃ ಸಹ ।
ನಾನಾವೀರ್ಯಾಃ ಪೃಥಗ್ಭೂತಾ ವಿರಾಜಂ ಜನಯಂತಿ ಹಿ ॥ ೧೫ ॥

ಸನ್ನಿಪತ್ಯ ಸಮುತ್ಪಾದ್ಯ ದೃಶ್ಯಂತೇಽನುಗತಾ ಇವ ।
ಪ್ರಾಗೇವ ವಿದ್ಯಮಾನತ್ವಾನ್ನ ತೇಷಾಮಿಹ ಸಂಭವಃ ॥ ೧೬ ॥

ತನ್ನ ಮುಂದೆ ಅದ್ಭುತ ಬಾಲಕರೂಪನಾದ ಭಗವಂತನನ್ನು ವಸುದೇವನು ನೋಡಿದನು. ಅವನ ಕಣ್ಣುಗಳು ಕಮಲದಂತೆ ವಿಶಾಲವೂ, ಸುಕೋಮಲವೂ ಆಗಿದ್ದವು. ಸುಂದರವಾದ ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಗದೆ, ಪದ್ಮಗಳನ್ನು ಧರಿಸಿದ್ದನು. ಅವನ ವಕ್ಷಸ್ಥಳದಲ್ಲಿ ಅತ್ಯಂತ ಸುಂದರವೂ, ಸುವರ್ಣಮಯವೂ ಆದ ಶ್ರೀವತ್ಸದ ಚಿಹ್ನೆಯು ಇದ್ದಿತು. ಕೊರಳಲ್ಲಿ ಕೌಸ್ತುಭಮಣಿಯು ಝಗ-ಝಗಿಸುತ್ತಿತ್ತು. ವರ್ಷಾಕಾಲದ ಮೇಘದಂತಿರುವ ಪರಮ ಸುಂದರ ಶ್ಯಾಮಲಶರೀರದ ಮೇಲೆ ಮನೋಹರ ಪೀತಾಂಬರವು ಶೋಭಿಸುತ್ತಿತ್ತು. ಬಹುಮೂಲ್ಯ ವೈಡೂರ್ಯಮಣಿಯ ಕಿರೀಟ ಕುಂಡಲಗಳ ಕಾಂತಿಯಿಂದ ಅಂದವಾದ ಗುಂಗುರಾದ ಕೂದಲುಗಳು ಸೂರ್ಯನ ಕಿರಣಗಳಂತೆ ಹೊಳೆಯುತ್ತಿದ್ದವು. ನಡುವಿನಲ್ಲಿ ಒಡ್ಯಾಣವೂ, ಬಾಹುಗಳಲ್ಲಿ ಕೇಯೂರಗಳೂ ಕರಗಳಲ್ಲಿ ಕಂಕಣಗಳೂ ಶೋಭಿಸುತ್ತಿದ್ದವು. ಇವೆಲ್ಲ ಆಭೂಷಣಗಳಿಂದ ಸುಶೋಭಿತನಾದ ಬಾಲಕನ ಸರ್ವಾಂಗದಿಂದ ಅಲೌಕಿಕವಾದ ಸೌಂದರ್ಯವು ಸೂಸುತ್ತಿತ್ತು. ॥ ೯-೧೦ ॥ ತನ್ನ ಪುತ್ರರೂಪದಲ್ಲಿ ಭಗವಂತನೇ ಬಂದಿರುವನೆಂದು ನೋಡಿದಾಗ ವಸುದೇವನಿಗೆ ಮೊದಲಿಗೆ ಅಸೀಮ ಆಶ್ಚರ್ಯವಾಯಿತು. ಆನಂದದಿಂದ ಕಣ್ಣುಗಳು ಅರಳಿದವು. ಅವನ ರೋಮ-ರೋಮಗಳು ಆನಂದದಲ್ಲಿ ಮುಳುಗಿಹೋದವು. ಶ್ರೀಕೃಷ್ಣನ ಜನ್ಮೋತ್ಸವದ ಸಂಭ್ರಮದಲ್ಲಿದ್ದ ಅವನು ಆಗಲೇ ಬ್ರಾಹ್ಮಣರಿಗೆ ಹತ್ತುಸಾವಿರ ಗೋವುಗಳನ್ನು ದಾನ ಮಾಡಲು ಮನಸ್ಸಿನಲ್ಲೇ ಸಂಕಲ್ಪಿಸಿದನು. ॥ ೧೧ ॥ ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ತನ್ನ ಅಂಗಕಾಂತಿಯಿಂದ ಸೂತಿಕಾಗೃಹವನ್ನು ಬೆಳಗುತ್ತಿದ್ದನು. ಪರಮಪುರುಷ ಪರಮಾತ್ಮನೇ ತನಗೆ ಮಗನಾಗಿ ಬಂದಿರುವನೆಂದು ನಿಶ್ಚಯವಾದಾಗ ಭಗವಂತನ ಪ್ರಭಾವವನ್ನು ಪೂರ್ಣವಾಗಿ ಅರಿತಿದ್ದ ವಸುದೇವನ ಭಯವೆಲ್ಲವೂ ಹೊರಟುಹೋಯಿತು. ತನ್ನ ಬುದ್ಧಿಯನ್ನು ಸ್ಥಿರಗೊಳಿಸಿ ಅವನು ಭಗವಂತನ ಚರಣಗಳಲ್ಲಿ ತಲೆಯನ್ನಿಟ್ಟು ಕೈಗಳನ್ನು ಜೋಡಿಸಿ ಕೊಂಡು ಅವನನ್ನು ಸ್ತುತಿಸತೊಡಗಿದನು. ॥ ೧೨ ॥

**ವಸುದೇವನು ಹೇಳಿದನು** – ನೀನು ಪ್ರಕೃತಿಗೆ ಅತೀತನಾದ ಸಾಕ್ಷಾತ್ ಪುರುಷೋತ್ತಮನಾಗಿರುವೆ ಎಂಬುದನ್ನು ನಾನು ತಿಳಿದಿದ್ದೇನೆ. ನಿನ್ನ ಸ್ವರೂಪವು ಕೇವಲ ಅನುಭವೈಕವೇದ್ಯವಾದುದು ಹಾಗೂ ಆನಂದಮಯವಾದುದು. ಸಮಸ್ತ ಬುದ್ಧಿಗಳಿಗೆ ನೀನೇ ಸಾಕ್ಷಿಯಾಗಿರುವೆ. ॥ ೧೩ ॥ ನೀನೇ ಸೃಷ್ಟಿಯ ಮೊದಲಲ್ಲಿ ನಿನ್ನ ಪ್ರಕೃತಿಯಿಂದ ಈ ತ್ರಿಗುಣಮಯವಾದ ಜಗತ್ತನ್ನು ಸೃಷ್ಟಿಸುವೆ. ಮತ್ತೆ ಅದರಲ್ಲಿ ಪ್ರವಿಷ್ಟನಾಗದಿದ್ದರೂ ನೀನು ಸೇರಿ ಕೊಂಡಿರುವಂತೆ ಕಂಡು ಬರುತ್ತೀಯೆ. ॥ ೧೪ ॥ ಮಹತ್ತತ್ತ್ವಾದಿ ಕಾರಣ-ತತ್ತ್ವಗಳು ಬೇರೆ ಬೇರೆಯಾಗಿರುವವರೆಗೂ ಅವುಗಳ ಶಕ್ತಿಯೂ ಬೇರೆ-ಬೇರೆಯಾಗಿಯೇ ಇರುತ್ತದೆ. ಅವು ಇಂದ್ರಿಯಾದಿ ಹದಿನಾರು ತತ್ತ್ವಗಳೊಂದಿಗೆ ಸೇರಿದಾಗ ಈ ಬ್ರಹ್ಮಾಂಡವನ್ನು ರಚಿಸುವುವು ಮತ್ತು ಇದನ್ನು ಸೃಷ್ಟಿಸಿ ಇದರಲ್ಲಿ ನೀನು ಅನುಪ್ರವಿಷ್ಟನಂತೆ ಕಂಡುಬರುತ್ತಿರುವೆ. ಆದರೆ ನಿಜವಾಗಿ ನೀನು ಯಾವುದೇ ಪದಾರ್ಥದಲ್ಲಿ ಪ್ರವೇಶಿಸುವುದಿಲ್ಲ, ಅವುಗಳಿಂದ ರಚಿಸಲ್ಪಟ್ಟ ವಸ್ತುಗಳಲ್ಲಿ ನೀನು ಮೊದಲಿನಿಂದಲೂ ಇದ್ದುದೇ ಹೀಗೆ ಕಂಡುಬರಲು ಕಾರಣವಾಗಿದೆ॥ ೧೫-೧೬ ॥

ಏವಂ ಭವಾನ್ಬುದ್ಧ್ಯನುಮೇಯಲಕ್ಷಣೈ-
ರ್ಗ್ರಾಹ್ಯೈರ್ಗುಣೈಃ ಸನ್ನಪಿ ತದ್ಗುಣಾಗ್ರಹಃ ।
ಅನಾವೃತತ್ವಾದ್ಬಹಿರಂತರಂ ನ ತೇ
ಸರ್ವಸ್ಯ ಸರ್ವಾತ್ಮನ ಆತ್ಮವಸ್ತುನಃ ॥ ೧೭ ॥

ಯ ಆತ್ಮನೋ ದೃಶ್ಯಗುಣೇಷು ಸನ್ನಿತಿ
ವ್ಯವಸ್ಯತೇ ಸ್ವವ್ಯತಿರೇಕತೋಽಬುಧಃ ।
ವಿನಾನುವಾದಂ ನ ಚ ತನ್ಮನೀಷಿತಂ
ಸಮ್ಯಗ್ಯತಸ್ತ್ಯಕ್ತಮುಪಾದದತ್ಪುಮಾನ್ ॥ ೧೮ ॥

ತ್ವತ್ತೋಽಸ್ಯ ಜನ್ಮಸ್ಥಿತಿಸಂಯಮಾನ್ವಿಭೋ
ವದಂತ್ಯನೀಹಾದಗುಣಾದವಿಕ್ರಿಯಾತ್ ।
ತ್ವಯೀಶ್ವರೇ ಬ್ರಹ್ಮಣಿ ನೋ ವಿರುಧ್ಯತೇ
ತ್ವದಾಶ್ರಯತ್ವಾದುಪಚರ್ಯತೇ ಗುಣೈಃ ॥ ೧೯ ॥

ಸ ತ್ವಂ ತ್ರಿಲೋಕಸ್ಥಿತಯೇ ಸ್ವಮಾಯಯಾ
ಬಿಭರ್ಷಿ ಶುಕ್ಲಂ ಖಲು ವರ್ಣಮಾತ್ಮನಃ ।
ಸರ್ಗಾಯ ರಕ್ತಂ ರಜಸೋಪಬೃಂಹಿತಂ
ಕೃಷ್ಣಂ ಚ ವರ್ಣಂ ತಮಸಾ ಜನಾತ್ಯಯೇ ॥ ೨೦ ॥

ತ್ವಮಸ್ಯ ಲೋಕಸ್ಯ ವಿಭೋ ರಿರಕ್ಷಿಷು-
ರ್ಗೃಹೇಽವತೀರ್ಣೋಽಸಿ ಮಮಾಖಿಲೇಶ್ವರ ।
ರಾಜನ್ಯಸಂಜ್ಞಾಸುರಕೋಟಿಯೂಥಪೈ-
ರ್ನಿರ್ವ್ಯೂಹ್ಯಮಾನಾ ನಿಹನಿಷ್ಯಸೇ ಚಮೂಃ ॥ ೨೧ ॥

ಅಯಂ ತ್ವಸಭ್ಯಸ್ತವ ಜನ್ಮ ನೌ ಗೃಹೇ
ಶ್ರುತ್ವಾಗ್ರಜಾಂಸ್ತೇ ನ್ಯವಧೀತ್ಸುರೇಶ್ವರ ।
ಸ ತೇಽವತಾರಂ ಪುರುಷೈಃ ಸಮರ್ಪಿತಂ
ಶ್ರುತ್ವಾಧುನೈವಾಭಿಸರತ್ಯುದಾಯುಧಃ ॥ ೨೨ ॥

ಹಾಗೆಯೇ ಬುದ್ಧಿಯಮೂಲಕ ಕೇವಲ ಗುಣಗಳ ಲಕ್ಷಣಗಳೇ ಅನುಮಾನಿ ಸಲ್ಪಡುತ್ತವೆ. ಮತ್ತು ಇಂದ್ರಿಯಗಳ ಮೂಲಕ ಕೇವಲ ಗುಣಮಯ ವಿಷಯಗಳನ್ನೇ ಗ್ರಹಿಸಲಾಗುತ್ತದೆ. ನೀನು ಅದರಲ್ಲಿ ಇದ್ದರೂ ಆ ಗುಣಗಳ ಗ್ರಹಣದಿಂದ ನಿನ್ನನ್ನು ಗ್ರಹಿಸಿದಂತಾ ಗುವುದಿಲ್ಲ. ನೀನು ಎಲ್ಲವೂ ಆಗಿದ್ದು ಎಲ್ಲರ ಅಂತರ್ಯಾಮಿ ಯಾಗಿರುವೆ ಹಾಗೂ ಪರಮಾರ್ಥಸತ್ಯವಾದ ಆತ್ಮಸ್ವರೂಪನಾಗಿ ರುವುದೇ ಇದರ ಕಾರಣವಾಗಿದೆ. ಗುಣಗಳ ಆವರಣವು ನಿನ್ನನ್ನು ಮುಚ್ಚಿಡಲಾರದು. ಆದ್ದರಿಂದ ನಿನ್ನಲ್ಲಿ ಒಳಗೆ-ಹೊರಗೆ ಎಂಬುದಿಲ್ಲ ಅನಾವೃತನಾಗಿರುವೆ. ಹಾಗಿರುವಾಗ ನೀನು ಯಾವುದರಲ್ಲಿ ಪ್ರವೇಶಿಸುವುದು ? (ಆದ್ದರಿಂದ ಪ್ರವೇಶಿಸದೆಯೇ ನೀನು ಪ್ರವೇಶಿಸಿದಂತೆ ಕಂಡು ಬರುತ್ತಿಯೆ.) ॥ ೧೭ ॥ ನಿನ್ನ ಈ ದೃಶ್ಯಗುಣಗಳು ನಿನ್ನಿಂದ ಬೇರೆ ಎಂದು ಅರಿತು ಸತ್ಯವಾದುವು ಎಂದು ತಿಳಿಯುವವರು ಅಜ್ಞಾನಿಗಳು. ಏಕೆಂದರೆ, ವಿಚಾರಮಾಡಿದಾಗ ಈ ದೇಹ, ಗೇಹ ಮುಂತಾದ ಪದಾರ್ಥಗಳು ವಾಗ್ವಿಲಾಸವಲ್ಲದೆ ಬೇರೆ ಏನೂ ಇಲ್ಲ ಎಂಬುದು ಸಿದ್ಧವಾಗುತ್ತದೆ. ವಿಚಾರದ ಮೂಲಕ ಯಾವ ವಸ್ತುವಿನ ಅಸ್ತಿತ್ವವು ಸಿದ್ಧಿಯಾಗದೆ ನಿರಾಕರಣವಾಗುವ ಅದನ್ನು ಸತ್ಯವೆಂದು ಒಪ್ಪಿರುವ ಮನುಷ್ಯನು ಬುದ್ಧಿವಂತನು ಹೇಗಾಗ ಬಲ್ಲನು ? ॥೧೮॥ ಪ್ರಭೋ ! ನೀನು ಸ್ವಯಂ ಸಮಸ್ತ ಕ್ರಿಯೆಗಳಿಂದ, ಗುಣಗಳಿಂದ, ವಿಕಾರಗಳಿಂದ ರಹಿತನಾಗಿರುವೆ ಎಂದು ಹೇಳುತ್ತಾರೆ. ಹೀಗಿದ್ದರೂ ಈ ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಇವುಗಳು ನಿನ್ನಿಂದಲೇ ಆಗುತ್ತವೆ. ಇಂತಹ ಮಾತು ಪರಮೈಶ್ವರ್ಯ ಶಾಲಿಯಾದ, ಪರಬ್ರಹ್ಮ ಪರಮಾತ್ಮನಾದ ನಿನಗೆ ಅಸಂಗತವಲ್ಲ. ಏಕೆಂದರೆ, ತ್ರಿಗುಣಗಳ ಆಶ್ರಯ ನೀನೇ ಆಗಿರುವೆ. ಇದರಿಂದ ಆ ಗುಣಗಳ ಕಾರ್ಯವೇ ಮುಂತಾದವುಗಳನ್ನು ನಿನ್ನಲ್ಲೇ ಆರೋಪಿಸಲಾಗುತ್ತದೆ. ॥ ೧೯ ॥ ನೀನೇ ಮೂರುಲೋಕಗಳನ್ನು ರಕ್ಷಿಸಲಿಕ್ಕಾಗಿ ನಿನ್ನ ಮಾಯೆಯಿಂದ ಸತ್ತ್ವಮಯ ಶುಕ್ಲವರ್ಣ (ಪೋಷಕನಾದ ವಿಷ್ಣುರೂಪ)ವನ್ನು ಹೊಂದುವೆ. ಉತ್ಪತ್ತಿಗಾಗಿ ರಜೋಗುಣಪ್ರಧಾನವಾದ ರಕ್ತವರ್ಣ (ಸೃಷ್ಟಿಕರ್ತ ಬ್ರಹ್ಮರೂಪ)ವನ್ನು ಮತ್ತು ಪ್ರಳಯ ಸಮಯ ತಮೋ ಗುಣಪ್ರಧಾನವಾದ ಕೃಷ್ಣವರ್ಣ (ಸಂಹಾರಕಾರಿ ರುದ್ರ ರೂಪ)ವನ್ನು ಸ್ವೀಕರಿಸುವೆ. ॥ ೨೦ ॥ ಪ್ರಭುವೇ ! ನೀನು ಸರ್ವ ಶಕ್ತನೂ, ಸರ್ವರಿಗೂ ಸ್ವಾಮಿಯಾಗಿರುವೆ. ಈ ಜಗತ್ತನ್ನು ರಕ್ಷಿಸ ಲೆಂದೇ ನೀನು ನನ್ನ ಮನೆಯಲ್ಲಿ ಅವತರಿಸಿರುವೆ. ಇಂದಿನ ದಿನ ಗಳಲ್ಲಿ ಕೋಟಿ-ಕೋಟಿ ಅಸುರ ಸೇನಾಪತಿಗಳು ತಾವೇ ರಾಜರೆಂದು ಹೇಳಿಕೊಂಡು ತಮ್ಮ ಅಧೀನದಲ್ಲಿ ದೊಡ್ಡ-ದೊಡ್ಡ ಸೈನ್ಯವನ್ನು ಶೇಖರಿಸಿರುವರು. ನೀನು ಅವರೆಲ್ಲರನ್ನೂ ಸಂಹರಿಸುವೆ. ॥ ೨೧ ॥ ದೇವತೆಗಳಿಗೂ ಆರಾಧ್ಯದೇವನಾದ ಪ್ರಭುವೇ ! ಅಸಭ್ಯನಾದ ಈ ದುಷ್ಟ ಕಂಸನಾದರೋ ನನ್ನ ಪತ್ನಿಯಲ್ಲಿ – ಅವನಿಗೆ ಮೃತ್ಯುಪ್ರಾಯನಾದ ನೀನು ಅವತರಿಸುವೆನೆಂಬ ವಿಷಯವು ತಿಳಿದಾಗ ನಿನ್ನ ಭಯದಿಂದ ನಿನ್ನಣ್ಣಂದಿರೆಲ್ಲರನ್ನು ಕೊಂದು ಹಾಕಿದನು. ಈಗಲೂ ನೀನು ನನ್ನ ಮನೆಯಲ್ಲಿ ಅವತರಿಸಿದೆ ಎಂಬ ಸಮಾಚಾರ ತಿಳಿದೊಡನೆ ಖಡ್ಗವನ್ನೆತ್ತಿಕೊಂಡು ಓಡಿ ಇಲ್ಲಿಗೆ ಬರುವನು. ॥ ೨೨ ॥

ಶ್ರೀಶುಕ ಉವಾಚ

ಅಥೈನಮಾತ್ಮಜಂ ವೀಕ್ಷ್ಯ ಮಹಾಪುರುಷಲಕ್ಷಣಮ್ ।
ದೇವಕೀ ತಮುಪಾಧಾವತ್ಕಂಸಾದ್ಭೀತಾ ಶುಚಿಸ್ಮಿತಾ ॥ ೨೩ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ದೇವಕಿಯು ತನ್ನ ಪುತ್ರನಲ್ಲಾದರೋ ಪುರುಷೋತ್ತಮ ಭಗವಂತನ ಎಲ್ಲ ಲಕ್ಷಣಗಳನ್ನು ನೋಡಿ, ಮೊದಲಿಗೆ ಅವಳಿಗೆ ಕಂಸನಿಂದ ಸ್ವಲ್ಪ ಭಯವೇ ಆಯಿತು; ಆದರೆ ತತ್‌ಕ್ಷಣ ಭಗವಂತನ ಸನ್ನಿಧಿಯಿಂದಾಗಿ ನಿರ್ಭಯಳಾಗಿ ಮುಗುಳ್ನಗುತ್ತಾ ಸ್ತುತಿಸ ತೊಡಗಿದಳು. ॥ ೨೩ ॥

ದೇವಕ್ಯುವಾಚ

ರೂಪಂ ಯತ್ತತ್ಪ್ರಾಹುರವ್ಯಕ್ತಮಾದ್ಯಂ
ಬ್ರಹ್ಮ ಜ್ಯೋತಿರ್ನಿರ್ಗುಣಂ ನಿರ್ವಿಕಾರಮ್ ।
ಸತ್ತಾಮಾತ್ರಂ ನಿರ್ವಿಶೇಷಂ ನಿರೀಹಂ
ಸ ತ್ವಂ ಸಾಕ್ಷಾದ್ವಿಷ್ಣುರಧ್ಯಾತ್ಮದೀಪಃ ॥ ೨೪ ॥

ನಷ್ಟೇ ಲೋಕೇ ದ್ವಿಪರಾರ್ಧಾವಸಾನೇ
ಮಹಾಭೂತೇಷ್ವಾದಿಭೂತಂ ಗತೇಷು ।
ವ್ಯಕ್ತೇಽವ್ಯಕ್ತಂ ಕಾಲವೇಗೇನ ಯಾತೇ
ಭವಾನೇಕಃ ಶಿಷ್ಯತೇ ಶೇಷಸಂಜ್ಞಃ ॥ ೨೫ ॥

ಯೋಽಯಂ ಕಾಲಸ್ತಸ್ಯ ತೇಽವ್ಯಕ್ತಬಂಧೋ
ಚೇಷ್ಟಾಮಾಹುಶ್ಚೇಷ್ಟತೇ ಯೇನ ವಿಶ್ವಮ್ ।
ನಿಮೇಷಾದಿರ್ವತ್ಸರಾಂತೋ ಮಹೀಯಾಂ-
ಸ್ತಂ ತ್ವೇಶಾನಂ ಕ್ಷೇಮಧಾಮ ಪ್ರಪದ್ಯೇ ॥ ೨೬ ॥

ಮರ್ತ್ಯೋ ಮೃತ್ಯುವ್ಯಾಲಭೀತಃ ಪಲಾಯನ್
ಲೋಕಾನ್ಸರ್ವಾನ್ನಿರ್ಭಯಂ ನಾಧ್ಯಗಚ್ಛತ್ ।
ತ್ವತ್ಪಾದಾಬ್ಜಂ ಪ್ರಾಪ್ಯ ಯದೃಚ್ಛಯಾದ್ಯ
ಸ್ವಸ್ಥಃ ಶೇತೇ ಮೃತ್ಯುರಸ್ಮಾದಪೈತಿ ॥ ೨೭ ॥

ಸ ತ್ವಂ ಘೋರಾದುಗ್ರಸೇನಾತ್ಮಜಾನ್ನ-
ಸ್ತ್ರಾಹಿ ತ್ರಸ್ತಾನ್ಭೃತ್ಯವಿತ್ರಾಸಹಾಸಿ ।
ರೂಪಂ ಚೇದಂ ಪೌರುಷಂ ಧ್ಯಾನಧಿಷ್ಣ್ಯಂ
ಮಾ ಪ್ರತ್ಯಕ್ಷಂ ಮಾಂಸದೃಶಾಂ ಕೃಷೀಷ್ಠಾಃ ॥ ೨೮ ॥

ದೇವಕೀದೇವಿಯು ಹೇಳುತ್ತಾಳೆ – ಪ್ರಭುವೇ! ನಿನ್ನ ದಿವ್ಯ ರೂಪವನ್ನು ವೇದಗಳೂ, ಯೋಗಿಗಳೂ ಅವ್ಯಕ್ತವೆಂದೂ, ಆದಿ ಕಾರಣವೆಂದೂ, ಬ್ರಹ್ಮವಸ್ತುವೆಂದೂ, ಜ್ಯೋತಿಸ್ವರೂಪ ವೆಂದೂ, ನಿರ್ಗುಣ-ನಿರ್ವಿಕಾರವೆಂದೂ, ಸತ್ತಾಮಾತ್ರವೆಂದೂ, ನಿರ್ವಿಶೇಷ ವೆಂದೂ, ನಿಷ್ಕ್ರಿಯ ಹಾಗೂ ಕೇವಲನೆಂದೂ ಹೊಗಳುತ್ತಿ ರುವರು. ವರೋ ಅಂತಹ ನೀನು ಮನ-ಬುದ್ಧಿ-ಇಂದ್ರಿಯಗಳ ದೀಪ ಪ್ರಾಯನಾದ ಸಾಕ್ಷಾತ್ ವಿಷ್ಣುವೇ ಆಗಿರುವೆ. ॥ ೨೪ ॥ ಬ್ರಹ್ಮನ ಆಯುಷ್ಯದ ಎರಡು ಪರಾರ್ಧಗಳು ಮುಗಿದು ಹೋದಾಗ ಕಾಲಶಕ್ತಿಯ ಪ್ರಭಾವದಿಂದ ಎಲ್ಲ ಲೋಕಗಳು ವಿನಾಶವಾಗಿ ಹೋಗುತ್ತವೆ. ಪಂಚ-ಮಹಾಭೂತಗಳು ಅಹಂಕಾರದಲ್ಲಿ ಅಹಂಕಾರವು ಮಹತ್ತತ್ತ್ವದಲ್ಲಿ, ಮಹತ್ತತ್ತ್ವವು ಪ್ರಕೃತಿಯಲ್ಲಿ, ಪ್ರಕೃತಿಯು ನಿನ್ನಲ್ಲಿ ಲೀನವಾಗಿ ಹೋದನಂತರ ಶೇಷವಾಗಿ ನೀನು ಮಾತ್ರ ಉಳಿಯುವೆ. ಆದುದರಿಂದಲೇ ನಿನ್ನನ್ನು 'ಶೇಷ' ಎಂದೂ ಕರೆಯುತ್ತಾರೆ. ॥ ೨೫ ॥ ಅವ್ಯಕ್ತವಾದ ಪ್ರಕೃತಿಗೆ ಬಂಧುವಾಗಿರ ತಕ್ಕವನೇ! ಪ್ರಭುವೇ! ನಿಮೇಷದಿಂದ ಹಿಡಿದು ಸಂವತ್ಸರ ಪರ್ಯಂತವಾಗಿ ಅಥವಾ ಪರಾರ್ಧಪರ್ಯಂತವಾಗಿ ಹಲವಾರು ವಿಭಾಗಗಳಿಂದ ಕೂಡಿರುವ ಕಾಲದ ಚೇಷ್ಟೆಯಿಂದಲೇ ಈ ಸಮಸ್ತ ವಿಶ್ವವು ಚೇಷ್ಟಿತವಾಗುತ್ತದೆ. ಆದಕ್ಕೆ ಯಾವುದೇ ಎಲ್ಲೆಯು ಇಲ್ಲದೆ ಅದು ನಿನ್ನ ಅಧೀನವಾಗಿದ್ದು ನಿನ್ನ ಲೀಲಾಮಾತ್ರವಾಗಿದೆ. ನೀನು ಸರ್ವಶಕ್ತನೂ ಪರಮಕಲ್ಯಾಣದ ಆಶ್ರಯನಾಗಿರುವೆ. ಅಂತಹ ನಿನಗೆ ನಾನು ಶರಣಾಗತಳಾಗಿದ್ದೇನೆ. ॥ ೨೬ ॥ ಪ್ರಭುವೇ! ಈ ಜೀವನು ಮೃತ್ಯುಗ್ರಸ್ತನಾಗಿದ್ದಾನೆ. ಮೃತ್ಯುವೆಂಬ ಕರಾಳಸರ್ಪಕ್ಕೆ ಹೆದರಿ ಅವನು ಲೋಕ-ಲೋಕಾಂತರದಲ್ಲಿ ಅಲೆಯುತ್ತಿದ್ದಾನೆ. ಆದರೆ ನಿರ್ಭಯವಾಗಿ ಇರಲು ಅವನಿಗೆ ಯಾವ ಸ್ಥಾನವೂ ದೊರೆಯಲಿಲ್ಲ, ಆದರೆ ಅವನಿಗೆ ಇಂದು ಸೌಭಾಗ್ಯವಶದಿಂದ ನಿನ್ನ ಚರಣಾರವಿಂದಗಳ ಶರಣಾಗತಿಯು ಸಿಕ್ಕಿದೆ. ಆದ್ದರಿಂದ ಇನ್ನು ಅವನು ಸ್ವಸ್ಥವಾಗಿ ಮಲಗಿದ್ದಾನೆ. ಮೃತ್ಯುವು ಅವನಿಗೆ ಹೆದರಿ ದೂರ ಸರಿದುಹೋಯಿತು. ॥ ೨೭ ॥ ಪ್ರಭುವೇ! ನೀನು ಭಕ್ತ ಭಯಾಪಹಾರಿಯು. ನಾವಾದರೋ ದುಷ್ಟನಾದ ಈ ಕಂಸನಿಂದ ಭಯಗೊಂಡಿರುವೆವು. ಅವನಿಂದ ನಮ್ಮನ್ನು ನೀನು ರಕ್ಷಿಸು. ನಾಲ್ಕು ಕೈಗಳಿಂದ ಕೂಡಿದ ನಿನ್ನ ಈ ದಿವ್ಯರೂಪವು ಧ್ಯಾನಮಾಡಲು ಯೋಗ್ಯವಾಗಿದೆ. ಇಂತಹ ದಿವ್ಯಸ್ವರೂಪವನ್ನು ಮಾಂಸ-ಮಜ್ಜೆ ಗಳಿಂದ ಕೂಡಿರುವ ಶರೀರಧಾರಿಗಳಾದ ಮನುಷ್ಯರ ಮುಂದೆ ಪ್ರಕಟಿಸಬೇಡ. ॥ ೨೮ ॥

ಜನ್ಮ ತೇ ಮಯ್ಯಸೌ ಪಾಪೋ ಮಾವಿದ್ಯಾನ್ಮಧುಸೂದನ ।
ಸಮುದ್ವಿಜೇ ಭವದ್ಧೇತೋಃ ಕಂಸಾದಹಮಧೀರಧೀಃ ॥ ೨೯ ॥

ಉಪಸಂಹರ ವಿಶ್ವಾತ್ಮನ್ನದೋ ರೂಪಮಲೌಕಿಕಮ್ ।
ಶಂಖಚಕ್ರಗದಾಪದ್ಮಶ್ರಿಯಾ ಜುಷ್ಟಂ ಚತುರ್ಭುಜಮ್ ॥ ೩೦ ॥

ವಿಶ್ವಂ ಯದೇತತ್ಸ್ವತನೌ ನಿಶಾಂತೇ
ಯಥಾವಕಾಶಂ ಪುರುಷಃ ಪರೋ ಭವಾನ್ ।
ಬಿಭರ್ತಿ ಸೋಽಯಂ ಮಮ ಗರ್ಭಗೋಽಭೂ-
ದಹೋ ನೃಲೋಕಸ್ಯ ವಿಡಂಬನಂ ಹಿ ತತ್ ॥ ೩೧ ॥

*ಶ್ರೀಭಗವಾನುವಾಚ*

ತ್ವಮೇವ ಪೂರ್ವಸರ್ಗೇಽಭೂಃ ಪೃಶ್ನಿಃ ಸ್ವಾಯಂಭುವೇ ಸತಿ ।
ತದಾಯಂ ಸುತಪಾ ನಾಮ ಪ್ರಜಾಪತಿರಕಲ್ಮಷಃ ॥ ೩೨ ॥

ಯುವಾಂ ವೈ ಬ್ರಹ್ಮಣಾಽಽದಿಷ್ಟೌ ಪ್ರಜಾಸರ್ಗೇ ಯದಾ ತತಃ ।
ಸನ್ನಿಯಮ್ಯೇಂದ್ರಿಯಗ್ರಾಮಂ ತೇಪಾಥೇ ಪರಮಂ ತಪಃ ॥ ೩೩ ॥

ವರ್ಷವಾತಾತಪಹಿಮಘರ್ಮಕಾಲಗುಣಾನನು ।
ಸಹಮಾನೌ ಶ್ವಾಸರೋಧವಿನಿರ್ಧೂತಮನೋಮಲೌ ॥ ೩೪ ॥

ಶೀರ್ಣಪರ್ಣಾನಿಲಾಹಾರಾವುಪಶಾಂತೇನ ಚೇತಸಾ ।
ಮತ್ತಃ ಕಾಮಾನಭೀಪ್ಸಂತೌ ಮದಾರಾಧನಮೀಹತುಃ ॥ ೩೫ ॥

ಏವಂ ವಾಂ ತಪ್ಯತೋಸ್ತೀವ್ರಂ ತಪಃ ಪರಮದುಷ್ಕರಮ್ ।
ದಿವ್ಯವರ್ಷಸಹಸ್ರಾಣಿ ದ್ವಾದಶೇಯುರ್ಮದಾತ್ಮನೋಃ ॥ ೩೬ ॥

ತದಾ ವಾಂ ಪರಿತುಷ್ಟೋಽಹಮಮುನಾ ವಪುಷಾನಘೇ ।
ತಪಸಾ ಶ್ರದ್ಧಯಾ ನಿತ್ಯಂ ಭಕ್ತ್ಯಾ ಚ ಹೃದಿ ಭಾವಿತಃ ॥ ೩೭ ॥

ಪ್ರಾದುರಾಸಂ ವರದರಾಡ್ಯುವಯೋಃ ಕಾಮದಿತ್ಸಯಾ ।
ವ್ರಿಯತಾಂ ವರ ಇತ್ಯುಕ್ತೇ ಮಾದೃಶೋ ವಾಂ ವೃತಃ ಸುತಃ ॥ ೩೮ ॥

ಅಜುಷ್ಟಗ್ರಾಮ್ಯವಿಷಯಾವನಪತ್ಯೌ ಚ ದಂಪತೀ ।
ನ ವವ್ರಾಥೇಽಪವರ್ಗಂ ಮೇ ಮೋಹಿತೌ ಮಮ ಮಾಯಯಾ ॥ ೩೯ ॥

ಮಧುಸೂದನನೇ! ನೀನು ನನ್ನ ಗರ್ಭದಲ್ಲಿ ಹುಟ್ಟಿರುವೆಯೆಂಬುದು ಈ ಕಂಸನಿಗೆ ತಿಳಿಯದಂತೆ ಮಾಡು. ನನ್ನ ಧೈರ್ಯವು ಕಳೆದುಹೋಗಿದೆ. ನಿನ್ನ ಸಲುವಾಗಿ ಕಂಸನಿಗೆ ನಾನು ಬಹಳ ಹೆದರುತ್ತಿರುವೆನು. ॥ ೨೯ ॥ ವಿಶ್ವಾತ್ಮನೇ! ನಿನ್ನ ಈ ದಿವ್ಯ ರೂಪವು ಅಲೌಕಿಕವಾದುದು. ಶಂಖ-ಚಕ್ರ, ಗದಾ, ಪದ್ಮಗಳ ಶೋಭೆಯಿಂದ ಬೆಳಗುತ್ತಿರುವ ಈ ಚತುರ್ಭುಜರೂಪವನ್ನು ಉಪಸಂಹರಿಸು. ॥ ೩೦ ॥ ಪ್ರಳಯದ ಸಮಯದಲ್ಲಿ ಅಖಂಡ ಬ್ರಹ್ಮಾಂಡವನ್ನು – ಮನುಷ್ಯನು ತನ್ನ ಶರೀರದಲ್ಲಿ ಇರುವ ಛಿದ್ರರಹಿತ ಆಕಾಶವನ್ನು ಸ್ವಾಭಾವಿಕವಾಗಿ ಧರಿಸುವಂತೆಯೇ ನೀನು ನಿನ್ನ ಶರೀರದಲ್ಲಿ ಧರಿಸಿಕೊಳ್ಳುವೆ. ಅಂತಹ ಪರಮಪುರುಷ ಪರಮಾತ್ಮನಾದ ನೀನು ನನ್ನ ಗರ್ಭದಲ್ಲಿ ಹುಟ್ಟಿದೆಯೆಂದರೆ ಇದು ನಿನ್ನ ಅದ್ಭುತವಾದ ಲೀಲೆಯಲ್ಲದೆ ಮತ್ತೇನು? ॥ ೩೧ ॥

**ಶ್ರೀಭಗವಂತನು ಹೇಳಿದನು** – ದೇವೀ! ಸ್ವಾಯಂಭುವ ಮನ್ವಂತರದಲ್ಲಿ ನೀನು ಮೊದಲು ಹುಟ್ಟಿದಾಗ ನಿನ್ನ ಹೆಸರು ಪೃಶ್ನಿ ಎಂದಿತ್ತು. ಈ ವಸುದೇವನು ಸುತಪಾ ಎಂಬ ಹೆಸರಿನಿಂದ ಪ್ರಜಾಪತಿಯಾಗಿದ್ದನು. ನಿಮ್ಮಿಬ್ಬರ ಹೃದಯಗಳೂ ಬಹಳ ಶುದ್ಧವಾಗಿದ್ದವು. ॥ ೩೨ ॥ ಬ್ರಹ್ಮದೇವರು ಸಂತಾನವನ್ನು ಪಡೆದುಕೊಳ್ಳಲು ನಿಮಗೆ ಆಜ್ಞೆಯನ್ನು ಕೊಟ್ಟಾಗ ನೀವಿಬ್ಬರೂ ಇಂದ್ರಿಯಗಳನ್ನು ನಿಯಮನ ಮಾಡಿಕೊಂಡು ಶ್ರೇಷ್ಠವಾದ ತಪಸ್ಸನ್ನು ಮಾಡಿದಿರಿ. ॥ ೩೩ ॥ ನೀವಿಬ್ಬರೂ ಮಳೆ, ಗಾಳಿ, ಬಿಸಿಲು, ಚಳಿ-ಸೆಕೆ ಮುಂತಾದ ಕಾಲದ ವಿಭಿನ್ನ ಗುಣಗಳನ್ನು ಸಹಿಸಿಕೊಂಡು, ಪ್ರಾಣಾಯಾಮದ ಮೂಲಕವಾಗಿ ಮನಸ್ಸಿನ ಕಲ್ಮಷಗಳನ್ನು ಕಳೆದುಕೊಂಡಿರಿ. ॥ ೩೪ ॥ ನೀವುಗಳು ಕೆಲವೊಮ್ಮೆ ಒಣಗಿದ ತರಗೆಲೆಗಳನ್ನು ತಿನ್ನುತ್ತಾ , ಕೆಲವೊಮ್ಮೆ ಗಾಳಿಯನ್ನು ಮಾತ್ರ ಸೇವಿಸುತ್ತಾ ತಪಸ್ಸು ಮಾಡುತ್ತಿದ್ದಿರಿ. ನಿಮ್ಮ ಮನಸ್ಸು ಶಾಂತವಾಗಿತ್ತು. ಹೀಗೆ ನೀವುಗಳು ನನ್ನಿಂದ ಅಭೀಷ್ಟ ವಸ್ತುವನ್ನು ಪಡೆಯುವ ಬಯಕೆಯಿಂದ ನನ್ನನ್ನು ಆರಾಧಿಸಿದಿರಿ. ॥ ೩೫ ॥ ನನ್ನಲ್ಲಿಯೇ ಚಿತ್ತವನ್ನು ನೆಟ್ಟು ಪರಮ ದುಷ್ಕರವಾದ ಘೋರ ತಪಸ್ಸನ್ನು ಮಾಡುತ್ತಾ-ಮಾಡುತ್ತಾ ದೇವತೆಗಳ ಹನ್ನೆರಡು ಸಾವಿರ ವರ್ಷಗಳು ಕಳೆದುಹೋದುವು. ॥ ೩೬ ॥ ಪುಣ್ಯಮಯಿಯಾದ ದೇವಿಯೇ! ಆ ಸಮಯದಲ್ಲಿ ನಾನು ನಿಮ್ಮಿಬ್ಬರ ವಿಷಯದಲ್ಲಿಯೂ ಪ್ರಸನ್ನನಾದೆನು. ನೀವಿಬ್ಬರೂ ತಪಸ್ಸಿನಿಂದಲೂ, ಶ್ರದ್ಧೆಯಿಂದಲೂ, ಭಕ್ತಿಯಿಂದಲೂ ನನ್ನನ್ನೇ ಯಾವಾಗಲೂ ಹೃದಯದಲ್ಲಿ ಭಾವಿಸಿಕೊಂಡಿರುವಿರಿ. ಆ ಸಮಯದಲ್ಲಿ ನಿಮ್ಮ ಅಭಿಲಾಷೆಗಳನ್ನು ಪೂರ್ಣಗೊಳಿಸಲು ವರದರಾಜನಾದ ನಾನು ಇದೇ ರೂಪದಿಂದ ನಿಮಗೆ ಪ್ರತ್ಯಕ್ಷನಾದೆನು. ಬೇಕಾದ ವರವನ್ನು ಕೇಳಿಕೊಳ್ಳಿರೆಂದು ನಾನು ಹೇಳಿದಾಗ ನೀವಿಬ್ಬರೂ ನನ್ನಂತಹ ಪುತ್ರನು ಬೇಕೆಂದು ಹೇಳಿದಿರಿ. ॥ ೩೭-೩೮ ॥ ಆ ಸಮಯದಲ್ಲಿ ನಿಮಗೆ ವಿಷಯಭೋಗಗಳ ಸಂಬಂಧವೇ ಇರಲಿಲ್ಲ, ಸಂತಾನವೂ ಇರಲಿಲ್ಲ. ಆದರೂ ನನ್ನ ಮಾಯೆಯಿಂದ ಮೋಹಿತರಾಗಿ ನೀವಿಬ್ಬರೂ ಮೋಕ್ಷವನ್ನು ಬೇಡಲಿಲ್ಲ. ॥ ೩೯ ॥

ಗತೇ ಮಯಿ ಯುವಾಂ ಲಬ್ಧ್ವಾ ವರಂ ಮತ್ಸದೃಶಂ ಸುತಮ್ ।
ಗ್ರಾಮ್ಯಾನ್ಭೋಗಾನಭುಂಜಾಥಾಂ ಯುವಾಂ ಪ್ರಾಪ್ತಮನೋರಥೌ ॥ ೪೦ ॥

ಅದೃಷ್ಟ್ವಾನ್ಯತಮಂ ಲೋಕೇ ಶೀಲೌದಾರ್ಯಗುಣೈಃ ಸಮಮ್ ।
ಅಹಂ ಸುತೋ ವಾಮಭವಂ ಪೃಶ್ನಿಗರ್ಭ ಇತಿ ಶ್ರುತಃ ॥ ೪೧ ॥

ತಯೋರ್ವಾಂ ಪುನರೇವಾಹಮದಿತ್ಯಾಮಾಸ ಕಶ್ಯಪಾತ್ ।
ಉಪೇಂದ್ರ ಇತಿ ವಿಖ್ಯಾತೋ ವಾಮನತ್ವಾಚ್ಚ ವಾಮನಃ ॥ ೪೨ ॥

ತೃತೀಯೇಽಸ್ಮಿನ್ಭವೇಽಹಂ ವೈ ತೇನೈವ ವಪುಷಾಥ ವಾಮ್ ।
ಜಾತೋ ಭೂಯಸ್ತಯೋರೇವ ಸತ್ಯಂ ಮೇ ವ್ಯಾಹೃತಂ ಸತಿ ॥ ೪೩ ॥

ಏತದ್ವಾಂ ದರ್ಶಿತಂ ರೂಪಂ ಪ್ರಾಗ್ಜನ್ಮಸ್ಮರಣಾಯ ಮೇ ।
ನಾನ್ಯಥಾ ಮದ್ಭವಂ ಜ್ಞಾನಂ ಮರ್ತ್ಯಲಿಂಗೇನ ಜಾಯತೇ ॥ ೪೪ ॥

ಯುವಾಂ ಮಾಂ ಪುತ್ರಭಾವೇನ ಬ್ರಹ್ಮಭಾವೇನ ಚಾಸಕೃತ್ ।
ಚಿಂತಯಂತೌ ಕೃತಸ್ನೇಹೌ ಯಾಸ್ಯೇಥೇ ಮದ್ಗತಿಂ ಪರಾಮ್ ॥ ೪೫ ॥

(ಯದಿ ಕಂಸಾದ್ ಬಿಭೇಷಿತ್ವಂ, ತರ್ಹಿ ಮಾಂ ಗೋಕುಲಂ ನಯ ।
ಮನ್ಮಾಯಾಮಾನಯಾಶುತ್ವಂ ಯಶೋದಾ ಗರ್ಭಸಂಭವಾಮ್ ॥)

ಶ್ರೀಶುಕ ಉವಾಚ

ಇತ್ಯುಕ್ತ್ವಾಽಽಸೀದ್ಧರಿಸ್ತೂಷ್ಣೀಂ ಭಗವಾನಾತ್ಮಮಾಯಯಾ ।
ಪಿತ್ರೋಃ ಸಂಪಶ್ಯತೋಃ ಸದ್ಯೋ ಬಭೂವ ಪ್ರಾಕೃತಃ ಶಿಶುಃ ॥ ೪೬ ॥

ತತಶ್ಚ ಶೌರಿರ್ಭಗವತ್ಪ್ರಚೋದಿತಃ
ಸುತಂ ಸಮಾದಾಯ ಸ ಸೂತಿಕಾಗೃಹಾತ್ ।
ಯದಾ ಬಹಿರ್ಗಂತುಮಿಯೇಷ ತರ್ಹ್ಯಜಾ
ಯಾ ಯೋಗಮಾಯಾಜನಿ ನಂದಜಾಯಯಾ ॥ ೪೭ ॥

ತಯಾ ಹೃತಪ್ರತ್ಯಯಸರ್ವವೃತ್ತಿಷು
ದ್ವಾಃಸ್ಥೇಷು ಪೌರೇಷ್ವಪಿ ಶಾಯಿತೇಷ್ವಥ ।
ದ್ವಾರಸ್ತು ಸರ್ವಾಃ ಪಿಹಿತಾ ದುರತ್ಯಯಾ
ಬೃಹತ್ಕಪಾಟಾಯಸಕೀಲಶೃಂಖಲೈಃ ॥ ೪೮ ॥

ನನ್ನಂತಹ ಪುತ್ರನು ನಿಮಗೆ ದೊರೆಯಲಿ – ಎಂಬ ಅಮೋಘವಾದ ವರವನ್ನಿತ್ತು ನಾನು ಅದೃಶ್ಯನಾದೆನು. ಸಫಲ ಮನೋರಥರಾದ ನೀವಿಬ್ಬರೂ ಪುತ್ರಪ್ರಾಪ್ತಿಗಾಗಿ ವಿಷಯೋಪಭೋಗಗಳನ್ನು ಅನುಭವಿಸಲು ತೊಡಗಿದಿರಿ. ॥ ೪೦ ॥ ಪ್ರಪಂಚದಲ್ಲಿ ಶೀಲ ಸ್ವಭಾವ, ಉದಾರತೆ ಹಾಗೂ ಇತರ ಗುಣಗಳಿಂದ ಕೂಡಿದವನು ನಾನಲ್ಲದೆ ಬೇರೆ ಯಾರೂ ಇಲ್ಲವೆಂದು ತಿಳಿದು ನಾನೇ ನಿಮಗೆ ಪುತ್ರನಾದೆನು. ಆ ಸಮಯದಲ್ಲಿ ನಾನು 'ಪ್ರಶ್ನಿಗರ್ಭ' ಎಂಬ ಹೆಸರಿನಿಂದ ವಿಖ್ಯಾತನಾದೆನು. ॥ ೪೧ ॥ ಮತ್ತೆ ಎರಡನೇ ಜನ್ಮದಲ್ಲಿ ನೀನು ಅದಿತಿಯಾದೆ ಮತ್ತು ವಸುದೇವನು ಕಶ್ಯಪನಾದನು. ಆ ಸಮಯದಲ್ಲೂ ನಾನು ನಿಮಗೆ ಪುತ್ರನಾದೆನು. ಆಗ ನನ್ನ ಹೆಸರು 'ಉಪೇಂದ್ರ' ಎಂದಿತ್ತು. ಗಿಡ್ಡನಾದ್ದರಿಂದ ನನ್ನನ್ನು ವಾಮನನೆಂದೂ ಜನರು ಹೇಳುತ್ತಿದ್ದರು. ॥ ೪೨ ॥ ಸತಿದೇವೀ ದೇವಕಿಯೇ! ನಿನ್ನ ಈ ಮೂರನೇ ಜನ್ಮದಲ್ಲಿಯೂ ನಾನು ಇದೇ ರೂಪದಿಂದ ನಿಮಗೆ ಪುತ್ರನಾಗಿರುವೆನು.* ನನ್ನ ವಾಣಿಯು ಸದಾಕಾಲ ಸತ್ಯವಾಗಿರುತ್ತದೆ. ॥ ೪೩ ॥ ನಿನಗೆ ನನ್ನ ಹಿಂದಿನ ಅವತಾರಗಳ ಸ್ಮರಣೆ ಉಂಟಾಗಲೆಂದೇ ನನ್ನ ರೂಪವನ್ನು ತೋರಿಸಿದ್ದೇನೆ. ನಾನು ಹೀಗೆ ಮಾಡದಿದ್ದರೆ ಕೇವಲ ಮನುಷ್ಯ ಶರೀರದಿಂದಲೇ ನನ್ನ ಅವತಾರದ ಪರಿಚಯವಾಗುತ್ತಿರಲಿಲ್ಲ. ॥ ೪೪ ॥ ನೀವಿಬ್ಬರೂ ನನ್ನ ಕುರಿತು ಪುತ್ರಭಾವ ಹಾಗೂ ನಿರಂತರ ಬ್ರಹ್ಮಭಾವವನ್ನು ತಾಳಿರಿ. ಹೀಗೆ ವಾತ್ಸಲ್ಯ-ಸ್ನೇಹ ಮತ್ತು ಚಿಂತನದಿಂದ ನೀವು ನನ್ನ ಪರಮಪದವಿಯನ್ನು ಸೇರುವಿರಿ. ॥ ೪೫ ॥

(ಎಲೈ ವಸುದೇವನೇ! ನೀನು ಕಂಸನಿಂದ ಭಯಗೊಂಡಿರುವೆಯಾದರೆ ನನ್ನನ್ನು ಗೋಕುಲಕ್ಕೆ ಕೊಂಡುಹೋಗಿ ಅಲ್ಲಿಟ್ಟು ಅಲ್ಲಿ ಯಶೋದೆಯ ಗರ್ಭದಲ್ಲಿ ಉತ್ಪನ್ನಳಾದ ನನ್ನ ಯೋಗಮಾಯೆಯನ್ನು ಇಲ್ಲಿಗೆ ತೆಗೆದುಕೊಂಡು ಬಾ.)

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಭಗವಂತನು ಹೀಗೆ ಹೇಳಿ ಸುಮ್ಮನಾದನು. ಅನಂತರ ಅವನು ತನ್ನ ಯೋಗಮಾಯೆಯಿಂದ ತಂದೆ-ತಾಯಿಗಳು ನೋಡುತ್ತಿರುವಂತೆ ಒಂದು ಸಾಧಾರಣ ಶಿಶುವಿನ ರೂಪವನ್ನು ಧರಿಸಿದನು. ॥ ೪೬ ॥ ಆಗ ವಸುದೇವನು ಭಗವಂತನ ಪ್ರೇರಣೆಯಿಂದ ತನ್ನ ಪುತ್ರನನ್ನು ಸೂತಿಕಾಗೃಹದಿಂದ ಹೊರಗೆ ಕೊಂಡುಹೋಗಲು ಇಚ್ಛಿಸಿದನು. ಇದೇ ಸಮಯದಲ್ಲಿ ಭಗವಂತನ ಶಕ್ತಿಯಾದ್ದರಿಂದ ಅವನಂತೆಯೇ ಜನ್ಮರಹಿತಳಾದ ಯೋಗಮಾಯೆಯು ನಂದಮಹಾರಾಜನ ಪತ್ನಿಯಾದ ಯಶೋದೆಯ ಗರ್ಭದಿಂದ ಹುಟ್ಟಿದ್ದಳು. ॥ ೪೭ ॥ ಈ ಯೋಗಮಾಯೆಯೇ ದ್ವಾರಪಾಲರ ಮತ್ತು ಸಮಸ್ತ ನಗರವಾಸಿಗಳ ಇಂದ್ರಿಯವೃತ್ತಿಗಳನ್ನು ಅಪಹರಿಸಿಬಿಟ್ಟಳು. ಇದರಿಂದಾಗಿ ಅವರೆಲ್ಲರೂ ನಿಶ್ಚೇಷ್ಟಿತರಾಗಿ ಮಲಗಿಬಿಟ್ಟರು. ಕಾರಾಗೃಹದ ಎಲ್ಲ ಬಾಗಿಲುಗಳು ಮುಚ್ಚಿದ್ದು ಭಾರೀ ಕಬ್ಬಿಣದ ಬಾಗಿಲುಗಳು

* 'ನನ್ನಂತಹ ಪುತ್ರನು ನಿಮಗಾಗುವನು' ಎಂದು ನಾನು ವರವನ್ನು ಕೊಟ್ಟಿದ್ದೆನು. ಆದರೆ ಇದನ್ನು ನಾನು ಪೂರ್ಣಗೊಳಿಸಲಾರದೆ ಹೋದೆನು. ಏಕೆಂದರೆ, ನನ್ನಂಥವನು ಬೇರೆ ಯಾರೂ ಇಲ್ಲ, ಯಾರಿಗಾದರೂ ಯಾವುದಾದರೂ ವಸ್ತುವನ್ನು ಕೊಡುತ್ತೇನೆ ಎಂದು ಪ್ರತಿಜ್ಞೆಮಾಡಿ ಅದನ್ನು ನಡೆಸಲಾಗದಿದ್ದರೆ ಅದಕ್ಕೆ ಮೂರುಪಟ್ಟು ವಸ್ತುವನ್ನು ಕೊಡಬೇಕು. ನನ್ನಂತಹ ಪದಾರ್ಥವೇ ಇಲ್ಲದ್ದರಿಂದ ನಾನೇ ಮೂರುಬಾರಿ ಇವರಿಗೆ ಪುತ್ರನಾಗುವೆನು ಎಂದು ಭಗವಾನ್ ಕೃಷ್ಣನು ಯೋಚಿಸಿದನು.

ತಾಃ ಕೃಷ್ಣವಾಹೇ ವಸುದೇವ ಆಗತೇ
ಸ್ವಯಂ ವ್ಯವರ್ಯಂತ ಯಥಾ ತಮೋ ರವೇಃ ।
ವವರ್ಷ ಪರ್ಜನ್ಯ ಉಪಾಂಶುಗರ್ಜಿತಃ
ಶೇಷೋಽನ್ವಗಾದ್ವಾರಿ ನಿವಾರಯನ್ಫಣೈಃ ॥ ೪೯ ॥

ಸರಪಳಿಗಳಿಂದ ಬಂಧಿಸಲ್ಪಟ್ಟು ಬೀಗಗಳು ಜಡಿಯಲ್ಪಟ್ಟಿದ್ದವು. ಅವುಗಳಿಂದ ಹೊರಗೆ ಹೋಗುವುದು ಬಹಳ ಕಷ್ಟವಾಗಿತ್ತು. ಆದರೆ ವಸುದೇವನು ಭಗವಾನ್ ಶ್ರೀಕೃಷ್ಣನನ್ನು ಎತ್ತಿಕೊಂಡಾಗ ಸೂರ್ಯೋದಯವಾಗುತ್ತಲೇ ಅಂಧಕಾರವು ದೂರವಾಗುವಂತೆ ವಸುದೇವನ ಕೈಕೋಳಗಳು ಮತ್ತು ಬಾಗಿಲುಗಳು ತಾನಾಗಿಯೇ ತೆರೆದುಕೊಂಡವು.* ವಸುದೇವನು ಬಾಲಮುಕುಂದನನ್ನು ಎತ್ತಿಕೊಂಡು ಹೊರಗೆ ಹೊರಟನು. ಅದೇ ಸಮಯದಲ್ಲಿ ಮೋಡಗಳು ಮೆಲ್ಲ-ಮೆಲ್ಲನೆ ಗುಡುಗುತ್ತಾ ಮಳೆಗರೆಯುತ್ತಿದ್ದವು. ಆದಿಶೇಷನು ತನ್ನ ಸಾವಿರ ಹೆಡೆಗಳಿಂದ ಭಗವಂತನ ಮೇಲೆ ನೀರು ಬೀಳದಂತೆ ಕೊಡೆಯಂತಾಗಿ ವಸುದೇವನ ಹಿಂದೆಯೇ ಹಿಂಬಾಲಿಸಿದನು. ॥ ೪೮-೪೯ ॥

ಮಘೋನಿ ವರ್ಷತ್ಯಸಕೃದ್ಯಮಾನುಜಾ
ಗಂಭೀರತೋಯೌಘಜವೋರ್ಮಿಫೇನಿಲಾ ।
ಭಯಾನಕಾವರ್ತಶತಾಕುಲಾ ನದೀ
ಮಾರ್ಗಂ ದದೌ ಸಿಂಧುರಿವ ಶ್ರಿಯಃ ಪತೇಃ ॥ ೫೦ ॥

ಸತತವಾಗಿ ಮಳೆಯು ಬೀಳುತ್ತಿದ್ದುದರಿಂದ ಯಮುನಾನದಿಯು ತುಂಬಿ ಹರಿಯುತ್ತಿದ್ದಿತು. ಆಳವಾದ ನೀರಿನ ಪ್ರವಾಹದ ವೇಗದಿಂದ ಅಲೆಗಳೆದ್ದು ನದಿಯಲ್ಲಿ ಅಗಾಧವಾದ ನೊರೆಯುಂಟಾಗಿತ್ತು. ನೂರಾರು ಸುಳಿಗಳಿಂದ ಕೂಡಿತ್ತು. ಸೀತಾಪತಿಯಾದ ಶ್ರೀರಾಮಚಂದ್ರನಿಗೆ ಸಮುದ್ರವು ದಾರಿಯನ್ನು ಕಲ್ಪಿಸಿಕೊಟ್ಟಂತೆಯೇ ಯಮುನೆಯು ಭಗವಂತನಿಗೆ ದಾರಿಮಾಡಿ ಕೊಟ್ಟಳು. ॥ ೫೦ ॥

ನಂದವ್ರಜಂ ಶೌರಿರುಪೇತ್ಯ ತತ್ರ ತಾನ್
ಗೋಪಾನ್ಪ್ರಸುಪ್ತಾನುಪಲಭ್ಯ ನಿದ್ರಯಾ ।
ಸುತಂ ಯಶೋದಾಶಯನೇ ನಿಧಾಯ ತತ್
ಸುತಾಮುಪಾದಾಯ ಪುನರ್ಗೃಹಾನಗಾತ್ ॥ ೫೧ ॥

ವಸುದೇವನು ನಂದರಾಜನ ಗೋಕುಲಕ್ಕೆ ಹೋದಾಗ ಎಲ್ಲಾ ಗೋಪರು ಗಾಢವಾಗಿ ಮಲಗಿರುವುದನ್ನು ನೋಡಿದನು. ಅವನು ತನ್ನ ಪುತ್ರನನ್ನು ಯಶೋದೆಯ ಪಕ್ಕದಲ್ಲಿ ಮಲಗಿಸಿ, ಅವಳ ನವಜಾತ ಹೆಣ್ಣುಮಗುವನ್ನು ತೆಗೆದುಕೊಂಡು ಕಾರಾಗೃಹಕ್ಕೆ ಮರಳಿದನು. ॥ ೫೧ ॥

ದೇವಕ್ಯಾಃ ಶಯನೇ ನ್ಯಸ್ಯ ವಸುದೇವೋಽಥ ದಾರಿಕಾಮ್ ।
ಪ್ರತಿಮುಚ್ಯ ಪದೋರ್ಲೋಹಮಾಸ್ತೇ ಪೂರ್ವವದಾವೃತಃ
॥ ೫೨ ॥

ಕಾರಾಗೃಹಕ್ಕೆ ಬಂದ ವಸುದೇವನು ಆ ಹೆಣ್ಣು ಮಗುವನ್ನು ದೇವಕಿಯ ಬಳಿಯಲ್ಲಿ ಮಲಗಿಸಿದನು. ಆಗ ಅವನ ಕೈಕಾಲುಗಳಿಗೆ ಸಂಕೋಲೆಗಳು ಬಂಧಿಸಲ್ಪಟ್ಟು ಮೊದಲಿದ್ದಂತೆ ಬಂಧಿತನಾದನು. ॥ ೫೨ ॥

ಯಶೋದಾ ನಂದಪತ್ನೀ ಚ ಜಾತಂ ಪರಮಬುಧ್ಯತ ।
ನ ತಲ್ಲಿಂಗಂ ಪರಿಶ್ರಾಂತಾ ನಿದ್ರಯಾಪಗತಸ್ಮೃತಿಃ
॥ ೫೩ ॥

ಅತ್ತಲಾಗಿ ಗೋಕುಲದಲ್ಲಿ ನಂದಪತ್ನೀ ಯಶೋದೆಗೆ ತನಗೆ ಮಗು ಹುಟ್ಟಿದುದು ಹಾಗೂ ಅದು ಗಂಡೋ, ಹೆಣ್ಣೋ ಎಂಬುದು ಅರಿವಾಗಲೇ ಇಲ್ಲ, ಏಕೆಂದರೆ ಮೊದಲಿಗೆ ಅವಳು ಬಹಳ ಬಳಲಿದ್ದಳು, ಇನ್ನೊಂದು ಯೋಗಮಾಯೆಯು ಆಕೆಯನ್ನು ಅಚೇತನಳನ್ನಾಗಿಸಿದ್ದಳು.** ॥ ೫೩ ॥

ಮೂರನೆಯ ಅಧ್ಯಾಯವು ಮುಗಿಯಿತು. ॥ ೩ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ಕೃಷ್ಣಜನ್ಮನಿ ತೃತೀಯೋಽಧ್ಯಾಯಃ ॥ ೩ ॥

---

* ಯಾರ ನಾಮ-ಶ್ರವಣಮಾತ್ರದಿಂದಲೇ ಅಸಂಖ್ಯ ಜನ್ಮಾರ್ಜಿತ ಪ್ರಾರಬ್ಧ ಬಂಧನವು ಕಡಿದುಹೋಗುವುದೋ ಅಂತಹ ಪ್ರಭುವನ್ನೇ ಎತ್ತಿಕೊಂಡ ವಸುದೇವನ ಬೇಡಿಗಳು ಕಳಚಿಬೀಳುವುದರಲ್ಲಿ ಆಶ್ಚರ್ಯವೇನಿದೆ ?

** ಭಗವಾನ್ ಶ್ರೀಕೃಷ್ಣನು ಈ ಪ್ರಸಂಗದಲ್ಲಿ – ನನ್ನನ್ನು ಪ್ರೇಮಪೂರ್ವಕವಾಗಿ ಹೃದಯದಲ್ಲಿ ಧರಿಸುವವನ ಬಂಧನವು ಬಿಡುಗಡೆ ಹೊಂದುವುದು, ಕಾರಾಗೃಹದಿಂದ ಬಿಡುಗಡೆ ಹೊಂದುತ್ತಾನೆ, ದೊಡ್ಡ-ದೊಡ್ಡ ಬಾಗಿಲುಗಳು ತೆರೆಯುತ್ತವೆ, ಕಾವಲುಗಾರರಿಗೆ ಅರಿವಾಗುವುದೇ ಇಲ್ಲ, ಭವನದಿಯು ಬತ್ತಿಹೋಗುವುದು. ಗೋಕುಲದ (ಇಂದ್ರಿಯ ಸಮುದಾಯ) ವೃತ್ತಿಗಳು ಲುಪ್ತವಾಗುತ್ತವೆ. ಮಾಯೆಯು ಕೈವಶಳಾಗುತ್ತಾಳೆಂಬುದನ್ನು ತೋರಿಸಿಕೊಟ್ಟಿರುವನು.

# ನಾಲ್ಕನೆಯ ಅಧ್ಯಾಯ

## ಕಂಸನ ಕೈಯಿಂದ ತಪ್ಪಿಸಿಕೊಂಡ ಯೋಗಮಾಯೆಯು ಆಕಾಶಕ್ಕೆ ಹಾರಿ ಭವಿಷ್ಯವನ್ನು ನುಡಿದುದು

*ಶ್ರೀಶುಕ ಉವಾಚ*

**ಬಹಿರಂತಃ ಪುರದ್ವಾರಃ ಸರ್ವಾಃ ಪೂರ್ವವದಾವೃತಾಃ ।**
**ತತೋ ಬಾಲಧ್ವನಿಂ ಶ್ರುತ್ವಾ ಗೃಹಪಾಲಾಃ ಸಮುತ್ಥಿತಾಃ ॥ ೧ ॥**

**ತೇ ತು ತೂರ್ಣಮುಪವ್ರಜ್ಯ ದೇವಕ್ಯಾ ಗರ್ಭಜನ್ಮ ತತ್ ।**
**ಆಚಖ್ಯುರ್ಭೋಜರಾಜಾಯ ಯದುದ್ವಿಗ್ನಃ ಪ್ರತೀಕ್ಷತೇ ॥ ೨ ॥**

**ಸ ತಲ್ಪಾತ್ತೂರ್ಣಮುತ್ಥಾಯ ಕಾಲೋಽಯಮಿತಿ ವಿಹ್ವಲಃ ।**
**ಸೂತೀಗೃಹಮಗಾತ್ತೂರ್ಣಂ ಪ್ರಸ್ಖಲನ್ಮುಕ್ತಮೂರ್ಧಜಃ ॥ ೩ ॥**

**ತಮಾಹ ಭ್ರಾತರಂ ದೇವೀ ಕೃಪಣಾ ಕರುಣಂ ಸತೀ ।**
**ಸ್ನುಷೇಯಂ ತವ ಕಲ್ಯಾಣ ಸ್ತ್ರಿಯಂ ಮಾ ಹಂತುಮರ್ಹಸಿ ॥ ೪ ॥**

**ಬಹವೋ ಹಿಂಸಿತಾ ಭ್ರಾತಃ ಶಿಶವಃ ಪಾವಕೋಪಮಾಃ ।**
**ತ್ವಯಾ ದೈವನಿಸೃಷ್ಟೇನ ಪುತ್ರಿಕೈಕಾ ಪ್ರದೀಯತಾಮ್ ॥ ೫ ॥**

**ನನ್ವಹಂ ತೇ ಹ್ಯವರಜಾ ದೀನಾ ಹತಸುತಾ ಪ್ರಭೋ ।**
**ದಾತುಮರ್ಹಸಿ ಮಂದಾಯಾ ಅಂಗೇಮಾಂ ಚರಮಾಂ ಪ್ರಜಾಮ್ ॥ ೬ ॥**

*ಶ್ರೀಶುಕ ಉವಾಚ*

**ಉಪಗುಹ್ಯಾತ್ಮಜಾಮೇವಂ ರುದತ್ಯಾ ದೀನದೀನವತ್ ।**
**ಯಾಚಿತಸ್ತಾಂ ವಿನಿರ್ಭರ್ತ್ಸ್ಯ ಹಸ್ತಾದಾಚಿಚ್ಛಿದೇ ಖಲಃ ॥ ೭ ॥**

**ತಾಂ ಗೃಹೀತ್ವಾ ಚರಣಯೋರ್ಜಾತಮಾತ್ರಾಂ ಸ್ವಸುಃ ಸುತಾಮ್ ।**
**ಅಪೋಥಯಚ್ಛಿಲಾಪೃಷ್ಠೇ ಸ್ವಾರ್ಥೋನ್ಮೂಲಿತಸೌಹೃದಃ ॥ ೮ ॥**

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ವಸುದೇವನು ಸೆರೆಮನೆಗೆ ಹಿಂದಿರುಗಿದೊಡನೆಯೇ ಎಲ್ಲ ಹೊರಗಿನ ಮತ್ತು ಒಳಗಿನ ಬಾಗಿಲುಗಳು ಹಿಂದಿನಂತೆಯೇ ಮುಚ್ಚಲ್ಪಟ್ಟವು. ದೇವಕಿಯ ಪಕ್ಕದಲ್ಲಿದ್ದ ನವಜಾತ ಶಿಶುವು ಅಳತೊಡಗಿತು. ಆ ಧ್ವನಿಯನ್ನು ಕೇಳುತ್ತಲೇ ದ್ವಾರಪಾಲರು ಎಚ್ಚರಗೊಂಡರು. ॥ ೧ ॥ ಅವರು ಒಡನೆಯೇ ಭೋಜರಾಜನಾದ ಕಂಸನ ಬಳಿಗೆ ಹೋಗಿ ದೇವಕಿಗೆ ಎಂಟನೆಯ ಶಿಶುವು ಹುಟ್ಟಿರುವ ಸಮಾಚಾರವನ್ನು ತಿಳಿಸಿದರು. ಕಂಸನಾದರೋ ಮಾತನ್ನು ಹೇಳುತ್ತಲೇ ಝುಗ್ಗನೆ ಮೇಲೆದ್ದು ಶೀಘ್ರಾತಿಶೀಘ್ರವಾಗಿ ಸೂತಿಕಾಗೃಹದ ಕಡೆಗೆ ಧಾವಿಸಿದನು. ಈ ಬಾರಿಯಲ್ಲಾದರೋ ನನ್ನ ಮೃತ್ಯುವೇ ಹುಟ್ಟಿರುವನು ಎಂದು ಯೋಚಿಸುತ್ತಾ ಕಳವಳಗೊಂಡಿದ್ದನು. ಇದರಿಂದಾಗಿ ತನ್ನ ತಲೆಗೂದಲು ಬಿಚ್ಚಿಕೊಂಡಿದ್ದರೂ ಅವನ ಗಮನಕ್ಕೆ ಬರಲೇ ಇಲ್ಲ, ದಾರಿಯಲ್ಲಿ ಕೆಲವೆಡೆ ಎಡವುತ್ತಾ ಓಡುತ್ತಿದ್ದನು. ॥ ೩ ॥ ಸೆರೆಮನೆಯನ್ನು ಪ್ರವೇಶಿಸುತ್ತಲೇ ಬಹಳ ದುಃಖದಿಂದಲೂ, ಕರುಣೆಯಿಂದಲೂ ದೇವಕೀದೇವಿಯು ಕಂಸನಲ್ಲಿ ಹೇಳಿದಳು – ನನ್ನ ಹಿತೈಷಿಯಾದ ಅಣ್ಣನೇ! ಈ ಹೆಣ್ಣಾದರೋ ನಿನಗೆ ಸೊಸೆಯಾಗಿದ್ದಾಳೆ. ಹೆಣ್ಣುಶಿಶುವು ಹುಟ್ಟಿದೆ. ಆದುದರಿಂದ ಸ್ತ್ರೀಯನ್ನು ಕೊಲ್ಲುವುದು ನಿನಗೆ ಯೋಗ್ಯವಾದುದಲ್ಲ. ॥ ೪ ॥ ಅಣ್ಣಾ! ನೀನು ದೈವವಶಾತ್ ಅಗ್ನಿಯಂತೆ ತೇಜಸ್ವಿಗಳಾದ ನನ್ನ ಹಲವಾರು ಬಾಲಕರನ್ನು ಕೊಂದಿರುವೆ. ಈಗ ಕೇವಲ ಈ ಒಂದು ಕನ್ಯೆಮಾತ್ರ ಉಳಿದಿರುವಳು. ಇದನ್ನಾದರೂ ಕೊಲ್ಲದೆ ನನಗೆ ಕೊಟ್ಟುಬಿಡು. ॥ ೫ ॥ ಅಣ್ಣಾ! ನಾನು ನಿನ್ನ ತಂಗಿಯಲ್ಲವೇ ? ನನ್ನ ಅನೇಕ ಮಕ್ಕಳು ಸತ್ತು ಹೋಗಿರುವರು. ಅದಕ್ಕಾಗಿ ನಾನು ಅತ್ಯಂತ ದೀನಳಾಗಿರುವೆನು. ದೈನ್ಯದಿಂದ ಬೇಡಿಕೊಳ್ಳುವೆನು. ಮಂದಭಾಗ್ಯಳಾದ ನನಗೆ ಈ ಕಡೆಯ ಹೆಣ್ಣು ಶಿಶುವನ್ನಾದರೂ ದಯಪಾಲಿಸು. ॥ ೬ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಹೆಣ್ಣುಮಗುವನ್ನು ತನ್ನ ಮಡಿಲಲ್ಲಿ ಅಡಗಿಸಿಕೊಂಡು ದೇವಕಿಯು ಅತ್ಯಂತ ದೈನ್ಯದಿಂದ ಅಳುತ್ತಾ ಬೇಡಿಕೊಂಡಳು. ಆದರೆ ಕಂಸನು ಬಹಳ ದುಷ್ಟನಾಗಿದ್ದನು. ಅವನು ದೇವಕಿಯನ್ನು ಗದರಿಸುತ್ತಾ ಅವಳ ಕೈಯಲ್ಲಿದ್ದ ಆ ಕನ್ಯೆಯನ್ನು ಕಸಿದುಕೊಂಡನು. ॥ ೭ ॥ ಕಂಸನು ಮಹಾಸ್ವಾರ್ಥಿಯಾಗಿದ್ದು ಅವನ ಮನಸ್ಸಿನಲ್ಲಿ ಸೌಹಾರ್ದ್ರವೆಂಬುದು ಲವಲೇಶವೂ ಇರಲಿಲ್ಲ. ಆಗತಾನೇ ಹುಟ್ಟಿದ ತನ್ನ ಸೊಸೆಯಾದ ಆ ಹೆಣ್ಣುಮಗುವಿನ ಕಾಲನ್ನು ಹಿಡಿದು ಒಂದು ಬಂಡೆಯ ಮೇಲೆ ಅಪ್ಪಳಿಸಿದನು. ॥ ೮ ॥

ಸಾ ತದ್ಧಸ್ತಾತ್ಸಮುತ್ಪತ್ಯ ಸದ್ಯೋ ದೇವ್ಯಂಬರಂ ಗತಾ ।
ಅದೃಶ್ಯತಾನುಜಾ ವಿಷ್ಣೋಃ ಸಾಯುಧಾಷ್ಟಮಹಾಭುಜಾ
॥ ೯ ॥

ದಿವ್ಯಸ್ರಗಂಬರಾಲೇಪರತ್ನಾಭರಣಭೂಷಿತಾ ।
ಧನುಃಶೂಲೇಷುಚರ್ಮಾಸಿಶಂಖಚಕ್ರಗದಾಧರಾ
॥ ೧೦ ॥

ಸಿದ್ಧಚಾರಣಗಂಧರ್ವೈರಪ್ಸರಃ ಕಿನ್ನರೋರಗೈಃ ।
ಉಪಾಹೃತೋರುಬಲಿಭಿಃ ಸ್ತೂಯಮಾನೇದಮಬ್ರವೀತ್
॥ ೧೧ ॥

ಕಿಂ ಮಯಾ ಹತಯಾ ಮಂದ ಜಾತಃ ಖಲು ತವಾಂತಕೃತ್ ।
ಯತ್ರ ಕ್ವವಾ ಪೂರ್ವಶತ್ರುರ್ಮಾ ಹಿಂಸೀಃ ಕೃಪಣಾನ್ವೃಥಾ
॥ ೧೨ ॥

ಇತಿ ಪ್ರಭಾಷ್ಯ ತಂ ದೇವೀ ಮಾಯಾ ಭಗವತೀ ಭುವಿ ।
ಬಹುನಾಮನಿಕೇತೇಷು ಬಹುನಾಮಾ ಬಭೂವ ಹ
॥ ೧೩ ॥

ತಯಾಭಿಹಿತಮಾಕರ್ಣ್ಯ ಕಂಸಃ ಪರಮವಿಸ್ಮಿತಃ ।
ದೇವಕೀಂ ವಸುದೇವಂ ಚ ವಿಮುಚ್ಯ ಪ್ರಶ್ರಿತೋಽಬ್ರವೀತ್
॥ ೧೪ ॥

ಅಹೋ ಭಗಿನ್ಯಹೋ ಭಾಮ ಮಯಾ ವಾಂ ಬತ ಪಾಪ್ಮನಾ ।
ಪುರುಷಾದ ಇವಾಪತ್ಯಂ ಬಹವೋ ಹಿಂಸಿತಾಃ ಸುತಾಃ
॥ ೧೫ ॥

ಸ ತ್ವಹಂ ತ್ಯಕ್ತಕಾರುಣ್ಯಸ್ತ್ಯಕ್ತಜ್ಞಾತಿಸುಹೃತ್ಖಲಃ ।
ಕಾಂಲ್ಲೋಕಾನ್ವೈ ಗಮಿಷ್ಯಾಮಿ ಬ್ರಹ್ಮಹೇವ ಮೃತಃ ಶ್ವಸನ್
॥ ೧೬ ॥

ದೈವಮಪ್ಯನೃತಂ ವಕ್ತಿ ನ ಮರ್ತ್ಯಾ ಏವ ಕೇವಲಮ್ ।
ಯದ್ವಿಶ್ರಂಭಾದಹಂ ಪಾಪಃ ಸ್ವಸುರ್ನಿಹತವಾನ್ ಶಿಶೂನ್
॥ ೧೭ ॥

ಮಾ ಶೋಚತಂ ಮಹಾಭಾಗಾವಾತ್ಮಜಾನ್ಸ್ವಕೃತಂಭುಜಃ ।
ಜಂತವೋ ನ ಸದೈಕತ್ರ ದೈವಾಧೀನಾಸ್ತದಾಸತೇ
॥ ೧೮ ॥

ಆದರೆ ಶ್ರೀಕೃಷ್ಣನ ತಂಗಿಯಾದ ಆ ಹೆಣ್ಣು ಸಾಮಾನ್ಯ ಮಗುವಾಗಿರದೆ ದೇವಿಯೇ ಆಗಿದ್ದಳು. ಅವನ ಕೈಯಿಂದ ಜಾರಿ ಒಡನೆಯೇ ಆಕಾಶಕ್ಕೆ ನೆಗೆದು ಅಷ್ಟಭುಜೆಯಾಗಿ ಎಂಟು ಕೈಗಳಲ್ಲಿಯೂ ಆಯುಧಗಳನ್ನು ಧರಿಸಿ ಆಗಸದಲ್ಲಿ ನಿಂತಿದ್ದಳು. ॥ ೯ ॥ ಆಕೆಯು ದಿವ್ಯ ಮಾಲೆಗಳಿಂದಲೂ, ವಸ್ತ್ರ, ಚಂದನ, ಮಣಿಮಯ ಆಭೂಷಣಗಳಿಂದ ವಿಭೂಷಿತಳಾಗಿದ್ದಳು. ಅವಳ ಕೈಗಳಲ್ಲಿ ಧನುಷ್ಯ, ತ್ರಿಶೂಲ, ಬಾಣ, ಗುರಾಣಿ, ಖಡ್ಗ, ಶಂಖ, ಚಕ್ರ, ಗದೆ ಇವೇ ಎಂಟು ಆಯುಧಗಳಿದ್ದವು. ॥ ೧೦ ॥ ಸಿದ್ಧರು, ಚಾರಣರು, ಗಂಧರ್ವರು, ಅಪ್ಸರೆಯರು, ಕಿನ್ನರರು, ನಾಗಗಳೂ ಅನೇಕ ಉಪಾಯನಗಳನ್ನು ಆ ದೇವಿಗೆ ಅರ್ಪಿಸಿ ಸ್ತೋತ್ರ ಮಾಡುತ್ತಿದ್ದರು. ಆ ಸಮಯದಲ್ಲಿ ವಿಷ್ಣುಮಾಯಾದೇವಿಯು ಕಂಸನಿಗೆ ಹೇಳಿದಳು – ॥ ೧೧ ॥ ಎಲವೋ ಮೂರ್ಖನೇ ! ನನ್ನನ್ನು ಕೊಲ್ಲುವುದರಿಂದ ನಿನಗೇನು ಸಿಕ್ಕೀತು ? ನಿನ್ನ ಪೂರ್ವಜನ್ಮ ಶತ್ರುವು ನಿನ್ನನ್ನು ಕೊಲ್ಲಲಿಕ್ಕಾಗಿ ಎಲ್ಲಿಯೋ ಒಂದೆಡೆ ಹುಟ್ಟಿ ಬೆಳೆಯುತ್ತಿದ್ದಾನೆ. ಈಗ ನೀನು ವ್ಯರ್ಥವಾಗಿ ನಿರ್ದೋಷಿಗಳಾದ ಹಸುಳೆಗಳನ್ನು ಕೊಲ್ಲಬೇಡ. ॥ ೧೨ ॥ ಕಂಸನಿಗೆ ಹೀಗೆ ಹೇಳಿ ಭಗವತಿ ಯೋಗಮಾಯೆಯು ಅಲ್ಲೇ ಅಂತರ್ಧಾನಗೊಂಡಳು ಹಾಗೂ ಭೂಮಂಡಲದಲ್ಲಿ ಅನೇಕ ಸ್ಥಾನಗಳಲ್ಲಿ ಬೇರೆ-ಬೇರೆ ಹೆಸರುಗಳಿಂದ ಪ್ರಸಿದ್ಧಳಾದಳು. ॥ ೧೩ ॥

ದೇವಿಯ ಈ ಮಾತನ್ನು ಕೇಳಿ ಕಂಸನಿಗೆ ಮಹದಾಶ್ಚರ್ಯ ವಾಯಿತು. ಆಗಲೇ ಅವನು ದೇವಕಿ ಮತ್ತು ವಸುದೇವ ಇವರನ್ನು ಸೆರೆಮನೆಯಿಂದ ಬಿಡುಗಡೆಮಾಡಿ ವಿನಯಪೂರ್ವಕವಾಗಿ ಹೀಗೆಂದನು – ॥ ೧೪ ॥ ನನ್ನ ಪ್ರಿಯತಂಗಿಯೇ ಮತ್ತು ಭಾವನೇ ! ಅಯ್ಯೋ! ನಾನು ಮಹಾಪಾಪಿಯಾಗಿದ್ದೇನೆ. ರಾಕ್ಷಸನು ತನ್ನ ಮಕ್ಕಳನ್ನೇ ಕೊಲ್ಲುವಂತೆ ನಾನು ನಿನ್ನ ಅನೇಕ ಮಕ್ಕಳನ್ನು ಕೊಂದು ಹಾಕಿದೆನು. ಇದರಿಂದ ನನಗೆ ಬಹಳ ದುಃಖವಾಗಿದೆ.* ॥ ೧೫ ॥ ಕರುಣೆ ಎಂಬುದಕ್ಕೆ ನನ್ನ ಹೃದಯದಲ್ಲಿ ಸ್ಥಾನವೇ ಇಲ್ಲದಾಗಿತ್ತು. ನಾನು ನನ್ನ ಬಂಧು-ಬಾಂಧವರನ್ನು, ಹಿತೈಷಿಗಳನ್ನೂ ತ್ಯಜಿಸಿಬಿಟ್ಟೆ. ನನಗೆ ಯಾವ ನರಕವು ಕಾದಿದೆಯೋ ತಿಳಿಯದು. ನಿಜವಾಗಿ ಯಾದರೋ ನಾನು ಬ್ರಹ್ಮಘಾತಿಯಂತೆ ಜೀವಿಸಿದ್ದರೂ ಸತ್ತಂತೆಯೇ ಸರಿ. ॥ ೧೬ ॥ ಕೇವಲ ಮನುಷ್ಯನೇ ಸುಳ್ಳುಹೇಳುವುದಲ್ಲ, ವಿಧಾತನೂ ಸುಳ್ಳುಹೇಳುತ್ತಿರುವನಲ್ಲ! ಅದನ್ನು ನಂಬಿ ನಾನು ನನ್ನ ತಂಗಿಯ ಮಕ್ಕಳನ್ನು ಕೊಂದುಹಾಕಿದೆನಲ್ಲ! ಅಯ್ಯೋ! ನಾನು ಎಂತಹ ಪಾಪಿಯಾಗಿರುವೆನು ! ॥ ೧೭ ॥ ನೀವಿಬ್ಬರೂ ಮಹಾತ್ಮ ರಾಗಿರುವಿರಿ. ನಿಮ್ಮ ಪುತ್ರರಿಗಾಗಿ ಶೋಕಿಸಬೇಡಿರಿ. ಅವರಿ ಗಾದರೋ ತಮ್ಮ ಕರ್ಮದ ಫಲವೇ ದೊರೆತಿದೆ. ಎಲ್ಲ ಪ್ರಾಣಿಗಳು ಪ್ರಾರಬ್ಧಕ್ಕೆ ಅಧೀನರು. ಅದರಿಂದ ಅವರು ಯಾವಾಗಲೂ ಜೊತೆಯಾಗಿ ಇರಲಾರರು. ॥ ೧೮ ॥

---

ಯಾರ ಗರ್ಭದಲ್ಲಿ ಭಗವಂತನು ವಾಸಿಸಿದನೋ, ಯಾರಿಗೆ ಭಗವದ್ದರ್ಶನವಾಗಿದೆಯೋ ಅಂತಹ ವಸುದೇವ-ದೇವಕಿಯರ ದರ್ಶನದ ಫಲವಾಗಿಯೇ ಕಂಸನ ಹೃದಯದಲ್ಲಿ ವಿನಯ, ವಿಚಾರ, ಉದಾರತೆ ಮುಂತಾದ ಸದ್ಗುಣಗಳ ಉದಯವಾಯಿತು. ಆದರೆ ಅವರ ಮುಂದಿರುವ ತನಕ ಈ ಸದ್ಗುಣಗಳು ಇದ್ದವು. ದುಷ್ಟಮಂತ್ರಿಗಳ ಮಧ್ಯದಲ್ಲಿ ಹೋಗುತ್ತಲೇ ಪುನಃ ಹೇಗಿದ್ದನೋ ಹಾಗೆಯೇ ಆದನು.

ಭುವಿ ಭೌಮಾನಿ ಭೂತಾನಿ ಯಥಾ ಯಾಂತ್ಯಪಯಾಂತಿ ಚ ।
ನಾಯಮಾತ್ಮಾ ತಥೈತೇಷು ವಿಪರ್ಯೇತಿ ಯಥೈವ ಭೂಃ ॥ ೧೯ ॥

ಯಥಾನೇವಂವಿದೋ ಭೇದೋ ಯತ ಆತ್ಮವಿಪರ್ಯಯಃ ।
ದೇಹಯೋಗವಿಯೋಗೌ ಚ ಸಂಸೃತಿರ್ನ ನಿವರ್ತತೇ ॥ ೨೦ ॥

ತಸ್ಮಾದ್ಭದ್ರೇ ಸ್ವತನಯಾನ್ಮಯಾ ವ್ಯಾಪಾದಿತಾನಪಿ ।
ಮಾನುಶೋಚ ಯತಃ ಸರ್ವಃ ಸ್ವಕೃತಂ ವಿಂದತೇಽವಶಃ ॥ ೨೧ ॥

ಯಾವದ್ಧತೋಽಸ್ಮಿ ಹಂತಾಸ್ಮೀತ್ಯಾತ್ಮಾನಂ ಮನ್ಯತೇಽಸ್ವದೃಕ್ ।
ತಾವತ್ತದಭಿಮಾನ್ಯಜ್ಞೋ ಬಾಧ್ಯಬಾಧಕತಾಮಿಯಾತ್ ॥ ೨೨ ॥

ಕ್ಷಮಧ್ವಂ ಮಮ ದೌರಾತ್ಮ್ಯಂ ಸಾಧವೋ ದೀನವತ್ಸಲಾಃ ।
ಇತ್ಯುಕ್ತ್ವಾಶ್ರುಮುಖಃ ಪಾದೌ ಶ್ಯಾಲಃ ಸ್ವಸ್ರೋರಥಾಗ್ರಹೀತ್ ॥ ೨೩ ॥

ಮೋಚಯಾಮಾಸ ನಿಗಡಾದ್ವಿಶ್ರಬ್ಧಃ ಕನ್ಯಕಾಗಿರಾ ।
ದೇವಕೀಂ ವಸುದೇವಂ ಚ ದರ್ಶಯನ್ನಾತ್ಮಸೌಹೃದಮ್ ॥ ೨೪ ॥

ಭ್ರಾತುಃ ಸಮನುತಪ್ತಸ್ಯ ಕ್ಷಾಂತ್ವಾ ರೋಷಂಚ ದೇವಕೀ ।
ವ್ಯಸೃಜದ್ವಸುದೇವಶ್ಚ ಪ್ರಹಸ್ಯ ತಮುವಾಚ ಹ ॥ ೨೫ ॥

ಏವಮೇತನ್ಮಹಾಭಾಗ ಯಥಾ ವದಸಿ ದೇಹಿನಾಮ್ ।
ಅಜ್ಞಾನಪ್ರಭವಾಹಂಧೀಃ ಸ್ವಪರೇತಿ ಭಿದಾ ಯತಃ ॥ ೨೬ ॥

ಶೋಕಹರ್ಷಭಯದ್ವೇಷಲೋಭಮೋಹಮದಾನ್ವಿತಾಃ ।
ಮಿಥೋ ಘ್ನಂತಂ ನ ಪಶ್ಯಂತಿ ಭಾವೈರ್ಭಾವಂ ಪೃಥಗ್ದೃಶಃ ॥ ೨೭ ॥

ಮಣ್ಣಿನಿಂದ ಹಲವಾರು ಬಗೆಯ ಗಡಿಗೆಯೇ ಮುಂತಾದ ಪದಾರ್ಥಗಳು ಆಗುತ್ತವೆ, ನಾಶವಾಗುತ್ತವೆ. ಆದರೆ ಮಣ್ಣಿನಲ್ಲಿ ಯಾವುದೇ ವ್ಯತ್ಯಾಸವಾಗುವುದಿಲ್ಲ, ಹಾಗೆಯೇ ಶರೀರಗಳು ಹುಟ್ಟುತ್ತವೆ, ಸಾಯುತ್ತವೆ. ಆದರೆ ಆತ್ಮನಲ್ಲಿ ಇದರ ಯಾವ ಪರಿಣಾಮವೂ ಉಂಟಾಗುವುದಿಲ್ಲ. ॥ ೧೯ ॥ ಈ ತತ್ತ್ವವನ್ನು ತಿಳಿಯದ ಜನರು ಈ ಅನಾತ್ಮ ಶರೀರವನ್ನೇ ಆತ್ಮಾ ಎಂದು ತಿಳಿದು ಬಿಡುತ್ತಾರೆ. ಇದೇ ವಿಪರೀತ ಬುದ್ಧಿ ಅಥವಾ ಅಜ್ಞಾನವಾಗಿದೆ. ಇದರಿಂದಲೇ ಹುಟ್ಟು-ಸಾವುಗಳಾಗುತ್ತಾ ಇರುತ್ತವೆ. ಈ ಅಜ್ಞಾನವು ಅಳಿಯುವವರೆಗೆ ಸುಖ-ದುಃಖರೂಪವಾದ ಸಂಸಾರ ದಿಂದ ಬಿಡುಗಡೆಯಾಗುವುದಿಲ್ಲ. ॥ ೨೦ ॥ ನನ್ನ ಪ್ರಿಯ ಸೋದರೀ! ನಾನು ನಿನ್ನ ಪುತ್ರರನ್ನು ಕೊಂದುಹಾಕಿದ್ದರೂ ನೀನು ಅವರಿಗಾಗಿ ಶೋಕಿಸಬಾರದು. ಏಕೆಂದರೆ, ಎಲ್ಲ ಪ್ರಾಣಿಗಳೂ ಪರವಶರಾಗಿ ತಮ್ಮ ಕರ್ಮಗಳ ಫಲವನ್ನು ಭೋಗಿಸಬೇಕಾಗು ತ್ತದೆ. ॥ ೨೧ ॥ ತನ್ನ ಸ್ವರೂಪವನ್ನು ತಿಳಿದುಕೊಳ್ಳದ ಕಾರಣ ಜೀವನು 'ನಾನು ಕೊಲ್ಲುವವನು ಮತ್ತು ಕೊಲ್ಲಲ್ಪಡುವವನು' ಎಂದು ತಿಳಿಯುತ್ತಿರುವವರೆಗೆ ಶರೀರದ ಹುಟ್ಟು-ಸಾವುಗಳ ಅಭಿಮಾನವನ್ನಿಟ್ಟುಕೊಂಡ ಅಜ್ಞಾನಿಯು ಬಾಧ್ಯ-ಬಾಧಕ ಭಾವ ವನ್ನು ಪಡೆಯುತ್ತಾನೆ. ಅರ್ಥಾತ್ – ಅವನು ಇತರರಿಗೆ ದುಃಖ ಕೊಡುತ್ತಾನೆ ಮತ್ತು ದುಃಖವನ್ನು ಅನುಭವಿಸುತ್ತಾನೆ. ॥ ೨೨ ॥ ನನ್ನ ಈ ದುಷ್ಟತೆಯನ್ನು ನೀವಿಬ್ಬರೂ ಕ್ಷಮಿಸಿಬಿಡಿರಿ. ಏಕೆಂದರೆ, ನೀವುಗಳು ಸಾಧುಸ್ವಭಾವದವರಾಗಿದ್ದು, ದೀನರ ರಕ್ಷಕರಾಗಿದ್ದೀರಿ. ಹೀಗೆ ಹೇಳಿ ಕಂಸನು ತನ್ನ ತಂಗಿಯಾದ ದೇವಕಿಯ ಮತ್ತು ವಸುದೇವನ ಚರಣಗಳನ್ನು ಭದ್ರವಾಗಿ ಹಿಡಿದುಕೊಂಡು, ಕಣ್ಣೀರು ಸುರಿಸಿದನು. ॥ ೨೩ ॥ ಅನಂತರ ಅವನು ಯೋಗಮಾಯೆಯ ಮಾತಿನಮೇಲೆ ವಿಶ್ವಾಸವಿಟ್ಟು ವಸುದೇವ-ದೇವಕಿಯರನ್ನು ಬಂಧನಮುಕ್ತರಾಗಿಸಿ ಅನೇಕ ರೀತಿಯಿಂದ ಅವರ ಕುರಿತು ತನ್ನ ಪ್ರೀತಿಯನ್ನು ಪ್ರಕಟಪಡಿಸತೊಡಗಿದನು. ॥ ೨೪ ॥ ಅಣ್ಣನಾದ ಕಂಸನು ಪಶ್ಚಾತ್ತಾಪಪಡುತ್ತಿರುವುದನ್ನು ನೋಡಿದ ದೇವಕಿಯು ಅವನನ್ನು ಕ್ಷಮಿಸಿಬಿಟ್ಟಳು. ಆಕೆಯು ಅವನ ಮೊದಲಿನ ಅಪರಾಧ ಗಳನ್ನು ಮರೆತುಬಿಟ್ಟಳು. ವಸುದೇವನು ನಗುತ್ತಾ ಕಂಸನಲ್ಲಿ ಹೇಳಿದನು –॥ ೨೫ ॥ ಮಹಾಭಾಗನಾದ ಕಂಸನೇ! ನೀನು ಹೇಳಿರುವುದು ಸರಿಯಾಗಿಯೇ ಇದೆ. ಜೀವನು ಅಜ್ಞಾನದಿಂದಲೇ ಶರೀರಾದಿಗಳನ್ನೂ 'ನಾನೆಂದು' ತಿಳಿದು ಕೊಂಡಿರುವನು. ಇದ ರಿಂದಲೇ ಸ್ವ-ಪರ ಭೇದಗಳುಂಟಾಗುತ್ತವೆ. ॥ ೨೬ ॥ ಈ ಭೇದ ದೃಷ್ಟಿ ಉಂಟಾದಾಗಲೇ ಜೀವರು ಶೋಕ, ಹರ್ಷ, ಭಯ, ದ್ವೇಷ, ಲೋಭ, ಮೋಹ, ಮದ ಇವುಗಳಿಂದ ಕುರುಡಾಗಿ ಹೋಗುತ್ತಾರೆ. ಹೀಗಾದಾಗ ಎಲ್ಲರ ಪ್ರೇರಕನಾದ ಭಗವಂತನೇ ಒಂದು ಭಾವದಿಂದ ಇನ್ನೊಂದನ್ನೂ, ಒಂದು ವಸ್ತುವಿನಿಂದ ಇನ್ನೊಂದು ವಸ್ತುವನ್ನು ನಾಶಮಾಡಿಸುತ್ತಾ ಇದ್ದಾನೆ ಎಂಬುದು ಅವರು ಅರಿಯುವುದೇ ಇಲ್ಲ. ॥ ೨೭ ॥

*ಶ್ರೀಶುಕ ಉವಾಚ*

ಕಂಸ ಏವಂ ಪ್ರಸನ್ನಾಭ್ಯಾಂ ವಿಶುದ್ಧಂ ಪ್ರತಿಭಾಷಿತಃ ।
ದೇವಕೀವಸುದೇವಾಭ್ಯಾಮನುಜ್ಞಾತೋಽವಿಶದ್ಗೃಹಮ್ ॥ ೨೮ ॥

ತಸ್ಯಾಂ ರಾತ್ರ್ಯಾಂ ವ್ಯತೀತಾಯಾಂ ಕಂಸ ಆಹೂಯ ಮಂತ್ರಿಣಃ ।
ತೇಭ್ಯ ಆಚಷ್ಟ ತತ್ಸರ್ವಂ ಯದುಕ್ತಂ ಯೋಗಮಾಯಯಾ ॥ ೨೯ ॥

ಆಕರ್ಣ್ಯ ಭರ್ತುರ್ಗದಿತಂ ತಮೂಚುರ್ದೇವಶತ್ರವಃ ।
ದೇವಾನ್ಪ್ರತಿ ಕೃತಾಮರ್ಷಾ ದೈತೇಯಾ ನಾತಿಕೋವಿದಾಃ ॥ ೩೦ ॥

ಏವಂ ಚೇತ್ತರ್ಹಿ ಭೋಜೇಂದ್ರ ಪುರಗ್ರಾಮವ್ರಜಾದಿಷು ।
ಅನಿರ್ದಶಾನ್ನಿರ್ದಶಾಂಶ್ಚ ಹನಿಷ್ಯಾಮೋಽದ್ಯ ವೈ ಶಿಶೂನ್ ॥ ೩೧ ॥

ಕಿಮುದ್ಯಮೈಃ ಕರಿಷ್ಯಂತಿ ದೇವಾಃ ಸಮರಭೀರವಃ ।
ನಿತ್ಯಮುದ್ವಿಗ್ನಮನಸೋ ಜ್ಯಾಘೋಷೈರ್ಧನುಷಸ್ತವ ॥ ೩೨ ॥

ಅಸ್ಯತಸ್ತೇ ಶರವ್ರಾತೈರ್ಹನ್ಯಮಾನಾಃ ಸಮಂತತಃ ।
ಜಿಜೀವಿಷವ ಉತ್ಸೃಜ್ಯ ಪಲಾಯನಪರಾ ಯಯುಃ ॥ ೩೩ ॥

ಕೇಚಿತ್ಪ್ರಾಂಜಲಯೋ ದೀನಾ ನ್ಯಸ್ತಶಸ್ತ್ರಾ ದಿವೌಕಸಃ ।
ಮುಕ್ತಕಚ್ಛಶಿಖಾಃ ಕೇಚಿದ್ಭೀತಾಃ ಸ್ಮ ಇತಿ ವಾದಿನಃ ॥ ೩೪ ॥

ನ ತ್ವಂ ವಿಸ್ಮೃತಶಸ್ತ್ರಾಸ್ತ್ರಾನ್ವಿರಥಾನ್ಭಯಸಂವೃತಾನ್ ।
ಹಂಸ್ಯನ್ಯಾಸಕ್ತವಿಮುಖಾನ್ಭಗ್ನಚಾಪಾನಯುಧ್ಯತಃ ॥ ೩೫ ॥

ಕಿಂ ಕ್ಷೇಮಶೂರೈರ್ವಿಬುಧೈರಸಂಯುಗವಿಕತ್ಥನೈಃ ।
ರಹೋಜುಷಾ ಕಿಂ ಹರಿಣಾ ಶಂಭುನಾ ವಾ ವನೌಕಸಾ ।
ಕಿಮಿಂದ್ರೇಣಾಲ್ಪವೀರ್ಯೇಣ ಬ್ರಹ್ಮಣಾ ವಾ ತಪಸ್ಯತಾ ॥ ೩೬ ॥

ತಥಾಪಿ ದೇವಾಃ ಸಾಪತ್ನ್ಯಾನ್ನೋಪೇಕ್ಷ್ಯಾ ಇತಿ ಮನ್ಮಹೇ ।
ತತಸ್ತನ್ಮೂಲಖನನೇ ನಿಯುಂಕ್ಷ್ವಾಸ್ಮಾನನುವ್ರತಾನ್ ॥ ೩೭ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ವಸುದೇವ-ದೇವಕಿಯರು ಹೀಗೆ ಪ್ರಸನ್ನರಾಗಿ ನಿಷ್ಕಪಟಭಾವದಿಂದ ಕಂಸನೊಂದಿಗೆ ಮಾತನಾಡಿ, ಅವನಿಂದ ಬೀಳ್ಕೊಂಡು ಅವರು ತಮ್ಮ ಅರಮನೆಗೆ ಹೊರಟುಹೋದರು. ॥ ೨೮ ॥ ಆ ರಾತ್ರಿಯು ಕಳೆಯುತ್ತಲೇ ಕಂಸನು ತನ್ನ ಮಂತ್ರಿಗಳನ್ನು ಕರೆಸಿ ಯೋಗಮಾಯೆಯು ಹೇಳಿದುದೆಲ್ಲವನ್ನು ಅವರಿಗೆ ತಿಳಿಸಿದನು. ॥ ೨೯ ॥ ಕಂಸನ ಮಂತ್ರಿಗಳು ಪೂರ್ಣವಾಗಿ ನೀತಿ ನಿಪುಣರಾಗಿರಲಿಲ್ಲ, ದೈತ್ಯರಾದ್ದರಿಂದ ಸ್ವಭಾವತಃ ಅವರು ದೇವತೆಗಳ ಕುರಿತು ಶತ್ರುಭಾವವನ್ನು ಇರಿಸಿಕೊಂಡಿದ್ದರು. ಒಡೆಯನಾದ ಕಂಸನ ಮಾತನ್ನು ಕೇಳಿ ಅವರು ದೇವತೆಗಳ ಬಗೆಗೆ ಇನ್ನೂ ರೊಚ್ಚಿಗೆದ್ದು ಕಂಸನಲ್ಲಿ ಹೇಳತೊಡಗಿದರು. ॥ ೩೦ ॥ ಭೋಜರಾಜನೇ! ನಿನ್ನ ಶತ್ರುವು ಎಲ್ಲಿಯೋ ಹುಟ್ಟಿ ಬೆಳೆಯುತ್ತಿರುವನೆಂದಾದರೆ ನಾವು ಈಗಲೇ ದೊಡ್ಡ-ದೊಡ್ಡ ಪಟ್ಟಣಗಳಲ್ಲಿ ಸಣ್ಣ-ಪುಟ್ಟ ಗ್ರಾಮಗಳಲ್ಲಿ, ಗೊಲ್ಲರ ದೊಡ್ಡಿಗಳಲ್ಲಿ ಮತ್ತು ಇತರ ಸ್ಥಾನಗಳಲ್ಲಿ ಎಷ್ಟು ಮಕ್ಕಳು ಹುಟ್ಟಿರುವರೋ, ಅವು ಹತ್ತುದಿನಗಳಿಗಿಂತ ಹೆಚ್ಚಿನವರಿರಲಿ, ಕಡಿಮೆಯವರಾಗಿರಲಿ ಎಲ್ಲರನ್ನೂ ಇಂದೇ ಕೊಂದುಬಿಡುವೆವು. ॥ ೩೧ ॥ ಯುದ್ಧಭೀರುಗಳಾದ ದೇವತೆಗಳು ಯುದ್ಧೋದ್ಯೋಗಗೈದು ಏನು ತಾನೇ ಮಾಡಿಯಾರು? ಅವರಾದರೋ ನಿನ್ನ ಧನುಷ್ಟಂಕಾರ ಕೇಳಿಯೇ ಸದಾಕಾಲ ಹೆದರಿರುತ್ತಾರೆ. ॥ ೩೨ ॥ ರಣರಂಗದಲ್ಲಿ ನೀನು ಏಟಿನ ಮೇಲೆ ಏಟು ಕೊಡಲು ತೊಡಗಿದಾಗ, ಬಾಣಗಳ ಮಳೆಯಿಂದ ಗಾಯಗೊಂಡು ತಮ್ಮ ಪ್ರಾಣಗಳನ್ನು ರಕ್ಷಿಸಿಕೊಳ್ಳಲಿಕ್ಕಾಗಿ ಸಮರಾಂಗಣವನ್ನು ಬಿಟ್ಟು ದೇವತೆಗಳು ಪಲಾಯನ-ಪರಾಯಣರಾಗಿ ಕಂಡ-ಕಂಡಲ್ಲಿಗೆ ಓಡಿಹೋಗುತ್ತಾರೆ. ॥ ೩೩ ॥ ಕೆಲವು ದೇವತೆಗಳಾದರೋ ತಮ್ಮ ಅಸ್ತ್ರ-ಶಸ್ತ್ರಗಳನ್ನು ಚೆಲ್ಲಿ, ಕೈಜೋಡಿಸಿಕೊಂಡು ನಿನ್ನ ಮುಂದೆ ದೈನ್ಯವನ್ನು ಪ್ರಕಟಿಸುವರು. ಇನ್ನೂ ಕೆಲವರು ತಮ್ಮ ಜುಟ್ಟನ್ನೂ, ಕಚ್ಚೆಯನ್ನೂ ಬಿಚ್ಚಿಕೊಂಡು ನಿನಗೆ ಶರಣಾಗಿ 'ನಾವು ಭಯಗೊಂಡಿದ್ದೇವೆ, ನಮ್ಮನ್ನು ರಕ್ಷಿಸು' ಎಂದು ಹೇಳುತ್ತಾರೆ. ॥ ೩೪ ॥ ಅಸ್ತ್ರ-ಶಸ್ತ್ರಗಳನ್ನು ಮರೆತವರನ್ನು, ರಥ ಮುರಿದು ಹೋದವರನ್ನು, ಹೆದರಿದವರನ್ನು, ಯುದ್ಧವನ್ನು ಬಿಟ್ಟು ಅನ್ಯಮನಸ್ಕರಾದವರನ್ನು, ಧನುಸ್ಸು ತುಂಡಾದವರನ್ನು, ಯುದ್ಧದಿಂದ ಪರಾಙ್ಮುಖರಾದವರನ್ನು ಇಂತಹ ಶತ್ರುಗಳನ್ನು ಕೂಡ ನೀನು ಕೊಲ್ಲುವುದಿಲ್ಲ. ॥ ೩೫ ॥ ಯಾವುದೇ ಜಗಳ-ಕಾಳಗವಿಲ್ಲದ ಕಡೆಯಲ್ಲೇ ಆ ದೇವತೆಗಳು ವೀರರೆನಿಸಿಕೊಳ್ಳುವರು. ರಣಭೂಮಿಯಿಂದ ಹೊರಗೆ ನಾವೇ ವೀರರೆಂದು ಬಡಾಯಿ ಕೊಚ್ಚಿಕೊಳ್ಳುವರು. ಅವರಿಂದಾಗಲೀ, ಏಕಾಂತವಾಸೀ ವಿಷ್ಣುವಿನಿಂದಾಗಲೀ, ವನವಾಸೀ ಶಂಕರನಿಂದಾಗಲೀ, ಅಲ್ಪವೀರ್ಯನಾದ ಇಂದ್ರನಿಂದಾಗಲೀ, ತಪಸ್ವೀ ಬ್ರಹ್ಮನಿಂದಾಗಲೀ ನಮಗೆ ಯಾವ ಭಯವು ಇರಬಲ್ಲದು? ॥ ೩೬ ॥ ಹೀಗಿದ್ದರೂ ದೇವತೆಗಳನ್ನು ಉಪೇಕ್ಷಿಸಬಾರದು ಎಂಬುದೇ ನಮ್ಮ ಅಭಿಪ್ರಾಯವು. ಏಕೆಂದರೆ, ಅವರು ಶತ್ರುಗಳೇ ಅಲ್ಲವೇ? ಅದಕ್ಕಾಗಿ ಅವರ ಬೇರನ್ನೇ ಕಿತ್ತೆಸೆಯಲು ನಮ್ಮಂತಹ ವಿಶ್ವಾಸಪಾತ್ರ ಸೇವಕರನ್ನು ನಿಯುಕ್ತಗೊಳಿಸು. ॥ ೩೭ ॥

ಯಥಾಽಽಮಯೋಽಙ್ಗೇ ಸಮುಪೇಕ್ಷಿತೋ ನೃಭಿ-
ರ್ನ ಶಕ್ಯತೇ ರೂಢಪದಶ್ಚಿಕಿತ್ಸಿತುಮ್ ।
ಯಥೇಂದ್ರಿಯಗ್ರಾಮ ಉಪೇಕ್ಷಿತಸ್ತಥಾ
ರಿಪುರ್ಮಹಾನ್ಬದ್ಧಬಲೋ ನ ಚಾಲ್ಯತೇ ॥ ೩೮ ॥

ಮೂಲಂ ಹಿ ವಿಷ್ಣುರ್ದೇವಾನಾಂ ಯತ್ರ ಧರ್ಮಃ ಸನಾತನಃ ।
ತಸ್ಯ ಚ ಬ್ರಹ್ಮ ಗೋವಿಪ್ರಾಸ್ತಪೋಯಜ್ಞಾಃ ಸದಕ್ಷಿಣಾಃ ॥ ೩೯ ॥

ತಸ್ಮಾತ್ಸರ್ವಾತ್ಮನಾ ರಾಜನ್ ಬ್ರಾಹ್ಮಣಾನ್ ಬ್ರಹ್ಮವಾದಿನಃ ।
ತಪಸ್ವಿನೋ ಯಜ್ಞಶೀಲಾನ್ಗಾಶ್ಚ ಹನ್ಮೋ ಹವಿರ್ದುಘಾಃ ॥ ೪೦ ॥

ವಿಪ್ರಾ ಗಾವಶ್ಚ ವೇದಾಶ್ಚ ತಪಃ ಸತ್ಯಂ ದಮಃ ಶಮಃ ।
ಶ್ರದ್ಧಾ ದಯಾ ತಿತಿಕ್ಷಾ ಚ ಕ್ರತವಶ್ಚ ಹರೇಸ್ತನೂಃ ॥ ೪೧ ॥

ಸ ಹಿ ಸರ್ವಸುರಾಧ್ಯಕ್ಷೋ ಹ್ಯಸುರದ್ವಿಡ್ಗುಹಾಶಯಃ ।
ತನ್ಮೂಲಾ ದೇವತಾಃ ಸರ್ವಾಃ ಸೇಶ್ವರಾಃ ಸಚತುರ್ಮುಖಾಃ ।
ಅಯಂ ವೈ ತದ್ವಧೋಪಾಯೋ ಯದೃಷೀಣಾಂ ವಿಹಿಂಸನಮ್ ॥ ೪೨ ॥

ಶ್ರೀಶುಕ ಉವಾಚ

ಏವಂ ದುರ್ಮಂತ್ರಿಭಿಃ ಕಂಸಃ ಸಹ ಸಮ್ಮಂತ್ರ್ಯ ದುರ್ಮತಿಃ ।
ಬ್ರಹ್ಮಹಿಂಸಾಂ ಹಿತಂ ಮೇನೇ ಕಾಲಪಾಶಾವೃತೋಽಸುರಃ ॥ ೪೩ ॥

ಸಂದಿಶ್ಯ ಸಾಧುಲೋಕಸ್ಯ ಕದನೇ ಕದನಪ್ರಿಯಾನ್ ।
ಕಾಮರೂಪಧರಾಂದಿಕ್ಷು ದಾನವಾನ್ಗೃಹಮಾವಿಶತ್ ॥ ೪೪ ॥

ತೇ ವೈ ರಜಃಪ್ರಕೃತಯಸ್ತಮಸಾ ಮೂಢಚೇತಸಃ ।
ಸತಾಂ ವಿದ್ವೇಷಮಾಚೇರುರಾರಾದಾಗತಮೃತ್ಯವಃ ॥ ೪೫ ॥

ಆಯುಃ ಶ್ರಿಯಂ ಯಶೋ ಧರ್ಮಂ ಲೋಕಾನಾಶಿಷ ಏವ ಚ ।
ಹಂತಿ ಶ್ರೇಯಾಂಸಿ ಸರ್ವಾಣಿ ಪುಂಸೋ ಮಹದತಿಕ್ರಮಃ ॥ ೪೬ ॥

ಮನುಷ್ಯನ ಶರೀರದಲ್ಲಿ ರೋಗವು ಉಂಟಾದಾಗ, ಅದನ್ನು ಉಪೇಕ್ಷೆಮಾಡಿ ಔಷಧೋಪಚಾರವನ್ನು ಮಾಡದಿದ್ದಾಗ ರೋಗವು ಬೇರೂರುವುದು. ಮತ್ತೆ ಅದು ಗುಣಪಡಿಸಲು ಅಸಾಧ್ಯವಾಗುವಂತೆಯೇ ಅಥವಾ ಇಂದ್ರಿಯಗಳನ್ನು ಉಪೇಕ್ಷಿಸಿದಾಗ ಅವುಗಳ ದಮನ ಅಸಂಭವವಾಗುವಂತೆಯೇ, ಮೊದಲಿಗೆ ಶತ್ರುವನ್ನು ಉಪೇಕ್ಷೆಮಾಡಿ, ಅವನು ತಳವೂರಿದರೆ ಮತ್ತೆ ಅವನನ್ನು ಸೋಲಿಸುವುದು ಕಷ್ಟವಾಗುತ್ತದೆ. ॥ ೩೮ ॥ ದೇವತೆಗಳ ಮೂಲ (ಬೇರು)ವು ಮಹಾವಿಷ್ಣುವೇ ಆಗಿದ್ದು, ಅವನು ಸನಾತನಧರ್ಮವಿರುವಲ್ಲಿ ಇರುತ್ತಾನೆ. ಸನಾತನಧರ್ಮದ ಬೇರು-ವೇದಗಳು, ಗೋವುಗಳು, ಬ್ರಾಹ್ಮಣರು, ತಪಸ್ಸು ಮತ್ತು ದಕ್ಷಿಣೆಯಿಂದ ಕೂಡಿದ ಯಜ್ಞಗಳಾಗಿವೆ. ॥ ೩೯ ॥ ಅದಕ್ಕಾಗಿ ಭೋಜರಾಜನೇ! ವೇದವಾದಿಗಳಾದ ಬ್ರಾಹ್ಮಣರನ್ನು, ತಪಸ್ವಿಗಳನ್ನು, ಯಾಜ್ಞಿಕರನ್ನು ಮತ್ತು ಯಜ್ಞಕ್ಕಾಗಿ ಘೃತವೇ ಮುಂತಾದ ಹವಿಷ್ಯ ಪದಾರ್ಥಗಳನ್ನು ಕೊಡುವ ಗೋವುಗಳನ್ನು ನಾವುಗಳು ಸಮೂಲವಾಗಿ ನಾಶಮಾಡಿಬಿಡುತ್ತೇವೆ. ॥ ೪೦ ॥ ಬ್ರಾಹ್ಮಣರು, ಗೋವುಗಳು, ವೇದಗಳು, ತಪಸ್ಸು, ಸತ್ಯ, ಇಂದ್ರಿಯದಮನ ಮನೋನಿಗ್ರಹ, ಶ್ರದ್ಧೆ, ದಯೆ, ತಿತಿಕ್ಷೆ ಮತ್ತು ಯಜ್ಞಗಳು ಇವು ವಿಷ್ಣುವಿನ ಶರೀರವಾಗಿವೆ. ॥ ೪೧ ॥ ಆ ಮಹಾವಿಷ್ಣುವೇ ಎಲ್ಲ ದೇವತೆಗಳಿಗೆ ಒಡೆಯನಾಗಿದ್ದು ಅಸುರರ ಮುಖ್ಯ ದ್ವೇಷಿಯಾಗಿರುವನು. ಆದರೆ ಅವನು ಯಾವುದೋ ಗುಹೆಯಲ್ಲಿ ಅಡಗಿರುತ್ತಾನೆ. ಮಹಾದೇವನಿಗೆ, ಚತುರ್ಮುಖಬ್ರಹ್ಮನಿಗೆ, ಇಂದ್ರಾದಿ ಸಕಲದೇವತೆಗಳಿಗೆ ಅವನೇ ಮೂಲನಾಗಿರುವನು. ಋಷಿಗಳನ್ನು ಕೊಂದುಹಾಕುವುದೇ ಅವನನ್ನು ಕೊಲ್ಲುವ ಉಪಾಯವಾಗಿದೆ. ॥ ೪೨ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ಮೊದಲಿಗೆ ಕಂಸನ ಬುದ್ಧಿಯು ಕೆಟ್ಟುಹೋಗಿತ್ತು. ಮತ್ತೆ ಅವನಿಂದಲೂ ದುಷ್ಟರಾದ ಮಂತ್ರಿಗಳು ಅವನಿಗೆ ದೊರಕಿದ್ದರು. ಈ ಪ್ರಕಾರವಾಗಿ ಅವರಿಂದ ಸಲಹೆ ಪಡೆದು ಕಾಲಪಾಶದಲ್ಲಿ ಸಿಕ್ಕಿಕೊಂಡಿರುವ ಅಸುರನಾದ ಕಂಸನು ಬ್ರಾಹ್ಮಣರನ್ನು ಕೊಲ್ಲುವುದೇ ಸರಿ ಎಂದು ತಿಳಿದನು. ॥ ೪೩ ॥ ಅವನು ಹಿಂಸಾಪ್ರಿಯರಾದ ರಾಕ್ಷಸರಿಗೆ ಸಂತ-ಸತ್ಪುರುಷರನ್ನು ಹಿಂಸಿಸಲು ಆದೇಶಿಸಿದನು. ಕಾಮರೂಪಿಗಳಾದ ಆ ಅಸುರರನ್ನು ಎಲ್ಲ ಕಡೆಗೆ ಕಳಿಸಿಕೊಟ್ಟು, ಕಂಸನು ತನ್ನರಮನೆಯನ್ನು ಪ್ರವೇಶಿಸಿದನು. ॥ ೪೪ ॥ ರಜೋಗುಣ ಪ್ರಕೃತಿಯುಳ್ಳ ಆ ಅಸುರರು ತಮೋಗುಣದಿಂದ ಅವರ ಚಿತ್ತವು ಉಚಿತ-ಅನುಚಿತ ವಿವೇಕದಿಂದ ರಹಿತವಾಗಿತ್ತು. ಅವರ ತಲೆಯಮೇಲೆ ಮೃತ್ಯುವು ಕುಣಿಯುತ್ತಿತ್ತು. ಈ ಕಾರಣದಿಂದಲೇ ಅವರು ಸಂತರನ್ನು ದ್ವೇಷಿಸಿದರು. ॥ ೪೫ ॥ ಪರೀಕ್ಷಿತನೇ! ಸಂತ-ಸತ್ಪುರುಷರನ್ನು ಅನಾದರ ಮಾಡುವವರ ಆ ಕುಕರ್ಮವೇ ಅವರ ಆಯುಸ್ಸು, ಲಕ್ಷ್ಮೀ, ಕೀರ್ತಿ, ಧರ್ಮ, ಲೋಕ-ಪರಲೋಕ, ವಿಷಯಭೋಗ ಹಾಗೂ ಎಲ್ಲ ಕಲ್ಯಾಣ ಸಾಧನೆಗಳನ್ನು ನಾಶಮಾಡಿಬಿಡುತ್ತದೆ. ॥ ೪೬ ॥

*ನಾಲ್ಕನೆಯ ಅಧ್ಯಾಯವು ಮುಗಿಯಿತು. ॥ ೪ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮಸ್ಕಂಧೇ ಪೂರ್ವಾರ್ಧೇ ಚತುರ್ಥೋಽಧ್ಯಾಯಃ ॥ ೪ ॥

# ಐದನೆಯ ಅಧ್ಯಾಯ

## ಗೋಕುಲದಲ್ಲಿ ಭಗವಂತನ ಜನ್ಮೋತ್ಸವ

*ಶ್ರೀಶುಕ ಉವಾಚ*

ನಂದಸ್ತ್ವಾತ್ಮಜ ಉತ್ಪನ್ನೇ ಜಾತಾಹ್ಲಾದೋ ಮಹಾಮನಾಃ ।
ಆಹೂಯ ವಿಪ್ರಾನ್ವೇದಜ್ಞಾನ್ ಸ್ನಾತಃ ಶುಚಿರಲಂಕೃತಃ ॥ ೧ ॥

ವಾಚಯಿತ್ವಾ ಸ್ವಸ್ತ್ಯಯನಂ ಜಾತಕರ್ಮಾತ್ಮಜಸ್ಯ ವೈ ।
ಕಾರಯಾಮಾಸ ವಿಧಿವತ್ಪಿತೃದೇವಾರ್ಚನಂ ತಥಾ ॥ ೨ ॥

ಧೇನೂನಾಂ ನಿಯುತೇ ಪ್ರಾದಾದ್ವಿಪ್ರೇಭ್ಯಃ ಸಮಲಂಕೃತೇ ।
ತಿಲಾದ್ರೀನ್ಸಪ್ತ ರತ್ನೌಘಶಾತಕೌಂಭಾಂಬರಾವೃತಾನ್ ॥ ೩ ॥

ಕಾಲೇನ ಸ್ನಾನಶೌಚಾಭ್ಯಾಂ ಸಂಸ್ಕಾರೈಸ್ತಪಸೇಜ್ಯಯಾ ।
ಶುಧ್ಯಂತಿ ದಾನೈಃ ಸಂತುಷ್ಟ್ಯಾ ದ್ರವ್ಯಾಣ್ಯಾತ್ಮಾಽಽತ್ಮವಿದ್ಯಯಾ ॥ ೪ ॥

ಸೌಮಂಗಲ್ಯಗಿರೋ ವಿಪ್ರಾಃ ಸೂತಮಾಗಧವಂದಿನಃ ।
ಗಾಯಕಾಶ್ಚ ಜಗುರ್ನೇದುರ್ಭೇರ್ಯೋ ದುಂದುಭಯೋ ಮುಹುಃ ॥ ೫ ॥

ವ್ರಜಃ ಸಮ್ಮೃಷ್ಟಸಂಸಿಕ್ತದ್ವಾರಾಜಿರಗೃಹಾಂತರಃ ।
ಚಿತ್ರಧ್ವಜಪತಾಕಾಸ್ರಕ್ಚೈಲಪಲ್ಲವತೋರಣೈಃ ॥ ೬ ॥

ಗಾವೋ ವೃಷಾ ವತ್ಸತರಾ ಹರಿದ್ರಾತೈಲರೂಷಿತಾಃ ।
ವಿಚಿತ್ರಧಾತುಬರ್ಹಸ್ರಗ್ವಸ್ತ್ರಕಾಂಚನಮಾಲಿನಃ ॥ ೭ ॥

ಮಹಾರ್ಹವಸ್ತ್ರಾಭರಣಕಂಚುಕೋಷ್ಣೀಷಭೂಷಿತಾಃ ।
ಗೋಪಾಃ ಸಮಾಯಯೂ ರಾಜನ್ನಾನೋಪಾಯನಪಾಣಯಃ ॥ ೮ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ಮಹಾನುಭಾವನಾದ ನಂದರಾಜನು ಬಹಳ ಉದಾರನಾಗಿದ್ದನು. ಪುತ್ರನ ಜನ್ಮವಾದಾಗ ಅವನ ಹೃದಯ ವಿಲಕ್ಷಣ ಆನಂದದಿಂದ ತುಂಬಿಹೋಯಿತು. ಅವನು ಸ್ನಾನಮಾಡಿ ಸುಂದರ ವಸ್ತ್ರಾಭೂಷಣಗಳನ್ನು ಧರಿಸಿದನು. ಮತ್ತೆ ವೇದಜ್ಞರಾದ ಬ್ರಾಹ್ಮಣರನ್ನು ಕರೆಸಿ ಸ್ವಸ್ತಿವಾಚನ ಮತ್ತು ಪುತ್ರನ ಜಾತಕರ್ಮ ಸಂಸ್ಕಾರವನ್ನು ನಡೆಸಿದನು. ಜೊತೆಗೆ ದೇವತೆಗಳನ್ನು ಮತ್ತು ಪಿತೃಗಳನ್ನು ವಿಧಿವತ್ತಾಗಿ ಪೂಜಿಸಿದನು. ॥ ೧-೨ ॥ ಅವನು ಬ್ರಾಹ್ಮಣರಿಗೆ ವಸ್ತ್ರಾಭೂಷಣಗಳಿಂದ ಸುಸಜ್ಜಿತವಾದ ಎರಡು ಲಕ್ಷ ಗೋವುಗಳನ್ನು ದಾನಮಾಡಿದನು. ರತ್ನಗಳಿಂದಲೂ, ಸುವರ್ಣನಾಣ್ಯಗಳಿಂದಲೂ, ವಸ್ತ್ರಗಳಿಂದಲೂ ಸಮಲಂಕೃತವಾದ ಏಳು ಎಳ್ಳಿನ ಪರ್ವತಗಳನ್ನು ದಾನಮಾಡಿದನು. ॥ ೩ ॥ ಹೊಸನೀರು, ನೆಲ ಮುಂತಾದ ದ್ರವ್ಯಗಳು ಸಮಯಕಳೆದಾಗ ಶುದ್ಧವಾಗುತ್ತವೆ. ಶರೀರಾದಿಗಳು ಸ್ನಾನದಿಂದಲೂ, ವಸ್ತ್ರಾದಿಗಳು ತೊಳೆಯುವಿಕೆಯಿಂದಲೂ, ಸಂಸ್ಕಾರಗಳಿಂದ ಗರ್ಭವೂ, ಇಂದ್ರಿಯಾದಿಗಳು ತಪಸ್ಸಿನಿಂದಲೂ, ಬ್ರಾಹ್ಮಣರು ಯಜ್ಞಾದಿಗಳಿಂದಲೂ, ಧನಧಾನ್ಯಗಳು ದಾನದಿಂದಲೂ, ಮನಸ್ಸು ಸಂತೋಷದಿಂದಲೂ ಶುದ್ಧವಾಗುತ್ತವೆ. ಆದರೆ ಆತ್ಮಜ್ಞಾನದಿಂದಲೇ ಆತ್ಮನ ಶುದ್ಧಿಯಾಗುತ್ತದೆ. ॥ ೪ ॥ ಆ ಸಮಯದಲ್ಲಿ ಬ್ರಾಹ್ಮಣರು, ಸೂತರು, ಮಾಗಧರು, ವಂದಿಜನರು ಮಂಗಲಾಶೀರ್ವಾದ ಕೊಡುತ್ತಾ ಸ್ತುತಿಸತೊಡಗಿದರು. ಗಾಯಕರು ಹಾಡತೊಡಗಿದರು. ಭೇರಿ, ದುಂದುಭಿಗಳು ಮೊಳಗಿದವು. ॥ ೫ ॥ ವ್ರಜಮಂಡಲವಾಸಿಗಳೆಲ್ಲರೂ ತಮ್ಮ-ತಮ್ಮ ಮನೆಗಳ ಬಾಗಿಲುಗಳನ್ನೂ, ಅಂಗಳಗಳನ್ನೂ, ಜಗುಲಿಗಳನ್ನೂ ಗುಡಿಸಿ-ಸಾರಿಸಿ ಸುಗಂಧಮಯವಾದ ನೀರನ್ನು ಸಿಂಪಡಿಸಿ, ರಂಗವಲ್ಲಿಯನ್ನಿಟ್ಟು, ಚಿತ್ರ-ವಿಚಿತ್ರವಾದ ಧ್ವಜಪತಾಕೆಗಳಿಂದಲೂ, ಹೂವಿನ ಹಾರಗಳಿಂದಲೂ, ವಸ್ತ್ರಗಳಿಂದ ಕೂಡಿದ ತೋರಣಗಳಿಂದಲೂ, ತಳಿರುತೋರಣಗಳಿಂದಲೂ, ನಯನಾನಂದಕರವಾಗಿ ಸಿಂಗರಿಸಿದರು. ॥ ೬ ॥ ತಮ್ಮ ಮನೆಗಳನ್ನು ಸಿಂಗರಿಸಿದಂತೆ ಗೋಪರು ಗೋವುಗಳಿಗೂ, ಎತ್ತುಗಳಿಗೂ, ಕರುಗಳಿಗೂ ಅರಸಿನ ಎಣ್ಣೆಗಳನ್ನು ಮೈಗೆ ಹಚ್ಚಿದರು. ಮಣ್ಣ, ಶಿಲೆ, ಸಿಂಧೂರ, ಬಣ್ಣ-ಬಣ್ಣದ ಧಾತುಗಳಿಂದ, ನವಿಲುಗರಿಗಳಿಂದ, ಹೂವಿನ ಹಾರಗಳಿಂದ, ನಾನಾರೀತಿಯ ಸುಂದರ ವಸ್ತ್ರಗಳಿಂದ, ಚಿನ್ನದ ಸರಪಳಿಗಳಿಂದ ಅಲಂಕರಿಸಿದರು. ॥ ೭ ॥ ಪರೀಕ್ಷಿತನೇ! ಬಳಿಕ ಸಮಸ್ತಗೋಪರು ಬಹುಮೂಲ್ಯ ವಸ್ತ್ರಗಳಿಂದ, ಒಡವೆಗಳಿಂದ, ವಲ್ಲಿಗಳಿಂದ ಸುಸಜ್ಜಿತರಾಗಿ ತಲೆಗೆ ಮುಂಡಾಸನ್ನು ಸುತ್ತಿಕೊಂಡು ನಾನಾವಿಧವಾದ ಪಾರಿತೋಷಕಗಳೊಡನೆ ನಂದಗೋಪನ ಮನೆಗೆ ಬಂದರು. ॥ ೮ ॥

ಗೋಪ್ಯಶ್ಚಾಕರ್ಣ್ಯ ಮುದಿತಾ ಯಶೋದಾಯಾಃ ಸುತೋದ್ಭವಮ್ ।
ಆತ್ಮಾನಂ ಭೂಷಯಾಂಚಕ್ರುರ್ವಸ್ತ್ರಾಕಲ್ಪಾಂಜನಾದಿಭಿಃ ॥ ೯ ॥

ನವಕುಂಕುಮಕಿಂಜಲ್ಕಮುಖಪಂಕಜಭೂತಯಃ ।
ಬಲಿಭಿಸ್ತ್ವರಿತಂ ಜಗ್ಮುಃ ಪೃಥುಶ್ರೋಣ್ಯಶ್ಚಲತ್ಕುಚಾಃ ॥ ೧೦ ॥

ಗೋಪ್ಯಃ ಸುಮೃಷ್ಟಮಣಿಕುಂಡಲನಿಷ್ಕಕಂಠ್ಯ-
ಶ್ಚಿತ್ರಾಂಬರಾಃ ಪಥಿ ಶಿಖಾಚ್ಯುತಮಾಲ್ಯವರ್ಷಾಃ ।
ನಂದಾಲಯಂ ಸವಲಯಾ ವ್ರಜತೀರ್ವಿರೇಜು-
ರ್ವ್ಯಾಲೋಲಕುಂಡಲಪಯೋಧರಹಾರಶೋಭಾಃ ॥ ೧೧ ॥

ತಾ ಆಶಿಷಃ ಪ್ರಯುಂಜಾನಾಶ್ಚಿರಂ ಪಾಹೀತಿ ಬಾಲಕೇ ।
ಹರಿದ್ರಾಚೂರ್ಣತೈಲಾದ್ಭಿಃ ಸಿಂಚಂತ್ಯೋಽಜನಮುಜ್ಜಗುಃ ॥ ೧೨ ॥

ಅವಾದ್ಯಂತ ವಿಚಿತ್ರಾಣಿ ವಾದಿತ್ರಾಣಿ ಮಹೋತ್ಸವೇ ।
ಕೃಷ್ಣೇ ವಿಶ್ವೇಶ್ವರೇಽನಂತೇ ನಂದಸ್ಯ ವ್ರಜಮಾಗತೇ ॥ ೧೩ ॥

ಗೋಪಾಃ ಪರಸ್ಪರಂ ಹೃಷ್ಟಾ ದಧಿಕ್ಷೀರಘೃತಾಂಬುಭಿಃ ।
ಆಸಿಂಚಂತೋ ವಿಲಿಂಪಂತೋ ನವನೀತೈಶ್ಚ ಚಿಕ್ಷಿಪುಃ ॥ ೧೪ ॥

ನಂದೋ ಮಹಾಮನಾಸ್ತೇಭ್ಯೋ ವಾಸೋಽಲಂಕಾರಗೋಧನಮ್ ।
ಸೂತಮಾಗಧವಂದಿಭ್ಯೋ ಯೇಽನ್ಯೇ ವಿದ್ಯೋಪಜೀವಿನಃ ॥ ೧೫ ॥

ಯಶೋದಾದೇವಿಗೆ ಗಂಡುಮಗು ಹುಟ್ಟಿದೆ ಎಂದು ಕೇಳಿದ ಗೋಪಿಯರಿಗೆ ಮಹದಾನಂದವಾಯಿತು. ಅವರೂ ಸುಂದರವಾದ ವಸ್ತ್ರಾಭೂಷಣಗಳಿಂದಲೂ, ಅಂಜನ-ಅಂಗರಾಗಗಳಿಂದಲೂ ಶೃಂಗರಿಸಿಕೊಂಡರು. ॥ ೯ ॥ ಗೋಪಿಯರ ಮುಖಕಮಲಗಳು ಬಹಳ ಸುಂದರವಾಗಿ ಕಾಣುತ್ತಿದ್ದವು. ಹಣೆಯಲ್ಲಿದ್ದ ಕುಂಕುಮವು ಕಮಲದ ಎಸಳಿನಂತೆ ಕಾಣುತ್ತಿತ್ತು. ಪುಷ್ಟವಾದ ನಿತಂಬಗಳನ್ನು ಹೊಂದಿದ್ದ ಅವರು ಉಪಹಾರ ಸಾಮಗ್ರಿಗಳನ್ನು ಎತ್ತಿಕೊಂಡು ಸಂಭ್ರಮದಿಂದ ಯಶೋದೆಯ ಬಳಿಗೆ ಹೋಗುತ್ತಿದ್ದಾಗ ಅವರ ಕುಚಗಳು ನಲಿದಾಡುತ್ತಿದ್ದವು. ॥ ೧೦ ॥ ಗೋಪಿಯರ ಕಿವಿಗಳಲ್ಲಿ ಹೊಳೆಯುತ್ತಿದ್ದ ಮಣಿಕುಂಡಲಗಳಿದ್ದುವು. ಕೊರಳಲ್ಲಿ ಸುವರ್ಣಮಯವಾದ ಸರಗಳನ್ನು ತೊಟ್ಟಿದ್ದರು. ಅವರು ಅತ್ಯಂತ ಸುಂದರವಾದ ಬಣ್ಣ-ಬಣ್ಣದ ಸೀರೆಗಳನ್ನು ಉಟ್ಟಿದ್ದರು. ದಾರಿಯಲ್ಲಿ ಅವರು ಮುಡಿದುಕೊಂಡಿದ್ದ ಹೂವುಗಳು ಉದುರುತ್ತಿದ್ದವು. ಕೈ ಕಡಗಗಳನ್ನು ಧರಿಸಿದ್ದ ಅವರು ನಂದಗೋಪನ ಮನೆಗೆ ಅವಸರ-ಅವಸರವಾಗಿ ಹೋಗುತ್ತಿದ್ದಾಗ ಅವರ ಕಿವಿಯಲ್ಲಿದ್ದ ಕುಂಡಲಗಳೂ, ಪಯೋಧರಗಳೂ, ಹಾರಗಳೂ ಕುಣಿದಾಡುತ್ತಿದ್ದು ಆ ಗೋಪಿಯರು ಬಹಳವಾಗಿ ಪ್ರಕಾಶಿಸಿದರು. ॥ ೧೧ ॥ ನಂದರಾಜನ ಮನೆಗೆ ಹೋಗಿ ಅವರು ನವಜಾತ ಶಿಶುವಿಗೆ – 'ಇವನು ಚಿರಂಜೀವಿಯಾಗಲೀ, ಭಗವಂತನು ಇವನನ್ನು ರಕ್ಷಿಸಲಿ' ಎಂದು ಆಶೀರ್ವಾದಗಳನ್ನು ಕೊಡುತ್ತಿದ್ದರು. ಕುಲಾಚಾರದಂತೆ ಅರಶಿನ-ಎಣ್ಣೆಮಿಶ್ರಿತವಾದ ನೀರನ್ನು (ಓಕುಳಿ) ಜನರಮೇಲೆ ಚಿಮುಕಿಸುತ್ತಾ, ಲಾಲಿ-ಶೋಭಾನೆ ಮುಂತಾದ ಮಂಗಳಗೀತೆಗಳನ್ನು ಗಟ್ಟಿಯಾಗಿ ಹಾಡುತ್ತಿದ್ದರು. ॥ ೧೨ ॥

ಭಗವಾನ್ ಶ್ರೀಕೃಷ್ಣನು ಸಮಸ್ತ ಜಗತ್ತಿಗೆ ಏಕಮಾತ್ರ ಸ್ವಾಮಿಯಾಗಿರುವನು. ಅವನ ಐಶ್ವರ್ಯ, ಮಾಧುರ್ಯ, ವಾತ್ಸಲ್ಯ ಎಲ್ಲವೂ ಅನಂತವೇ. ಅವನು ನಂದನ ವ್ರಜದಲ್ಲಿ ಪ್ರಕಟನಾದಾಗ ಅವನ ಜನ್ಮಮಹೋತ್ಸವವನ್ನು ಆಚರಿಸಲಾಯಿತು. ಆಗ ವಿಚಿತ್ರವಾದ ಮಂಗಳವಾದ್ಯಗಳು ಮೊಳಗಿದವು. ॥ ೧೩ ॥ ಆನಂದಭರಿತರಾದ ಗೋಪಾಲಕರು ಒಬ್ಬರು ಮತ್ತೊಬ್ಬರ ಮೇಲೆ ಹಾಲು, ಮೊಸರು, ತುಪ್ಪ, ನೀರು ಇವುಗಳನ್ನು ಎರಚಾಡಿದರು. ಒಬ್ಬರು ಮತ್ತೊಬ್ಬರ ಮುಖಕ್ಕೆ ಬೆಣ್ಣೆಯನ್ನು ಸವರುತ್ತಾ-ಎಸೆಯುತ್ತಾ ಕುಣಿ-ಕುಣಿದು ಹಾಡುತ್ತಾ ಆನಂದೋತ್ಸವವನ್ನು ಆಚರಿಸಿದರು. ॥ ೧೪ ॥ ಮಹಾನುಭಾವನಾದ ನಂದಗೋಪನು ಪರಮ ಉದಾರಿಯಾಗಿದ್ದನು. ಅವನು ಗೋಪಾಲಕರೆಲ್ಲರಿಗೂ ವಸ್ತ್ರಾಭರಣಗಳನ್ನೂ, ಹಸುಗಳನ್ನೂ, ನೆನಪಿನ ಕಾಣಿಕೆಗಳನ್ನು ಕೊಟ್ಟನು. ಸೂತ, ಮಾಗಧ, ವಂದಿಗಳಿಗೂ,* ನೃತ್ಯ-ವಾದ್ಯ ಮುಂತಾದ ಲಲಿತಕಲೆಗಳಿಂದ ಜೀವನನಿರ್ವಹಿಸುವ ಕಲಾವಿದರಿಗೂ, ವಿದ್ವಾಂಸರಿಗೂ ಅವರವರ ಅಪೇಕ್ಷೆಯಂತೆ ಬಹುಮಾನಗಳನ್ನು ಕೊಟ್ಟು ಅವರೆಲ್ಲರನ್ನೂ ಯಥೋಚಿತವಾಗಿ ಸತ್ಕರಿಸಿದನು. 'ತನ್ನ ಸತ್ಕಾರದಿಂದ

* ಸೂತಾಃ ಪೌರಾಣಿಕಾಃ ಪ್ರೋಕ್ತಾ ಮಾಗಧಾ ವಂಶಶಂಸಕಾಃ । ವಂದಿನಸ್ತ್ವಮಲಪ್ರಜ್ಞಾಃ ಪ್ರಸ್ತಾವಸದೃಶೋಕ್ತಯಃ ॥
ಪುರಾಣಗಳನ್ನು ಹೇಳುವವರಿಗೆ ಸೂತರೆಂದೂ, ವಂಶಾವಳಿಗಳನ್ನು ಹೊಗಳುವವರಿಗೆ ಮಾಗಧರೆಂದೂ, ತತ್ಕಾಲೋಚಿತವಾಗಿ ಮಾತಾಡುವವರಿಗೆ ವಂದಿಗಳೆಂದೂ ಹೆಸರು.

ತೈಸ್ತೈಃ ಕಾಮೈರದೀನಾತ್ಮಾ ಯಥೋಚಿತಮಪೂಜಯತ್ ।
ವಿಷ್ಣೋರಾರಾಧನಾರ್ಥಾಯ ಸ್ವಪುತ್ರಸ್ಯೋದಯಾಯ ಚ
॥ ೧೬ ॥

ರೋಹಿಣೀ ಚ ಮಹಾಭಾಗಾ ನಂದಗೋಪಾಭಿನಂದಿತಾ ।
ವ್ಯಚರದ್ದಿವ್ಯವಾಸಃಸ್ರಕ್ಕಂಠಾಭರಣಭೂಷಿತಾ
॥ ೧೭ ॥

ತತ ಆರಭ್ಯ ನಂದಸ್ಯ ವ್ರಜಃ ಸರ್ವಸಮೃದ್ಧಿಮಾನ್ ।
ಹರೇರ್ನಿವಾಸಾತ್ಮಗುಣೈ ರಮಾಕ್ರೀಡಮಭೂನ್ನೃಪ
॥ ೧೮ ॥

ಗೋಪಾನ್ಗೋಕುಲರಕ್ಷಾಯಾಂ ನಿರೂಪ್ಯ ಮಥುರಾಂ ಗತಃ ।
ನಂದಃ ಕಂಸಸ್ಯ ವಾರ್ಷಿಕ್ಯಂ ಕರಂ ದಾತುಂ ಕುರೂದ್ವಹ
॥ ೧೯ ॥

ವಸುದೇವ ಉಪಶ್ರುತ್ಯ ಭ್ರಾತರಂ ನಂದಮಾಗತಮ್ ।
ಜ್ಞಾತ್ವಾ ದತ್ತಕರಂ ರಾಜ್ಞೇ ಯಯೌ ತದವಮೋಚನಮ್
॥ ೨೦ ॥

ತಂ ದೃಷ್ಟ್ವಾ ಸಹಸೋತ್ಥಾಯ ದೇಹಃ ಪ್ರಾಣಮಿವಾಗತಮ್ ।
ಪ್ರೀತಃ ಪ್ರಿಯತಮಂ ದೋರ್ಭ್ಯಾಂ ಸಸ್ವಜೇ ಪ್ರೇಮವಿಹ್ವಲಃ
॥ ೨೧ ॥

ಪೂಜಿತಃ ಸುಖಮಾಸೀನಃ ಪೃಷ್ಟ್ವಾನಾಮಯಮಾದೃತಃ ।
ಪ್ರಸಕ್ತಧೀಃ ಸ್ವಾತ್ಮಜಯೋರಿದಮಾಹ ವಿಶಾಂಪತೇ
॥ ೨೨ ॥

ದಿಷ್ಟ್ಯಾ ಭ್ರಾತಃ ಪ್ರವಯಸ ಇದಾನೀಮಪ್ರಜಸ್ಯ ತೇ ।
ಪ್ರಜಾಶಾಯಾ ನಿವೃತ್ತಸ್ಯ ಪ್ರಜಾ ಯತ್ಸಮಪದ್ಯತ
॥ ೨೩ ॥

ದಿಷ್ಟ್ಯಾ ಸಂಸಾರಚಕ್ರೇಽಸ್ಮಿನ್ವರ್ತಮಾನಃ ಪುನರ್ಭವಃ ।
ಉಪಲಬ್ಧೋ ಭವಾನದ್ಯ ದುರ್ಲಭಂ ಪ್ರಿಯದರ್ಶನಮ್
॥ ೨೪ ॥

ನೈಕತ್ರ ಪ್ರಿಯಸಂವಾಸಃ ಸುಹೃದಾಂ ಚಿತ್ರಕರ್ಮಣಾಮ್ ।
ಓಘೇನ ವ್ಯೂಹ್ಯಮಾನಾನಾಂ ಪ್ಲವಾನಾಂ ಸ್ರೋತಸೋ ಯಥಾ
॥ ೨೫ ॥

ಮಹಾವಿಷ್ಣುವು ಪ್ರಸನ್ನನಾಗಬೇಕು. ನವಜಾತ ಶಿಶುವಿನ ಅಭ್ಯುದಯವಾಗಬೇಕು' ಎಂಬುದೇ ನಂದಗೋಪನ ಮುಖ್ಯ ಉದ್ದೇಶವಾಗಿತ್ತು. ॥ ೧೫-೧೬ ॥ ನಂದಗೋಪನಿಂದ ಅಭಿನಂದಿಸಲ್ಪಟ್ಟ ಪರಮ ಸೌಭಾಗ್ಯವತಿಯಾದ ರೋಹಿಣೀದೇವಿಯೂ ದಿವ್ಯವಾದ ವಸ್ತ್ರಗಳಿಂದಲೂ, ಮಾಲೆಗಳಿಂದಲೂ, ಕಂಠಾಭರಣಗಳಿಂದಲೂ ಸಮಲಂಕೃತಳಾಗಿ ಮನೆಯೊಡತಿಯಂತೆ ಬಂದು-ಹೋಗುವ ಗೋಪಿಕಾಸ್ತ್ರೀಯರನ್ನು ಆದರದಿಂದ ಸತ್ಕರಿಸುತ್ತಾ ಓಡಾಡುತ್ತಿದ್ದಳು. ॥ ೧೭ ॥

ಪರೀಕ್ಷಿತನೇ! ಶ್ರೀಕೃಷ್ಣನ ಜನ್ಮೋತ್ಸವದಿಂದಲೇ ನಂದನ ವ್ರಜಭೂಮಿಯು ಸಮಸ್ತ ಸಂಪತ್ತುಗಳಿಂದ ಸಮೃದ್ಧವಾಯಿತು. ಭಗವಾನ್ ಶ್ರೀಕೃಷ್ಣನ ನಿವಾಸಸ್ಥಾನದಿಂದಲೂ, ತನ್ನ ಸ್ವಾಭಾವಿಕ ಗುಣಗಳ ಕಾರಣದಿಂದ ಅಲ್ಲಿ ಮಹಾಲಕ್ಷ್ಮಿಯು ಆಟವಾಡುತ್ತಿದ್ದಳು. ॥ ೧೮ ॥

ಪರೀಕ್ಷಿತನೇ! ಕೆಲವು ದಿವಸಗಳ ನಂತರ ನಂದಗೋಪನು ಗೋಕುಲದ ರಕ್ಷಣೆಯ ಭಾರವನ್ನು ಇತರ ಗೋಪಾಲಕರಿಗೆ ವಹಿಸಿಕೊಟ್ಟು, ಕಂಸನಿಗೆ ವಾರ್ಷಿಕ ಕಂದಾಯವನ್ನು ಒಪ್ಪಿಸುವ ಸಲುವಾಗಿ ಮಥುರೆಗೆ ಹೊರಟನು. ॥ ೧೯ ॥ ಮಥುರಾ ಪಟ್ಟಣದಲ್ಲೇ ಇದ್ದ ವಸುದೇವನಿಗೆ ತನ್ನ ಸೋದರನಂತಿದ್ದ ನಂದಗೋಪನು ಕಂಸನಿಗೆ ಕಂದಾಯವನ್ನು ಕೊಡಲು ಮಥುರೆಗೆ ಬಂದಿರುವನೆಂದು ತಿಳಿದು, ಅವನು ನಂದನು ಉಳಿದುಕೊಂಡಿದ್ದ ಬಿಡಾರಕ್ಕೆ ಹೋದನು. ॥ ೨೦ ॥ ವಸುದೇವನನ್ನು ನೋಡುತ್ತಲೇ ನಂದಗೋಪನು ಸತ್ತುಹೋದವನು ಬದುಕಿ ಮೇಲೆದ್ದು ನಿಲ್ಲುವಂತೆ ಎದ್ದು ನಿಂತನು. ಅವನು ಅತ್ಯಂತ ಪ್ರೀತಿಯಿಂದ ವಸುದೇವನನ್ನು ಬಾಚಿ ತಬ್ಬಿಕೊಂಡನು. ಆಗ ನಂದಗೋಪನು ಪ್ರೇಮವಿಹ್ವಲನಾಗಿದ್ದನು. ॥ ೨೧ ॥ ಪರೀಕ್ಷಿತನೇ! ನಂದಗೋಪನು ವಸುದೇವನನ್ನು ಬಹಳವಾಗಿ ಸ್ವಾಗತ-ಸತ್ಕಾರ ಮಾಡಿದನು. ಅವನು ಸುಖಾಸನದಲ್ಲಿ ಕುಳಿತು ಕುಶಲ ಪ್ರಶ್ನೆಗಳನ್ನು ಕೇಳತೊಡಗಿದನು. ॥ ೨೨ ॥

ಆ ಸಮಯದಲ್ಲಿ ವಸುದೇವನ ಮನಸ್ಸು ತನ್ನ ಇಬ್ಬರು ಮಕ್ಕಳ ವಿಷಯದಲ್ಲಿ ಆಸಕ್ತವಾಗಿತ್ತು. ಅಂತೆಯೇ ನಂದಗೋಪನಲ್ಲಿ ಹೇಳಿದನು – ಸಹೋದರಾ! ನಿನಗೆ ಇದುವರೆಗೆ ಯಾವುದೇ ಸಂತಾನವೂ ಇರಲಿಲ್ಲ, ವೃದ್ಧನಾದ ಕಾರಣ ಅದರ ಆಸೆಯೂ ಇರಲಿಲ್ಲ, ಸೌಭಾಗ್ಯವಶದಿಂದ ಈಗ ನಿನಗೆ ಸಂತಾನವಾಗಿದೆ. ॥ ೨೩ ॥ ಇದು ಅತ್ಯಂತ ಆನಂದದ ಮಾತಾಗಿದೆ. ಇಂದು ನಮ್ಮಗಳ ಭೇಟಿಯಾದುದು ಸಂತೋಷವೇ. ಪ್ರಿಯರಾದವರನ್ನು ಸಂದರ್ಶಿಸುವುದೂ ಈಗಿನ ಕಾಲದಲ್ಲಿ ದುರ್ಲಭವೇ ಆಗಿದೆ. ಈ ಸಂಸಾರಚಕ್ರವೇ ಹೀಗಿದೆ. ಇಂದು ನಿನ್ನನ್ನು ಸಂದರ್ಶಿಸಿದ್ದು ಪುನರ್ಜನ್ಮವನ್ನು ಪಡೆದಂತೆಯೇ ಆಗಿದೆ. ॥ ೨೪ ॥ ಪ್ರವಾಹಕ್ಕೆ ಸಿಕ್ಕಿದ ತೃಣ-ಕಾಷ್ಠಗಳು ಯಾವಾಗಲೂ ಒಂದೇಕಡೆ ಸೇರಿಕೊಂಡಿರುವುದಿಲ್ಲ, ಹಾಗೆಯೇ ನಿಜಬಂಧುಗಳೂ, ಸುಹೃದರೂ ಎಲ್ಲರಿಗೂ, ಪ್ರಿಯರಾಗಿದ್ದರೂ ಒಂದೆಡೆ ಇರುವುದು ಸಂಭವಿಸಲಾರದು. ಏಕೆಂದರೆ, ಎಲ್ಲರ ಪ್ರಾರಬ್ಧಕರ್ಮಗಳು ಬೇರೆ-ಬೇರೆಯಾಗಿರುತ್ತವೆ. ॥ ೨೫ ॥

**ಕಚ್ಚಿತ್ಪಶವ್ಯಂ ನಿರುಜಂ ಭೂರ್ಯಂಬುತೃಣವೀರುಧಮ್ ।**
**ಬೃಹದ್ವನಂ ತದಧುನಾ ಯತ್ರಾಸ್ಸೇ ತ್ವಂ ಸುಹೃದ್ವೃತಃ ॥ ೨೬ ॥**

**ಭ್ರಾತರ್ಮಮ ಸುತಃ ಕಚ್ಚಿನ್ಮಾತ್ರಾ ಸಹ ಭವದ್ವ್ರಜೇ ।**
**ತಾತಂ ಭವಂತಂ ಮನ್ವಾನೋ ಭವದ್ಭ್ಯಾಮುಪಲಾಲಿತಃ ॥ ೨೭ ॥**

**ಪುಂಸಸ್ತ್ರಿವರ್ಗೋ ವಿಹಿತಃ ಸುಹೃದೋ ಹ್ಯನುಭಾವಿತಃ ।**
**ನ ತೇಷು ಕ್ಲಿಶ್ಯಮಾನೇಷು ತ್ರಿವರ್ಗೋಽರ್ಥಾಯ ಕಲ್ಪತೇ ॥ ೨೮ ॥**

*ನಂದ ಉವಾಚ*

**ಅಹೋ ತೇ ದೇವಕೀಪುತ್ರಾಃ ಕಂಸೇನ ಬಹವೋ ಹತಾಃ ।**
**ಏಕಾವಶಿಷ್ಟಾವರಜಾ ಕನ್ಯಾ ಸಾಪಿ ದಿವಂ ಗತಾ ॥ ೨೯ ॥**

**ನೂನಂ ಹ್ಯದೃಷ್ಟನಿಷ್ಠೋಽಯಮದೃಷ್ಟಪರಮೋ ಜನಃ ।**
**ಅದೃಷ್ಟಮಾತ್ಮನಸ್ತತ್ತ್ವಂ ಯೋ ವೇದ ನ ಸ ಮುಹ್ಯತಿ ॥ ೩೦ ॥**

*ವಸುದೇವ ಉವಾಚ*

**ಕರೋ ವೈ ವಾರ್ಷಿಕೋ ದತ್ತೋ ರಾಜ್ಞೇ ದೃಷ್ಟಾ ವಯಂ ಚ ವಃ ।**
**ನೇಹ ಸ್ಥೇಯಂ ಬಹುತಿಥಂ ಸಂತ್ಯುತ್ಪಾತಾಶ್ಚ ಗೋಕುಲೇ ॥ ೩೧ ॥**

*ಶ್ರೀಶುಕ ಉವಾಚ*

**ಇತಿ ನಂದಾದಯೋ ಗೋಪಾಃ ಪ್ರೋಕ್ತಾಸ್ತೇ ಶೌರಿಣಾ ಯಯುಃ ।**
**ಅನೋಭಿರನಡುದ್ಯುಕ್ತೈಸ್ತಮನುಜ್ಞಾಪ್ಯ ಗೋಕುಲಮ್ ॥ ೩೨ ॥**

ಈಗ ನೀನು ನಿನ್ನ ಬಂಧುಗಳೊಡನೆಯೂ, ಸುಹೃದಯರೊಡನೆಯೂ ವಾಸಿಸುವ ಮಹಾವನದಲ್ಲಿ ಗಿಡ-ಮರ-ಬಳ್ಳಿ ನೀರು-ಹುಲ್ಲು ಇತ್ಯಾದಿಗಳು ಸಮೃದ್ಧವಾಗಿರುವೆಯೇ? ಹಸುಗಳನ್ನು ಸಾಕಲು ಅನುಕೂಲ ವಾಗಿದೆಯೇ? ಆ ಪ್ರದೇಶವು ರೋಗ-ರುಜಿನಗಳಿಂದ ರಹಿತವಾಗಿರುವುದೇ? ॥ ೨೬ ॥ ತಮ್ಮಾ! ನನ್ನ ಮಗನು ತನ್ನ ತಾಯಿ ರೋಹಿಣಿಯೊಡನೆ ನಿನ್ನ ವ್ರಜದಲ್ಲಿ ಇದ್ದಾನೆ. ಅವನ ಲಾಲನೆ-ಪಾಲನೆಗಳನ್ನು ನೀನು ಮತ್ತು ಯಶೋದೆ ಮಾಡುತ್ತಿರುವಿರಿ. ಆದರಿಂದ ಅವನು ನಿಮ್ಮನ್ನೇ ತಂದೆ-ತಾಯಿಯರೆಂದು ಭಾವಿಸಿಕೊಂಡಿರಬಹುದು? ಅವನು ಕ್ಷೇಮವೇ? ॥ ೨೭ ॥ ಸ್ವಜನರಿಗೆ ಸುಖಿಸಿಗುವಂತಹ ಧರ್ಮ, ಅರ್ಥ, ಕಾಮಗಳೇ ಮನುಷ್ಯನಿಗೆ ಶಾಸ್ತ್ರವಿಹಿತವಾಗಿವೆ. ಈ ತ್ರಿವರ್ಗಗಳು ತನ್ನ ಸುಖಕ್ಕಾಗಿ ಮಾತ್ರವೇ ಆಗಿದ್ದು ಬಂಧುಗಳಿಗೆ ಕ್ಲೇಶದಾಯಕವಾಗಿದ್ದರೆ ಅವನ್ನು ಶಾಸ್ತ್ರವಿಹಿತವೆಂದು ಹೇಳಲಾಗುವುದಿಲ್ಲ. ॥ ೨೮ ॥

**ನಂದಗೋಪನು ಹೇಳಿದನು** – ಅಣ್ಣಾ! ವಸುದೇವನೇ! ನಿನ್ನ ಮನಸ್ಸಿನ ಸಂಕಟವನ್ನು ನಾನು ಊಹಿಸಿಕೊಳ್ಳಲೂ ಸಾಧ್ಯವಿಲ್ಲ. ದೇವಕಿಯ ಗರ್ಭದಲ್ಲಿ ಹುಟ್ಟಿದ ಆರು ಮಕ್ಕಳನ್ನೂ ಕಂಸನು ಕೊಂದುಹಾಕಿದನು. ಏಳನೆಯದಾದ ಕಡೆಯ ಹೆಣ್ಣುಶಿಶುವೂ ಸ್ವರ್ಗಕ್ಕೆ ಹೊರಟುಹೋಯಿತು. ॥ ೨೯ ॥ ಪ್ರಾಣಿಗಳ ಸುಖ ದುಃಖಗಳು ಅದೃಷ್ಟವನ್ನೇ ಅವಲಂಬಿಸಿವೆ. ಇದರಲ್ಲಿ ಸಂಶಯವೇ ಇಲ್ಲ. ಜೀವನದಲ್ಲಿನ ಸುಖ-ದುಃಖಗಳ ಕಾರಣವು ಅದೃಷ್ಟವೇ ಆಗಿದೆ ಎಂದು ತಿಳಿಯುವವನು ಅವು ಪ್ರಾಪ್ತವಾದಾಗಲೂ ಮೋಹಿತನಾಗುವುದಿಲ್ಲ. ॥ ೩೦ ॥

**ವಸುದೇವನು ಹೇಳಿದನು** – ತಮ್ಮಾ! ಕಂಸನಿಗೆ ಕೊಡಬೇಕಾಗಿದ್ದ ವಾರ್ಷಿಕ ಕಂದಾಯವನ್ನು ನೀನು ತೀರಿಸಿಯಾಯಿತು. ನಾವಿಬ್ಬರೂ ಕಲೆತು ಕುಶಲಪ್ರಶ್ನೆಗಳ ವಿನಿಮಯವಾದವು. ಇನ್ನು ನೀನು ಹೆಚ್ಚುದಿನ ಇಲ್ಲಿರುವುದು ಉಚಿತವಾಗಿ ಕಾಣುವುದಿಲ್ಲ. ಏಕೆಂದರೆ, ಗೋಕುಲದಲ್ಲಿ ದೊಡ್ಡ-ದೊಡ್ಡ ಉತ್ಪಾತಗಳು ಕಾಣಿಸಿಕೊಳ್ಳುತ್ತಿವೆ. ॥ ೩೧ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ವಸುದೇವನು ಹೀಗೆ ಹೇಳಿದಾಗ ನಂದನೇ ಮೊದಲಾದ ಗೋಪರು ವಸುದೇವನ ಅನುಮತಿಯನ್ನು ಪಡೆದು ಎತ್ತುಗಳು ಹೂಡಿದ ಚಕ್ಕಡಿಯಲ್ಲಿ ಕುಳಿತು ಗೋಕುಲದತ್ತ ಪ್ರಯಾಣ ಬೆಳೆಸಿದರು. ॥ ೩೨ ॥

*ಐದನೆಯ ಅಧ್ಯಾಯವು ಮುಗಿಯಿತು. ॥ ೫ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮಸ್ಕಂಧೇ ಪೂರ್ವಾರ್ಧೇ
ನಂದವಸುದೇವಸಂಗಮೋ ನಾಮ ಪಂಚಮೋಽಧ್ಯಾಯಃ ॥ ೫ ॥

# ಆರನೆಯ ಅಧ್ಯಾಯ

## ಪೂತನೆಯ ಉದ್ಧಾರ

ಶ್ರೀಶುಕ ಉವಾಚ

ನಂದಃ ಪಥಿ ವಚಃ ಶೌರೇರ್ನ ಮೃಷೇತಿ ವಿಚಿಂತಯನ್ ।
ಹರಿಂ ಜಗಾಮ ಶರಣಮುತ್ಪಾತಾಗಮಶಂಕಿತಃ ॥ ೧ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ನಂದಗೋಪನು ಪ್ರಯಾಣಮಾಡುತ್ತಿದ್ದಾಗ ದಾರಿಯಲ್ಲಿ – ವಸುದೇವನು ಹೇಳಿದುದನ್ನು ಪುನಃ ಪುನಃ ಸ್ಮರಿಸಿಕೊಂಡು, ಅವನು ಹೇಳಿದ ಮಾತು ಸುಳ್ಳಾಗುವುದಿಲ್ಲ ಎಂದು ಭಾವಿಸಿ ಆತನು ಉತ್ಪಾತಗಳ ನಿವಾರಣೆಗಾಗಿ ಶ್ರೀಹರಿಯನ್ನೇ ಏಕಾಗ್ರವಾದ ಮನಸ್ಸಿನಿಂದ ಶರಣಾದನು. ॥ ೧ ॥

ಕಂಸೇನ ಪ್ರಹಿತಾ ಘೋರಾ ಪೂತನಾ ಬಾಲಘಾತಿನೀ ।
ಶಿಶೂಂಶ್ಚಚಾರ ನಿಘ್ನಂತೀ ಪುರಗ್ರಾಮವ್ರಜಾದಿಷು ॥ ೨ ॥

ನ ಯತ್ರ ಶ್ರವಣಾದೀನಿ ರಕ್ಷೋಘ್ನಾನಿ ಸ್ವಕರ್ಮಸು ।
ಕುರ್ವಂತಿ ಸಾತ್ವತಾಂ ಭರ್ತುರ್ಯಾತುಧಾನ್ಯಶ್ಚ ತತ್ರ ಹಿ ॥ ೩ ॥

ವರ್ಷದೊಳಗೆ ಹುಟ್ಟಿದ ಮಕ್ಕಳನ್ನು ಕೊಲ್ಲಲು ಕಂಸನಿಂದ ಕಳುಹಿಸಲ್ಪಟ್ಟವರಲ್ಲಿ 'ಪೂತನಾ' ಎಂಬ ಹೆಸರಿನ ಕ್ರೂರರಾಕ್ಷಸಿಯಿದ್ದಳು. ಘೋರರೂಪಿಯಾದ ಬಾಲಹಂತಕಳಾದ ಆ ಪೂತನೆಯು ಪುರ ಗ್ರಾಮ-ಹಳ್ಳಿಗಳಲ್ಲಿ ಸಿಕ್ಕಿದ ಬಾಲಕರೆಲ್ಲರನ್ನೂ ಹಿಡಿದು ಸಾಯಿಸುತ್ತಾ ಸಂಚರಿಸುತ್ತಿದ್ದಳು. ॥ ೨ ॥ ನಿತ್ಯಕರ್ಮಗಳಲ್ಲಿ ರಾಕ್ಷೋಘ್ನಮಂತ್ರಗಳನ್ನು ಜಪಿಸದವರ ಬಳಿಯಲ್ಲಿ ಮತ್ತು ಭಕ್ತವತ್ಸಲ ಭಗವಂತನ ನಾಮ-ಗುಣ-ಲೀಲೆಗಳನ್ನು ಶ್ರವಣ, ಕೀರ್ತನ, ಸ್ಮರಣೆ ಮಾಡದವರ ಬಳಿಯಲ್ಲಿ ಇಂತಹ ರಾಕ್ಷಸರ ಬಲವು ಹೆಚ್ಚಾಗಿರುತ್ತದೆ. ॥ ೩ ॥ ಆ ಪೂತನೆಯು ಆಕಾಶ ಮಾರ್ಗದಿಂದ ಸಂಚರಿಸುವ, ಬೇಕುಬೇಕಾದ ರೂಪಗಳನ್ನು ಧರಿಸುವ ಸಾಮರ್ಥ್ಯವನ್ನು ಹೊಂದಿದ್ದಳು. ಒಂದು ದಿನ ನಂದನ ಗೋಕುಲದ ಬಳಿಗೆ ಬಂದು ಆಕೆಯು ಮಾಯೆಯಿಂದ ತಾನು ಒಂದು ಸುಂದರ ಯುವತಿಯಾಗಿ ಗೋಕುಲವನ್ನು ಪ್ರವೇಶಿಸಿದಳು. ॥ ೪ ॥ ಆಕೆಯು ಮಾಯೆಯಿಂದ ಸುಂದರಸ್ತ್ರೀರೂಪವನ್ನು ಧರಿಸಿದ್ದಳು. ಘಮ-ಘಮಿಸುವ ಮಲ್ಲಿಗೆಯ ದಂಡೆಯನ್ನು ಮುಡಿದುಕೊಂಡಿದ್ದಳು. ಅಂದವಾದ ಸೀರೆಯನ್ನು ಉಟ್ಟಿದ್ದಳು. ಆಕೆಯ ಕರ್ಣಕುಂಡಲಗಳು ಅಲುಗಾಡಿದಾಗ ಆಕೆಯ ಹೊಳೆಯುವ ಮುಖದ ಕಡೆಗೆ ವಾಲಿದ ಮುಂಗುರುಳುಗಳು ಹೆಚ್ಚಿನ ಶೋಭೆಯನ್ನು ತಂದಿದ್ದವು. ಆಕೆಯ ನಿತಂಬಗಳು ಕುಚಕಲಶಗಳು ಉನ್ನತವಾಗಿದ್ದು, ನಡುವು ಕಿರಿದಾಗಿತ್ತು. ॥ ೫ ॥ ಅವಳು ತನ್ನ ಮಧುರ ಮಂದಹಾಸದಿಂದ ಮತ್ತು ಕಡೆಗಣ್ಣಿನ ನೋಟದಿಂದ ವ್ರಜವಾಸಿಗಳ ಚಿತ್ತವನ್ನು ಅಪಹರಿಸುತ್ತಿದ್ದಳು. ಆ ರೂಪಸಂಪನ್ನೆಯಾದ ರಮಣಿಯು ಕೈಯಲ್ಲಿ ಕಮಲವನ್ನೆತ್ತಿಕೊಂಡು ಬರುತ್ತಿರುವುದನ್ನು ನೋಡಿದ ಗೋಪಿಯರು ಸ್ವಯಂ ಮಹಾಲಕ್ಷ್ಮಿಯೇ ಪತಿಯ ದರ್ಶನಕ್ಕಾಗಿ ಬಂದಿರುವಳೋ ಎಂದು ಭಾವಿಸಿದರು. ॥ ೬ ॥

ಸಾ ಖೇಚರ್ಯೇಕದೋಪೇತ್ಯ ಪೂತನಾ ನಂದಗೋಕುಲಮ್ ।
ಯೋಷಿತ್ವಾ ಮಾಯಯಾಽಽತ್ಮಾನಂ ಪ್ರಾವಿಶತ್ಕಾಮಚಾರಿಣೀ ॥ ೪ ॥

ತಾಂ ಕೇಶಬಂಧವ್ಯತಿಷಕ್ತಮಲ್ಲಿಕಾಂ
ಬೃಹನ್ನಿತಂಬಸ್ತನಕೃಚ್ಛ್ರಮಧ್ಯಮಾಮ್ ।
ಸುವಾಸಸಂ ಕಂಪಿತಕರ್ಣಭೂಷಣ-
ತ್ವಿಷೋಲ್ಲಸತ್ಕುಂತಲಮಂಡಿತಾನನಾಮ್ ॥ ೫ ॥

ವಲ್ಗುಸ್ಮಿತಾಪಾಂಗವಿಸರ್ಗವೀಕ್ಷಿತೈ-
ರ್ಮನೋ ಹರಂತೀಂ ವನಿತಾಂ ವ್ರಜೌಕಸಾಮ್ ।
ಅಮಂಸತಾಂಭೋಜಕರೇಣ ರೂಪಿಣೀಂ
ಗೋಪ್ಯಃ ಶ್ರಿಯಂ ದ್ರಷ್ಟುಮಿವಾಗತಾಂ ಪತಿಮ್ ॥ ೬ ॥

ಪೂತನೆಯು ಬಾಲಕರಿಗೆ ಬಾಲಗ್ರಹದಂತಿದ್ದಳು. ಆಕೆಯು ಅಲ್ಲಲ್ಲಿ ಬಾಲಕರನ್ನು ಹುಡುಕುತ್ತಾ ಅನಾಯಾಸವಾಗಿ ನಂದಗೋಪನ ಮನೆಯಲ್ಲಿ ನುಗ್ಗಿದಳು. ಬಾಲಕನಾದ ಶ್ರೀಕೃಷ್ಣನು ಹಾಸಿಗೆಯ ಮೇಲೆ ಮಲಗಿದ್ದನು. ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ದುಷ್ಟರಿಗೆ ಕಾಲಸ್ವರೂಪನಾಗಿದ್ದನು. ಆದರೆ ಬೂದಿಯರಾಶಿಯಲ್ಲಿ ಬೆಂಕಿಯು ಅಡಗಿರುವಂತೆ ಆಗ ಅವನು ತನ್ನ ಪ್ರಚಂಡ ತೇಜಸ್ಸನ್ನು ಅಡಗಿಸಿಕೊಂಡಿದ್ದನು. ॥ ೭ ॥

ಬಾಲಗ್ರಹಸ್ತತ್ರ ವಿಚಿನ್ವತೀ ಶಿಶೂ-
ನ್ಯದೃಚ್ಛಯಾ ನಂದಗೃಹೇಽಸದಂತಕಮ್ ।
ಬಾಲಂ ಪ್ರತಿಚ್ಛನ್ನನಿಜೋರುತೇಜಸಂ
ದದರ್ಶ ತಲ್ಪೇಽಗ್ನಿಮಿವಾಹಿತಂ ಭಸಿ ॥ ೭ ॥

ವಿಬುಧ್ಯ ತಾಂ ಬಾಲಕಮಾರಿಕಾಗ್ರಹಂ
ಚರಾಚರಾತ್ಮಾಽಽಸ ನಿಮೀಲಿತೇಕ್ಷಣಃ ।
ಅನಂತಮಾರೋಪಯದಂಕಮಂತಕಂ
ಯಥೋರಗಂ ಸುಪ್ತಮಬುದ್ಧಿರಜ್ಜುಧೀಃ ॥ ೮ ॥

ತಾಂ ತೀಕ್ಷ್ಣಚಿತ್ತಾಮತಿವಾಮಚೇಷ್ಟಿತಾಂ
ವೀಕ್ಷ್ಯಾಂತರಾ ಕೋಶಪರಿಚ್ಛದಾಸಿವತ್ ।
ವರಸ್ತ್ರಿಯಂ ತತ್ಪ್ರಭಯಾ ಚ ಧರ್ಷಿತೇ
ನಿರೀಕ್ಷಮಾಣೇ ಜನನೀ ಹ್ಯತಿಷ್ಠತಾಮ್ ॥ ೯ ॥

ತಸ್ಮಿನ್ ಸ್ತನಂ ದುರ್ಜರವೀರ್ಯಮುಲ್ಬಣಂ
ಘೋರಾಂಕಮಾದಾಯ ಶಿಶೋರ್ದದಾವಥ ।
ಗಾಢಂ ಕರಾಭ್ಯಾಂ ಭಗವಾನ್ಪ್ರಪೀಡ್ಯ ತತ್
ಪ್ರಾಣೈಃ ಸಮಂ ರೋಷಸಮನ್ವಿತೋಽಪಿಬತ್ ॥ ೧೦ ॥

ಸಾ ಮುಂಚ ಮುಂಚಾಲಮಿತಿ ಪ್ರಭಾಷಿಣೀ
ನಿಷ್ಪೀಡ್ಯಮಾನಾಖಿಲಜೀವಮರ್ಮಣಿ ।
ವಿವೃತ್ಯ ನೇತ್ರೇ ಚರಣೌ ಭುಜೌ ಮುಹುಃ
ಪ್ರಸ್ವಿನ್ನಗಾತ್ರಾ ಕ್ಷಿಪತೀ ರುರೋದ ಹ ॥ ೧೧ ॥

ತಸ್ಯಾಃ ಸ್ವನೇನಾತಿಗಭೀರರಂಹಸಾ
ಸಾದ್ರಿರ್ಮಹೀ ದ್ಯೌಶ್ಚ ಚಚಾಲ ಸಗ್ರಹಾ ।
ರಸಾ ದಿಶಶ್ಚ ಪ್ರತಿನೇದಿರೇ ಜನಾಃ
ಪೇತುಃ ಕ್ಷಿತೌ ವಜ್ರನಿಪಾತಶಂಕಯಾ ॥ ೧೨ ॥

ನಿಶಾಚರೀತ್ಥಂ ವ್ಯಥಿತಸ್ತನಾ ವ್ಯಸು-
ರ್ವ್ಯಾದಾಯ ಕೇಶಾಂಶ್ಚರಣೌ ಭುಜಾವಪಿ ।
ಪ್ರಸಾರ್ಯ ಗೋಷ್ಠೇ ನಿಜರೂಪಮಾಸ್ಥಿತಾ
ವಜ್ರಾಹತೋ ವೃತ್ರ ಇವಾಪತನ್ನೃಪ ॥ ೧೩ ॥

ಭಗವಾನ್ ಶ್ರೀಕೃಷ್ಣನು ಚರಾಚರ ಪ್ರಾಣಿಗಳೆಲ್ಲರ ಆತ್ಮನಾಗಿರುವನು. ಆದರಿಂದ ಬಳಿಗೆ ಬಂದಿರುವ ಇವಳು ಮಕ್ಕಳನ್ನು ಕೊಲ್ಲುವಂತಹ ಬಾಲಘಾತಿನಿ ಎಂಬುದನ್ನು ಕ್ಷಣಮಾತ್ರದಲ್ಲಿ ಅರಿತು ತನ್ನ ಕಣ್ಣುಗಳನ್ನು ಮುಚ್ಚಿಕೊಂಡನು. ಯಾರಾದರೂ ಭ್ರಮೆಯಿಂದ ಮಲಗಿದ ಸರ್ಪವನ್ನು ಹಗ್ಗವೆಂದು ಬಗೆದು ಎತ್ತಿಕೊಳ್ಳುವಂತೆಯೇ ತನ್ನ ಕಾಲಸ್ವರೂಪನಾದ ಭಗವಾನ್ ಶ್ರೀಕೃಷ್ಣನನ್ನು ಪೂತನೆಯು ಎತ್ತಿಕೊಂಡು ತನ್ನ ತೊಡೆಯಲ್ಲಿ ಇರಿಸಿಕೊಂಡಳು. ॥ ೮ ॥ ಒರೆಯಲ್ಲಿರುವ ತೀಕ್ಷ್ಣವಾದ ಅಲಗುಳ್ಳ ಕತ್ತಿಯಂತೆ ಪೂತನೆಯ ಹೃದಯವು ಅತ್ಯಂತ ಕಠೋರವೂ, ಕುಟಿಲವೂ ಆಗಿತ್ತು. ಆದರೆ ಬಹಿರಂಗದಲ್ಲಿ ಮಾತ್ರ ಅವಳು ಮಧುರವೂ, ಸುಂದರವೂ ಆದ ವ್ಯವಹಾರಗಳನ್ನು ಮಾಡುತ್ತಿದ್ದಳು. ನೋಡಲು ಆಕೆಯು ಓರ್ವ ಭದ್ರಮಹಿಳೆಯಂತೆ ಕಂಡುಬರುತ್ತಿದ್ದಳು. ಆದರಿಂದಾಗಿ ರೋಹಿಣಿಯಾಗಲೀ, ಯಶೋದೆಯಾಗಲೀ ಅವಳು ಮನೆಯೊಳಗೆ ಬಂದಾಗ ಆಕೆಯನ್ನು ತಡೆಯದೆ ಅವಳ ಸೌಂದರ್ಯ ಪ್ರಭೆಯಿಂದ ಬೆರಗಾಗಿ ಸುಮ್ಮನೆ ನಿಂತು ನೋಡುತ್ತಿದ್ದರು. ॥ ೯ ॥ ಇತ್ತ ಭಯಂಕರಳಾದ ರಾಕ್ಷಸಿ ಪೂತನೆಯು ಬಾಲಕ ಶ್ರೀಕೃಷ್ಣನನ್ನು ತನ್ನ ತೊಡೆಯಲ್ಲಿ ಮಲಗಿಸಿಕೊಂಡು ಅವನ ಬಾಯಿಯಲ್ಲಿ ತನ್ನ ಸ್ತನವನ್ನಿಟ್ಟಳು. ಆದರಲ್ಲಿ ಭಯಂಕರವಾದ ಮತ್ತು ಯಾವ ರೀತಿಯಿಂದಲೂ ಅರಗದೇ ಇರುವ ವಿಷವನ್ನು ಲೇಪಿಸಿಕೊಂಡಿದ್ದಳು. ಅವಳ ದುಷ್ಟತನವನ್ನು ನೋಡಿ ಅತ್ಯಂತ ರುಷ್ಟನಾದ ಶ್ರೀಕೃಷ್ಣನು ಅವಳ ಸ್ತನಗಳನ್ನು ತನ್ನ ಪುಟ್ಟದಾದ ಎರಡು ಕೈಗಳಿಂದಲೂ ಗಟ್ಟಿಯಾಗಿ ಹಿಡಿದು ಅವಳ ಪ್ರಾಣಗಳೊಡನೆಯೇ ಸ್ತನ್ಯಪಾನ ಮಾಡಿದನು. ॥ ೧೦ ॥ ಆಕೆಯ ಸ್ತನ್ಯದ ಜೊತೆಯಲ್ಲೇ ಪ್ರಾಣಗಳನ್ನೂ ಹೀರುತ್ತಿದ್ದಂತೆ ರಾಕ್ಷಸಿಯ ಮರ್ಮಸ್ಥಾನಗಳೆಲ್ಲ ಶಿಥಿಲಗೊಂಡವು. 'ಅಯ್ಯೋ ! ಬಿಡು ! ಬಿಟ್ಟುಬಿಡು ! ನನ್ನ ಪ್ರಾಣಪಕ್ಷಿಯೇ ಹಾರಿಹೋಗುತ್ತಿದೆ, ಸಾಕುಮಾಡು ! ಎಂದು ರಾಕ್ಷಸಿಯು ಗಟ್ಟಿಯಾಗಿ ಅರಚುತ್ತಿದ್ದಳು. ಕಣ್ಣುಗಳು ಅಗಲವಾಗಿ ಬಿಟ್ಟುಕೊಂಡು, ಬೆವರಿನಿಂದ ತೊಯ್ದುಹೋಗಿ, ಕೈ-ಕಾಲುಗಳನ್ನು ಬಡಿಯುತ್ತಾ ಇದ್ದಳು. ॥ ೧೧ ॥ ಆಕೆಯ ಭಯಂಕರವಾದ ಮತ್ತು ರಭಸದಿಂದ ಕೂಡಿದ ಕಿರುಚಾಟಕ್ಕೆ ಪರ್ವತಗಳಿಂದ ಕೂಡಿದ ಭೂಮಿಯೂ, ಗ್ರಹಗಳಿಂದ ಕೂಡಿದ ಅಂತರಿಕ್ಷವೂ ನಡುಗಿದವು. ಅವಳ ಘೋರವಾದ ಕೂಗಾಟವು ಹತ್ತು ದಿಕ್ಕುಗಳಲ್ಲಿಯೂ, ಏಳು ಪಾತಾಳಗಳಲ್ಲಿಯೂ ಪ್ರತಿಧ್ವನಿಸಿತು. ಅನೇಕ ಜನರು ಸಿಡಿಲು ಬಿದ್ದಿತೆಂಬ ಭಯದಿಂದ ಭೂಮಿಗುರುಳಿದರು. ॥ ೧೨ ॥ ಪರೀಕ್ಷಿತನೇ ! ಈ ಪ್ರಕಾರ ನಿಶಾಚರಿಯಾದ ಪೂತನೆಯ ಸ್ತನಗಳಲ್ಲಿ ಉಂಟಾದ ಅತೀವ ನೋವಿನಿಂದ ತನ್ನನ್ನು ಮರೆಮಾಚಿಕೊಳ್ಳದೆ ರಾಕ್ಷಸಿಯಾಗಿ ಪ್ರಕಟಗೊಂಡಳು. ಆಕೆಯ ಶರೀರದಿಂದ ಪ್ರಾಣಗಳು ಹೊರಟುಹೋದುವು. ತೆರೆಯಲ್ಪಟ್ಟ ಬಾಯಿಯಿಂದ, ಕೆದರಿದ ಕೂದಲಿನಿಂದ, ಕೈಕಾಲುಗಳನ್ನು ಚಾಚಿಕೊಂಡು ವಜ್ರಾಹತನಾದ ವೃತ್ರಾಸುರನಂತೆ ಗೊಲ್ಲರಹಳ್ಳಿಯ ಪಕ್ಕದಲ್ಲಿ ಬಿದ್ದುಬಿಟ್ಟಳು. ॥ ೧೩ ॥

ಪತಮಾನೋಽಪಿ ತದ್ದೇಹಸ್ತ್ರಿಗವ್ಯೂತ್ಯಂತರದ್ರುಮಾನ್ ।
ಚೂರ್ಣಯಾಮಾಸ ರಾಜೇಂದ್ರ ಮಹದಾಸೀತ್ತದದ್ಭುತಮ್
॥ ೧೪ ॥

ಈಷಾಮಾತ್ರೋಗ್ರದಂಷ್ಟ್ರಾಸ್ಯಂ ಗಿರಿಕಂದರನಾಸಿಕಮ್ ।
ಗಂಡಶೈಲಸ್ತನಂ ರೌದ್ರಂ ಪ್ರಕೀರ್ಣಾರುಣಮೂರ್ಧಜಮ್
॥ ೧೫ ॥

ಅಂಧಕೂಪಗಭೀರಾಕ್ಷಂ ಪುಲಿನಾರೋಹಭೀಷಣಮ್ ।
ಬದ್ಧಸೇತುಭುಜೋರ್ವಂಘ್ರಿ ಶೂನ್ಯತೋಯಹ್ರದೋದರಮ್
॥ ೧೬ ॥

ಸಂತತ್ರಸುಃ ಸ್ಮ ತದ್ವೀಕ್ಷ್ಯ ಗೋಪಾ ಗೋಪ್ಯಃ ಕಲೇವರಮ್ ।
ಪೂರ್ವಂ ತು ತನ್ನಿಃಸ್ವನಿತಭಿನ್ನಹೃತ್ಕರ್ಣಮಸ್ತಕಾಃ
॥ ೧೭ ॥

ಬಾಲಂ ಚ ತಸ್ಯಾ ಉರಸಿ ಕ್ರೀಡಂತಮಕುತೋಭಯಮ್ ।
ಗೋಪ್ಯಸ್ತೂರ್ಣಂ ಸಮಭ್ಯೇತ್ಯ ಜಗೃಹುರ್ಜಾತಸಂಭ್ರಮಾಃ
॥ ೧೮ ॥

ಯಶೋದಾರೋಹಿಣೀಭ್ಯಾಂ ತಾಃ ಸಮಂ ಬಾಲಸ್ಯ ಸರ್ವತಃ ।
ರಕ್ಷಾಂ ವಿದಧಿರೇ ಸಮ್ಯಗ್ಗೋಪುಚ್ಛಭ್ರಮಣಾದಿಭಿಃ
॥ ೧೯ ॥

ಗೋಮೂತ್ರೇಣ ಸ್ನಾಪಯಿತ್ವಾ ಪುನರ್ಗೋರಜಸಾರ್ಭಕಮ್ ।
ರಕ್ಷಾಂ ಚಕ್ರುಶ್ಚ ಶಕೃತಾ ದ್ವಾದಶಾಂಗೇಷು ನಾಮಭಿಃ
॥ ೨೦ ॥

ಗೋಪ್ಯಃ ಸಂಸ್ಪೃಷ್ಟಸಲಿಲಾ ಅಂಗೇಷು ಕರಯೋಃ ಪೃಥಕ್ ।
ನ್ಯಸ್ಯಾತ್ಮನ್ಯಥ ಬಾಲಸ್ಯ ಬೀಜನ್ಯಾಸಮಕುರ್ವತ
॥ ೨೧ ॥

ರಾಜೇಂದ್ರನೇ ! ಪೂತನೆಯ ರಾಕ್ಷಸೀ ಶರೀರವು ಬೀಳುತ್ತಿರುವಾಗ ಆರು ಗಾವುದದೊಳಗಿನ ಮರ-ಗಿಡ-ಬಳ್ಳಿಗಳು ನುಚ್ಚುನೂರಾದವು. ಇದೊಂದು ಪರಮಾದ್ಭುತ ಘಟನೆಯಾಗಿ ಕಂಡಿತು. ॥ ೧೪ ॥ ಪೂತನೆಯ ಶರೀರವು ಅತಿ ಭಯಂಕರವಾಗಿತ್ತು. ಆಕೆಯ ಮುಖದಲ್ಲಿ ನೇಗಿಲಿನಂತಹ ತೀಕ್ಷ್ಣವಾದ ಕೋರೆದಾಡೆಗಳಿದ್ದವು. ಮೂಗಿನ ಹೊಳ್ಳೆಗಳು ಪರ್ವತದ ಗುಹೆಯಂತೆ ವಿಶಾಲವೂ ಆಳವೂ ಆಗಿದ್ದವು. ಸ್ತನಗಳು ಪರ್ವತದಿಂದ ಉರುಳಿದ ದೊಡ್ಡ ಬಂಡೆಗಳಂತೆ ಸ್ಥೂಲವಾಗಿದ್ದವು. ಅವಳ ಕೆಂಪಾದ ತಲೆಗೂದಲು ಕೆದರಿಕೊಂಡಿತ್ತು. ॥ ೧೫ ॥ ಅವಳ ಕಣ್ಣುಗಳು ಪಾಳುಬಾವಿಯಂತೆ ಗುಳಿಬಿದ್ದಿದ್ದವು. ನಿತಂಬಗಳು ನದಿಯಲ್ಲಿನ ಮರಳು ದಿನ್ನೆಯಂತೆ ಎತ್ತರವಾಗಿಯೂ, ಭಯಂಕರವಾಗಿಯೂ ಇದ್ದವು. ತೋಳು-ತೊಡೆಗಳು-ಕಾಲುಗಳು ನದಿಗೆ ಕಟ್ಟಿದ ಸೇತುವೆಯಂತಿದ್ದವು. ಹೊಟ್ಟೆಯು ಒಣಗಿದ ಸರೋವರದಂತೆ ಕಂಡುಬರುತ್ತಿತ್ತು. ॥ ೧೬ ॥ ಪೂತನೆಯ ಘೋರ ಶರೀರವನ್ನು ನೋಡಿ ಎಲ್ಲ ಗೋಪಾಲಕರೂ, ಗೋಪಿಯರೂ ಭಯಗೊಂಡರು. ಆಕೆಯ ಭಯಂಕರ ಕೂಗಾಟವನ್ನು ಕೇಳಿದ ಅವರ ಹೃದಯ, ಕಿವಿಗಳು, ತಲೆಗಳೂ ಮೊದಲೇ ಒಡೆದಂತಾಗಿದ್ದವು. ॥ ೧೭ ॥ ಅಂತಹ ಬೃಹದಾಕಾರವಾದ ಪೂತನೆಯ* ವಕ್ಷಸ್ಥಳದಲ್ಲಿ ಪುಟ್ಟ ಶ್ರೀಕೃಷ್ಣನು ನಿರ್ಭಯನಾಗಿ ಆಡುತ್ತಿರುವುದನ್ನು ನೋಡಿದ ಗೋಪಿಯರು ಗಾಬರಿಗೊಂಡು ಒಡನೆಯೇ ಅವಸರದಿಂದ ಮಗುವನ್ನೆತ್ತಿಕೊಂಡರು. ॥ ೧೮ ॥ ಇದಾದ ಬಳಿಕ ಯಶೋದೆ ಮತ್ತು ರೋಹಿಣಿಯರೊಂದಿಗೆ ಗೋಪಿಯರು ಹಸುವಿನ ಬಾಲದಿಂದ ಬಾಲಕೃಷ್ಣನಿಗೆ ನಿವಾಳಿಸಿ, ಎಲ್ಲ ರೀತಿಯಿಂದ ರಕ್ಷೆಯನ್ನು ಮಾಡಿದರು. ॥ ೧೯ ॥ ಮೊದಲಿಗೆ ಬಾಲಕೃಷ್ಣನನ್ನು ಗೋಮೂತ್ರದಿಂದ ಸ್ನಾನಮಾಡಿಸಿದರು. ಮತ್ತೆ ಅವನ ಎಲ್ಲ ಅಂಗಾಂಗಗಳಿಗೆ ಗೋಧೂಳಿಯನ್ನು ಹಚ್ಚಿ ಹನ್ನೆರಡೂ ಅಂಗಗಳಿಗೆ ಸೆಗಣಿಯನ್ನು ಹಚ್ಚಿ, ಭಗವಂತನ ಕೇಶವಾದಿ ದ್ವಾದಶನಾಮಗಳಿಂದ ಅಭಿಮಂತ್ರಿಸಿ ರಕ್ಷೆಯನ್ನಿಟ್ಟರು.** ॥ ೨೦ ॥ ಅನಂತರ ಗೋಪಿಯರು ಆಚಮನಮಾಡಿ 'ಅಜಾದಿ ದ್ವಾದಶ ಬೀಜಮಂತ್ರಗಳಿಂದ ತಮ್ಮ ಶರೀರದಲ್ಲಿ ಬೇರೆ-ಬೇರೆಯಾಗಿ ಅಂಗನ್ಯಾಸ-ಕರನ್ಯಾಸವನ್ನು ಮಾಡಿಕೊಂಡು ಮತ್ತೆ ಬಾಲಕನ ಅಂಗಗಳಲ್ಲಿ ಬೀಜನ್ಯಾಸ ಮಾಡಿದರು. ॥ ೨೧ ॥

* ಬಲಿಚಕ್ರವರ್ತಿಗೆ ರತ್ನಮಾಲಾ ಎಂಬ ಕನ್ಯೆಯೊಬ್ಬಳಿದ್ದಳು. ಯಜ್ಞಶಾಲೆಯಲ್ಲಿ ವಾಮನ ಭಗವಂತನನ್ನು ನೋಡಿದ ಆಕೆಯ ಹೃದಯದಲ್ಲಿ ಪುತ್ರಸ್ನೇಹದ ಭಾವವು ಉದಯಿಸಿತು. ಇವನು ನನಗೆ ಸ್ತನ್ಯಪಾನಮಾಡುವಂತಹ ಬಾಲಕನಾದರೆ ನಾನು ಸಂತೋಷದಿಂದ ಇವನಿಗೆ ಸ್ತನ್ಯಪಾನಮಾಡಿಸುವೆ ಎಂದು ಮನಸ್ಸಿನಲ್ಲೇ ಅಂದುಕೊಂಡಳು. ವಾಮನ ಭಗವಂತನು ತನ್ನ ಭಕ್ತನಾದ ಬಲಿಯ ಪುತ್ರಿಯ ಈ ಮನೋರಥವನ್ನು ಮನಸ್ಸಿನಲ್ಲೇ ಅನುಮೋದಿಸಿದನು. ಆ ರತ್ನಮಾಲೆಯೇ ದ್ವಾಪರದಲ್ಲಿ ಪೂತನೆಯಾಗಿ ಹುಟ್ಟಿ, ಶ್ರೀಕೃಷ್ಣನ ಸ್ಪರ್ಶದಿಂದ ಅವಳ ಅಭಿಲಾಷೆ ಪೂರ್ಣಗೊಂಡಿತು.

** ಕೇಶವಾದಿ ಹನ್ನೆರಡು ನಾಮಗಳ ನ್ಯಾಸವು ಹೀಗಿದೆ :

**ಲಲಾಟೇ ಕೇಶವಂ ಧ್ಯಾಯೇನ್ನಾರಾಯಣಮಥೋದರೇ । ವಕ್ಷಃಸ್ಥಲೇ ಮಾಧವಂ ತು ಗೋವಿಂದಂ ಕಂಠಕೂಬರೇ ॥**
**ವಿಷ್ಣುಂ ಚ ದಕ್ಷಿಣೇ ಕುಕ್ಷೌ ಬಾಹೌ ಚ ಮಧುಸೂದನಮ್ । ತ್ರಿವಿಕ್ರಮಂ ಕಂದರೇ ತು ವಾಮನಂ ವಾಮಪಾರ್ಶ್ವಕೇ ॥**
**ಶ್ರೀಧರಂ ವಾಮಬಾಹೌ ತು ಹೃಷೀಕೇಶಂ ತು ಕಂಧರೇ । ಪೃಷ್ಠೇ ತು ಪದ್ಮನಾಭಂ ಚ ಕಟ್ಯಾಂ ದಾಮೋದರಂ ನ್ಯಸೇತ್ ॥**

ವಿಷ್ಣುಭಕ್ತರು ಪ್ರತಿದಿನವೂ ತಮ್ಮ ಹಣೆ, ಹೊಟ್ಟೆ, ಎದೆ, ಕಂಠದ ಮುಂಭಾಗ, ಬಲಹೊಟ್ಟೆ, ಬಲತೋಳು, ಕತ್ತಿನ ಹಿಂಭಾಗ, ಬಲಹೆಗಲು, ಎಡಪಕ್ಕ, ಎಡತೋಳು, ಎಡಹೆಗಲು, ಬೆನ್ನು, ನಡು – ಈ ಅಂಗಗಳಲ್ಲಿ ಅನುಕ್ರಮವಾಗಿ ಕೇಶವ, ನಾರಾಯಣ, ಮಾಧವ, ಗೋವಿಂದ, ವಿಷ್ಣು, ಮಧುಸೂದನ, ತ್ರಿವಿಕ್ರಮ, ವಾಮನ, ಶ್ರೀಧರ, ಹೃಷೀಕೇಶ, ಪದ್ಮನಾಭ, ದಾಮೋದರ – ಎಂಬ ನಾಮಗಳಿಂದ ನ್ಯಾಸಮಾಡಬೇಕು.

ಅವ್ಯಾದಜೋಂಘ್ರಿಮಣಿಮಾಂಸ್ತವ ಜಾನ್ವಥೋರೂ
ಯಜ್ಞೋಽಚ್ಯುತಃ ಕಟಿತಟಂ ಜಠರಂ ಹಯಾಸ್ಯಃ ।
ಹೃತ್ಕೇಶವಸ್ತ್ವದುರ ಈಶ ಇನಸ್ತು ಕಂಠಂ
ವಿಷ್ಣುರ್ಭುಜಂ ಮುಖಮುರುಕ್ರಮ ಈಶ್ವರಃ ಕಮ್
॥ ೨೨ ॥

ಚಕ್ರ್ಯಗ್ರತಃ ಸಹಗದೋ ಹರಿರಸ್ತು ಪಶ್ಚಾ-
ತ್ತ್ವತ್ಪಾರ್ಶ್ವಯೋರ್ಧನುರಸೀ ಮಧುಹಾಜನಶ್ಚ ।
ಕೋಣೇಷು ಶಂಖ ಉರುಗಾಯ ಉಪರ್ಯುಪೇಂದ್ರ-
ಸ್ತಾರ್ಕ್ಷ್ಯಃ ಕ್ಷಿತೌ ಹಲಧರಃ ಪುರುಷಃ ಸಮಂತಾತ್ ॥ ೨೩ ॥

ಇಂದ್ರಿಯಾಣಿ ಹೃಷೀಕೇಶಃ ಪ್ರಾಣಾನ್ನಾರಾಯಣೋಽವತು ।
ಶ್ವೇತದ್ವೀಪಪತಿಶ್ಚಿತ್ತಂ ಮನೋ ಯೋಗೇಶ್ವರೋಽವತು
॥ ೨೪ ॥

ಪೃಶ್ನಿಗರ್ಭಸ್ತು ತೇ ಬುದ್ಧಿಮಾತ್ಮಾನಂ ಭಗವಾನ್ಪರಃ ।
ಕ್ರೀಡಂತಂ ಪಾತು ಗೋವಿಂದಃ ಶಯಾನಂ ಪಾತು ಮಾಧವಃ
॥ ೨೫ ॥

ವ್ರಜಂತಮವ್ಯಾದ್ವೈಕುಂಠ ಆಸೀನಂ ತ್ವಾಂ ಶ್ರಿಯಃ ಪತಿಃ ।
ಭುಂಜಾನಂ ಯಜ್ಞಭುಕ್ಪಾತು ಸರ್ವಗ್ರಹಭಯಂಕರಃ
॥ ೨೬ ॥

ಡಾಕಿನ್ಯೋ ಯಾತುಧಾನ್ಯಶ್ಚ ಕೂಷ್ಮಾಂಡಾ ಯೇಽರ್ಭಕಗ್ರಹಾಃ ।
ಭೂತಪ್ರೇತಪಿಶಾಚಾಶ್ಚ ಯಕ್ಷರಕ್ಷೋವಿನಾಯಕಾಃ
॥ ೨೭ ॥

ಕೋಟರಾ ರೇವತೀ ಜ್ಯೇಷ್ಠಾ ಪೂತನಾ ಮಾತೃಕಾದಯಃ ।
ಉನ್ಮಾದಾ ಯೇ ಹ್ಯಪಸ್ಮಾರಾ ದೇಹಪ್ರಾಣೇಂದ್ರಿಯದ್ರುಹಃ
॥ ೨೮ ॥

ಸ್ವಪ್ನದೃಷ್ಟಾ ಮಹೋತ್ಪಾತಾ ವೃದ್ಧಬಾಲಗ್ರಹಾಶ್ಚ ಯೇ ।
ಸರ್ವೇ ನಶ್ಯಂತು ತೇ ವಿಷ್ಣೋರ್ನಾಮಗ್ರಹಣಭೀರವಃ
॥ ೨೯ ॥

*ಶ್ರೀಶುಕ ಉವಾಚ*

ಇತಿ ಪ್ರಣಯಬದ್ಧಾಭಿರ್ಗೋಪೀಭಿಃ ಕೃತರಕ್ಷಣಮ್ ।
ಪಾಯಯಿತ್ವಾಸ್ತನಂ ಮಾತಾ ಸಂನ್ಯವೇಶಯದಾತ್ಮಜಮ್
॥ ೩೦ ॥

ತಾವನ್ನಂದಾದಯೋ ಗೋಪಾ ಮಥುರಾಯಾ ವ್ರಜಂ ಗತಾಃ ।
ವಿಲೋಕ್ಯ ಪೂತನಾದೇಹಂ ಬಭೂವುರತಿವಿಸ್ಮಿತಾಃ
॥ ೩೧ ॥

ನೂನಂ ಬತರ್ಷಿಃ ಸಂಜಾತೋ ಯೋಗೇಶೋ ವಾ ಸಮಾಸ ಸಃ ।
ಸ ಏವ ದೃಷ್ಟೋ ಹ್ಯುತ್ಪಾತೋ ಯದಾಹಾನಕದುಂದುಭಿಃ
॥ ೩೨ ॥

ಅಜನ್ಮನಾದ ಭಗವಂತನು ನಿನ್ನ ಕಾಲುಗಳನ್ನೂ ರಕ್ಷಿಸಲಿ. ಮಣಿಮಂತನು ನಿನ್ನ ಮೊಣಕಾಲುಗಳನ್ನು ರಕ್ಷಿಸಲಿ. ಯಜ್ಞಪುರುಷನು ತೊಡೆಗಳನ್ನೂ, ಅಚ್ಯುತನು ಸೊಂಟವನ್ನೂ, ಹಯಗ್ರೀವನು ಹೊಟ್ಟೆಯನ್ನೂ, ಕೇಶವನು ಹೃದಯವನ್ನೂ ಈಶನು ವಕ್ಷಸ್ಥಳವನ್ನೂ, ಸೂರ್ಯನು ಕಂಠವನ್ನೂ, ವಿಷ್ಣುವು ಬಾಹುಗಳನ್ನೂ ಉರುಕ್ರಮನು ಮುಖವನ್ನೂ, ಈಶ್ವರನು ಶಿರಸ್ಸನ್ನೂ ರಕ್ಷಿಸಲಿ. ॥ ೨೨ ॥ ಚಕ್ರಿಯು ನಿನ್ನ ಮುಂಭಾಗವನ್ನು ರಕ್ಷಿಸಲಿ. ಗದಾಧರನು ನಿನ್ನ ಹಿಂಭಾಗವನ್ನೂ, ಧನುಸ್ಸನ್ನೂ, ಖಡ್ಗವನ್ನೂ, ಧರಿಸಿದ ಭಗವಾನ್ ಮಧುಸೂದನನೂ, ಅಜನೂ ಎರಡೂ ಪಾರ್ಶ್ವಗಳನ್ನೂ, ಶಂಖಧರನಾದ ಉರುಗಾಯನು ನಾಲ್ಕು ಮೂಲೆಗಳನ್ನೂ ಉಪೇಂದ್ರನು ಮೇಲೆಯೂ, ಗರುಡನು ಪೃಥ್ವಿಯ ಮೇಲೆಯೂ, ಭಗವಾನ್ ಪರಮಪುರುಷನಾದ ಹಲಧರನು ಎಲ್ಲ ಕಡೆಯಿಂದಲೂ ರಕ್ಷಿಸಲಿ. ॥ ೨೩ ॥ ಹೃಷೀಕೇಶನು ನಿನ್ನ ಇಂದ್ರಿಯಗಳನ್ನೂ ರಕ್ಷಿಸಲಿ. ನಾರಾಯಣನು ಪ್ರಾಣಗಳನ್ನು ರಕ್ಷಿಸಲಿ. ಚಿತ್ತವನ್ನು ಶ್ವೇತದ್ವೀಪದ ಒಡೆಯನು ರಕ್ಷಿಸಲಿ. ಯಜ್ಞೇಶ್ವರನು ಮನಸ್ಸನ್ನು ರಕ್ಷಿಸಲಿ. ॥ ೨೪ ॥ ಪೃಶ್ನಿಗರ್ಭನು ನಿನ್ನ ಬುದ್ಧಿಯನ್ನೂ, ನಿನ್ನ ಅಹಂಕಾರವನ್ನು ಭಗವಂತ ನಾದ ಪರಮಾತ್ಮನು ರಕ್ಷಿಸಲಿ. ಆಟವಾಡುತ್ತಿರುವಾಗ ಗೋವಿಂದನು ರಕ್ಷಿಸಲಿ. ಮಲಗಿರುವಾಗ ಮಾಧವನು ರಕ್ಷಿಸಲಿ. ॥ ೨೫ ॥ ನಡೆಯುವಾಗ ಭಗವಾನ್ ವೈಕುಂಠನೂ, ಕುಳಿತಿರುವಾಗ ಭಗವಾನ್ ಶ್ರೀಪತಿಯು ನಿನ್ನನ್ನು ರಕ್ಷಿಸಲಿ. ಸಮಸ್ತ ದುಷ್ಟಗ್ರಹಗಳಿಗೆ ಭಯವನ್ನು ಉಂಟುಮಾಡುವ ಯಜ್ಞಭುಜನು ಊಟಮಾಡುವಾಗ ನಿನ್ನನ್ನು ರಕ್ಷಿಸಲಿ. ॥ ೨೬ ॥ ಡಾಕಿನೀ, ಯಾತು ಧಾನಾ, ಕೂಷ್ಮಾಂಡಾ ಮುಂತಾದ ಬಾಲಗ್ರಹರು ; ಭೂತ, ಪ್ರೇತ, ಪಿಶಾಚ, ಯಕ್ಷ, ರಾಕ್ಷಸ, ವಿನಾಯಕ, ಕೋಟರಾ, ರೇವತೀ, ಜ್ಯೇಷ್ಠಾ, ಪೂತನಾ, ಮಾತೃಕಾ ಇವೇ ಮೊದಲಾದವುಗಳು ಶರೀರ, ಪ್ರಾಣ, ಇಂದ್ರಿಯಗಳನ್ನು ನಾಶಪಡಿಸುವಂತಹ ಉನ್ಮಾದ (ಹುಚ್ಚುತನ), ಅಪಸ್ಮಾರ (ಮೂರ್ಛೆ) ಮುಂತಾದ ರೋಗಗಳೂ ; ಸ್ವಪ್ನದಲ್ಲಿ ಕಾಣಿಸಿಕೊಳ್ಳುವ ಮಹಾ ಉತ್ಪಾತಗಳೂ, ವೃದ್ಧಗ್ರಹ ಬಾಲಗ್ರಹ ಮುಂತಾದವುಗಳೆಲ್ಲ ಅನಿಷ್ಟಗಳು ಭಗವಾನ್ ವಿಷ್ಣುವಿನ ನಾಮೋಚ್ಚಾರಣೆಯಿಂದ ಭಯಗೊಂಡು ನಾಶವಾಗಿ ಹೋಗಲಿ.
॥ ೨೭-೨೯ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಈ ಪ್ರಕಾರವಾಗಿ ಗೋಪಿಯರು ಪ್ರೇಮಪಾಶಕ್ಕೆ ಬಂಧಿತರಾಗಿ ಭಗವಾನ್ ಶ್ರೀಕೃಷ್ಣನಿಗೆ ರಕ್ಷೆಯನ್ನಿಟ್ಟರು. ತಾಯಿ ಯಶೋದೆಯು ತನ್ನ ಮಗುವಿಗೆ ಹಾಲುಣಿಸಿ ತೊಟ್ಟಿಲಲ್ಲಿ ಮಲಗಿಸಿದಳು. ॥ ೩೦ ॥ ಇದೇ ಸಮಯಕ್ಕೆ ನಂದಗೋಪನೂ ಅವನ ಸಂಗಡಿಗರೂ ಮಥುರೆಯಿಂದ ಗೋಕುಲಕ್ಕೆ ಬಂದು ತಲುಪಿದರು. ಅವರು ಪೂತನೆಯ ಭಯಂಕರ ಶರೀರವನ್ನು ನೋಡಿ ಆಶ್ಚರ್ಯಚಕಿತರಾದರು.॥ ೩೧ ॥ ಇದು ನಿಶ್ಚಯವಾಗಿಯೂ ಆಶ್ಚರ್ಯದ ಸಂಗತಿಯಾಗಿದೆ. ಖಂಡಿತವಾಗಿಯೂ ವಸುದೇವನ ರೂಪದಲ್ಲಿ ಯಾರೋ ಋಷಿಯೇ ಹುಟ್ಟಿರಬೇಕು. ಅಥವಾ ವಸುದೇವನು ಹಿಂದಿನ ಜನ್ಮದಲ್ಲಿ ಯಾರೋ ಯೋಗೇಶ್ವರನಾಗಿರುವ ಸಂಭವವೂ ಇದೆ. ಏಕೆಂದರೆ, ಅವನು ಹೇಳಿದಂತೆಯೇ ಇಲ್ಲಿ ಉತ್ಪಾತವನ್ನು ನೋಡುತ್ತಿದ್ದೇವೆ. ॥ ೩೨ ॥

ಕಲೇವರಂ ಪರಶುಭಿಶ್ಛಿತ್ತ್ವಾ ತತ್ತೇ ವ್ರಜೌಕಸಃ ।
ದೂರೇ ಕ್ಷಿಪ್ತ್ವಾವಯವಶೋ ನ್ಯದಹನ್ಕಾಷ್ಠಧಿಷ್ಠಿತಮ್
॥ ೩೩ ॥

ದಹ್ಯಮಾನಸ್ಯ ದೇಹಸ್ಯ ಧೂಮಶ್ಚಾಗುರುಸೌರಭಃ ।
ಉತ್ಥಿತಃ ಕೃಷ್ಣನಿರ್ಭುಕ್ತಸಪದ್ಯಾಹತಪಾಪ್ಮನಃ
॥ ೩೪ ॥

ಪೂತನಾ ಲೋಕಬಾಲಘ್ನೀ ರಾಕ್ಷಸೀ ರುಧಿರಾಶನಾ ।
ಜಿಘಾಂಸಯಾಪಿ ಹರಯೇ ಸ್ತನಂ ದತ್ತ್ವಾಽಽಪ ಸದ್ಗತಿಮ್
॥ ೩೫ ॥

ಕಿಂ ಪುನಃ ಶ್ರದ್ಧಯಾ ಭಕ್ತ್ಯಾ ಕೃಷ್ಣಾಯ ಪರಮಾತ್ಮನೇ ।
ಯಚ್ಛನ್ಪ್ರಿಯತಮಂ ಕಿಂ ನು ರಕ್ತಾಸ್ತನ್ಮಾತರೋ ಯಥಾ
॥ ೩೬ ॥

ಪದ್ಭ್ಯಾಂ ಭಕ್ತಹೃದಿಸ್ಥಾಭ್ಯಾಂ ವಂದ್ಯಾಭ್ಯಾಂ ಲೋಕವಂದಿತೈಃ ।
ಅಂಗಂ ಯಸ್ಯಾಃ ಸಮಾಕ್ರಮ್ಯ ಭಗವಾನಪಿಬತ್ಸ್ತನಮ್
॥ ೩೭ ॥

ಯಾತುಧಾನ್ಯಪಿ ಸಾ ಸ್ವರ್ಗಮವಾಪ ಜನನೀಗತಿಮ್ ।
ಕೃಷ್ಣಭುಕ್ತಸ್ತನಕ್ಷೀರಾಃ ಕಿಮು ಗಾವೋ ನು ಮಾತರಃ
॥ ೩೮ ॥

ಪಯಾಂಸಿ ಯಾಸಾಮಪಿಬತ್ಪುತ್ರಸ್ನೇಹಸ್ನುತಾನ್ಯಲಮ್ ।
ಭಗವಾನ್ದೇವಕೀಪುತ್ರಃ ಕೈವಲ್ಯಾದ್ಯಖಿಲಪ್ರದಃ
॥ ೩೯ ॥

ತಾಸಾಮವಿರತಂ ಕೃಷ್ಣೇ ಕುರ್ವತೀನಾಂ ಸುತೇಕ್ಷಣಮ್ ।
ನ ಪುನಃ ಕಲ್ಪತೇ ರಾಜನ್ಸಂಸಾರೋಽಜ್ಞಾನಸಂಭವಃ
॥ ೪೦ ॥

ಕಟುಧೂಮಸ್ಯ ಸೌರಭ್ಯಮವಘ್ರಾಯ ವ್ರಜೌಕಸಃ ।
ಕಿಮಿದಂ ಕುತ ಏವೇತಿ ವದಂತೋ ವ್ರಜಮಾಯಯುಃ
॥ ೪೧ ॥

ತೇ ತತ್ರ ವರ್ಣಿತಂ ಗೋಪೈಃ ಪೂತನಾಗಮನಾದಿಕಮ್ ।
ಶ್ರುತ್ವಾ ತನ್ನಿಧನಂ ಸ್ವಸ್ತಿ ಶಿಶೋಶ್ಚಾಸನ್ಸುವಿಸ್ಮಿತಾಃ
॥ ೪೨ ॥

ಆಷ್ಟರಲ್ಲಿ ವ್ರಜವಾಸಿಗಳೆಲ್ಲ ಸೇರಿ ಕೊಡಲಿಯಿಂದ ಪೂತನೆಯ ಶರೀರವನ್ನು ತುಂಡು-ತುಂಡಾಗಿಸಿ, ಗೋಕುಲದಿಂದ ದೂರಕ್ಕೆ ಕೊಂಡುಹೋಗಿ ಕಟ್ಟಿಗೆಗಳ ಮೇಲಿರಿಸಿ ಸುಟ್ಟುಬಿಟ್ಟರು. ॥ ೩೩ ॥ ಆಕೆಯ ಶರೀರವು ಹೊತ್ತಿ ಉರಿಯತೊಡಗಿದಾಗ ಅದರಿಂದ ಅಗರುವಿನ ಸುವಾಸನೆಹೊಂದಿದ ಹೊಗೆಯು ಹೊರಹೊಮ್ಮಿತು. ಇದರಲ್ಲಿ ಆಶ್ಚರ್ಯವೇನಿದೆ ? ಭಗವಂತನೇ ಅವಳ ಸ್ತನ್ಯವನ್ನು ಕುಡಿದ ಕಾರಣ ಅವಳಲ್ಲಿದ್ದ ಪಾಪಗಳೆಲ್ಲವೂ ಕ್ಷಣಮಾತ್ರದಲ್ಲಿ ನಾಶವಾಗಿ ಹೋಗಿದ್ದವು. ॥ ೩೪ ॥ ಪೂತನೆಯು ಓರ್ವ ರಾಕ್ಷಸಿ ಯಾಗಿದ್ದಳು. ಜನರ ಮಕ್ಕಳನ್ನು ಕೊಲ್ಲುವುದು, ಅವರ ರಕ್ತ ಕುಡಿಯುವುದು ಇದೇ ಅವಳ ಕೆಲಸವಾಗಿತ್ತು. ಭಗವಂತನನ್ನೂ ಕೊಂದುಹಾಕಲೆಂದೇ ಅವಳು ಸ್ತನ್ಯವನ್ನು ಕುಡಿಸಿದ್ದಳು. ಹೀಗಿದ್ದರೂ ಅವಳಿಗೆ ಸತ್ಪುರುಷರಿಗೆ ಸಿಗುವ ಪರಮಗತಿಯು ದೊರೆಯಿತು.॥ ೩೫ ॥ ಇಂತಹ ಸ್ಥಿತಿಯಲ್ಲಿ ಪರಬ್ರಹ್ಮ ಪರಮಾತ್ಮ ಭಗವಾನ್ ಶ್ರೀಕೃಷ್ಣನನ್ನು ಶ್ರದ್ಧಾಭಕ್ತಿಯಿಂದ ತಾಯಿಯಂತೆ ಅನುರಾಗಪೂರ್ವಕ ತನಗೆ ಅತಿಪ್ರಿಯವಾದ ವಸ್ತುವನ್ನು ಹಾಗೂ ಅವನಿಗೆ ಪ್ರಿಯವಾಗುವ ವಸ್ತುವನ್ನು ಸಮರ್ಪಿಸುವವನ ಕುರಿತು ಹೇಳುವುದೇನಿದೆ ? ॥ ೩೬ ॥ ಎಲ್ಲರಿಗೆ ವಂದನೀಯರಾದ ಬ್ರಹ್ಮ ರುದ್ರರೇ ಆದಿ ದೇವತೆಗಳಿಂದ ವಂದಿತವಾದ ಭಗವಂತನ ಚರಣ ಕಮಲಗಳು ಭಕ್ತರ ಹೃದಯದ ಧನವಾಗಿದೆ. ಅಂತಹ ಚರಣ ಗಳಿಂದ ಭಗವಂತನು ಪೂತನೆಯ ಶರೀರವನ್ನು ಒತ್ತಿ ಅವಳ ಸ್ತನ್ಯವನ್ನು ಪಾನಮಾಡಿದ್ದನು. ॥ ೩೭ ॥ ಪೂತನೆಯು ರಾಕ್ಷಸಿಯೇ ಆಗಿದ್ದರೂ ಆಕೆಗೆ – ತಾಯಿಗೆ ಸಿಗಬೇಕಾದ ಉತ್ತಮೋತ್ತಮ ಗತಿಯು ಪ್ರಾಪ್ತವಾಯಿತು ಎಂದಾಗ ಯಾರ ಸ್ತನಗಳ ಹಾಲನ್ನು ಭಗವಂತನು ಅತಿ ಪ್ರೇಮದಿಂದ ಕುಡಿದನೋ, ಅಂತಹ ಗೋವು ಗಳ ಮತ್ತು ಮಾತೆಯರ ಕುರಿತು ಹೇಳುವುದೇನಿದೆ ? ॥ ೩೮ ॥ ಪರೀಕ್ಷಿತನೇ ! ದೇವಕೀನಂದನ ಭಗವಂತನು ಕೈವಲ್ಯವೇ ಮುಂತಾದ ಎಲ್ಲ ರೀತಿಯ ಮುಕ್ತಿಯನ್ನು ಹಾಗೂ ಎಲ್ಲವನ್ನೂ ಕೊಡುವವನಾಗಿದ್ದಾನೆ. ಭಗವಂತನ ಕುರಿತು ಪುತ್ರಭಾವ ಇರುವುದ ರಿಂದ ವಾತ್ಸಲ್ಯ-ಸ್ನೇಹದ ಹೆಚ್ಚಳದಿಂದ ಸ್ವಯಂ ಸೋರುತ್ತಿರುವ ಗೋಪಿಯರ ಮತ್ತು ಗೋವುಗಳ ಹಾಲನ್ನು ಆ ಭಗವಂತನು ಹೊಟ್ಟೆತುಂಬಾ ಕುಡಿದನು. ॥ ೩೯ ॥ ಪರೀಕ್ಷಿದ್ರಾಜನೇ ! ಆ ಗೋವುಗಳು ಮತ್ತು ಗೋಪಿಯರು ನಿತ್ಯ-ನಿರಂತರವಾಗಿ ಭಗವಾನ್ ಶ್ರೀಕೃಷ್ಣನನ್ನು ತನ್ನ ಪುತ್ರನೆಂದೇ ತಿಳಿಯುತ್ತಿದ್ದರು. ಹಾಗಿರುವಾಗ ಅವರು ಜನ್ಮ-ಮೃತ್ಯುರೂಪವಾದ ಸಂಸಾರಚಕ್ರದಲ್ಲಿ ಎಂದಿಗೂ ಬೀಳಲಾರರು. ಏಕೆಂದರೆ, ಈ ಸಂಸಾರವಾದರೋ ಅಜ್ಞಾನದಿಂದಲೇ ಇದೆ. ॥ ೪೦ ॥

ನಂದಗೋಪನ ಜೊತೆಯಲ್ಲಿ ಬಂದಿರುವ ವ್ರಜವಾಸಿಗಳು ಚಿತೆಯಿಂದ ಬರುತ್ತಿದ್ದ ಸುಗಂಧಮಯ ಹೊಗೆಯನ್ನು ಆಘ್ರಾಣಿ ಸುತ್ತಲೇ 'ಇದೇನಿದು ?' ಈ ಸುವಾಸನೆಯು ಎಲ್ಲಿಂದ ಬರುತ್ತದೆ ಎಂದು ಹೇಳುತ್ತಾ ವ್ರಜವನ್ನು ಪ್ರವೇಶಿಸಿದರು. ॥ ೪೧ ॥ ಅಲ್ಲಿ ಗೋಪರು ಅವರಿಗೆ ಪೂತನೆಯು ಬಂದಂದಿನಿಂದ ಸಾಯುವ ವರೆಗಿನ ಎಲ್ಲ ವೃತ್ತಾಂತವನ್ನು ಹೇಳಿದರು. ಅವರೆಲ್ಲರೂ ಪೂತನೆಯ ಮೃತ್ಯು ಮತ್ತು ಶ್ರೀಕೃಷ್ಣನು ಕುಶಲವಾಗಿ ಬದುಕಿರುವ ಮಾತನ್ನು ಕೇಳಿ ತುಂಬಾ ಆಶ್ಚರ್ಯಚಕಿತರಾದರು. ॥ ೪೨ ॥

ನಂದಃ ಸ್ವಪುತ್ರಮಾದಾಯ ಪ್ರೇತ್ಯಾಗತಮುದಾರಧೀಃ ।
ಮೂರ್ಧ್ನ್ಯುಪಾಘ್ರಾಯ ಪರಮಾಂ ಮುದಂ ಲೇಭೇ ಕುರೂದ್ವಹ ॥ ೪೩ ॥

ಪರೀಕ್ಷಿತನೇ! ಉದಾರಶಿರೋಮಣಿಯಾದ ನಂದಗೋಪನು ಮೃತ್ಯುಮುಖದಿಂದ ಬಿಡುಗಡೆಹೊಂದಿದ ತನ್ನ ಮುದ್ದು ಕಂದನನ್ನೂ ತೊಡೆಯಲ್ಲೆತ್ತಿಕೊಂಡು ಪದೇ-ಪದೇ ಮಗುವಿನ ನೆತ್ತಿಯನ್ನು ಆಘ್ರಾಣಿಸುತ್ತಾ ಮನಸ್ಸಿನಲ್ಲೇ ಬಹಳ ಆನಂದಿತ ನಾದನು. ॥ ೪೩ ॥

ಯ ಏತತ್ಪೂತನಾಮೋಕ್ಷಂ ಕೃಷ್ಣಸ್ಯಾರ್ಭಕಮದ್ಭುತಮ್ ।
ಶೃಣುಯಾಚ್ಛ್ರದ್ಧಯಾ ಮರ್ತ್ಯೋ ಗೋವಿಂದೇ ಲಭತೇ ರತಿಮ್ ॥ ೪೪ ॥

ಈ 'ಪೂತನಾಮೋಕ್ಷವು' ಭಗವಾನ್ ಶ್ರೀಕೃಷ್ಣನ ಅದ್ಭುತವಾದ ಬಾಲಲೀಲೆಯಾಗಿದೆ. ಇದನ್ನು ಶ್ರದ್ಧೆಯಿಂದ ಶ್ರವಣಿಸುವವನಿಗೆ ಭಗವಾನ್ ಶ್ರೀಕೃಷ್ಣನಲ್ಲಿ ಅನುರಾಗವು ಉಂಟಾಗುವುದು. ॥ ೪೪ ॥

ಆರನೆಯ ಅಧ್ಯಾಯವು ಮುಗಿಯಿತು. ॥ ೬ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ ಷಷ್ಠೋಽಧ್ಯಾಯಃ ॥ ೬ ॥

# ಏಳನೆಯ ಅಧ್ಯಾಯ

## ಶಕಟಾಸುರ ಭಂಜನ ಮತ್ತು ತೃಣಾವರ್ತನ ಉದ್ಧಾರ

*ರಾಜೋವಾಚ*

ಯೇನ ಯೇನಾವತಾರೇಣ ಭಗವಾನ್ ಹರಿರೀಶ್ವರಃ ।
ಕರೋತಿ ಕರ್ಣರಮ್ಯಾಣಿ ಮನೋಜ್ಞಾನಿ ಚ ನಃ ಪ್ರಭೋ ॥ ೧ ॥

ಯಚ್ಛೃಣ್ವತೋಽಪೈತ್ಯರತಿರ್ವಿತೃಷ್ಣಾ
ಸತ್ತ್ವಂ ಚ ಶುದ್ಧ್ಯತ್ಯಚಿರೇಣ ಪುಂಸಃ ।
ಭಕ್ತಿರ್ಹರೌ ತತ್ಪುರುಷೇ ಚ ಸಖ್ಯಂ
ತದೇವ ಹಾರಂ ವದ ಮನ್ಯಸೇ ಚೇತ್ ॥ ೨ ॥

ಅಥಾನ್ಯದಪಿ ಕೃಷ್ಣಸ್ಯ ತೋಕಾಚರಿತಮದ್ಭುತಮ್ ।
ಮಾನುಷಂ ಲೋಕಮಾಸಾದ್ಯ ತಜ್ಜಾತಿಮನುರುಂಧತಃ ॥ ೩ ॥

**ಪರೀಕ್ಷಿದ್ರಾಜನು ಕೇಳುತ್ತಾನೆ** – ಪ್ರಭುವೇ! ಸರ್ವಶಕ್ತಿಮಂತನಾದ ಭಗವಾನ್ ಶ್ರೀಹರಿಯು ಅನೇಕ ಅವತಾರಗಳನ್ನೆತ್ತಿ ಅತ್ಯಂತ ಸುಂದರವಾದ ಮತ್ತು ಕರ್ಣಾನಂದಕರವಾದ ಲೀಲೆಗಳನ್ನು ಮಾಡುತ್ತಾನೆ. ಅವೆಲ್ಲವೂ ನನ್ನ ಮನಸ್ಸಿಗೆ ಬಹಳ ಆಪ್ಯಾಯಮಾನವನ್ನುಂಟುಮಾಡುತ್ತವೆ. ॥ ೧ ॥ ಅವುಗಳ ಶ್ರವಣಮಾತ್ರದಿಂದ ಕಷ್ಟಗಳು ದೂರವಾಗುತ್ತವೆ ಮತ್ತು ವಿವಿಧ ವಿಷಯಗಳ ತೃಷ್ಣೆಯು ಹೊರಟುಹೋಗುತ್ತದೆ. ಮನುಷ್ಯನ ಅಂತಃಕರಣವು ಬಹು ಬೇಗನೇ ಶುದ್ಧವಾಗಿ ಹೋಗುತ್ತದೆ. ಭಗವಂತನ ಚರಣಗಳಲ್ಲಿ ಭಕ್ತಿಯೂ, ಅವನ ಭಕ್ತರಲ್ಲಿ ಪ್ರೀತಿಯೂ ಉಂಟಾಗುತ್ತದೆ. ತಾವು ನನ್ನನ್ನು ಅವುಗಳ ಶ್ರವಣಕ್ಕೆ ಅಧಿಕಾರಿಯೆಂದು ತಿಳಿಯುತ್ತಿದ್ದರೆ ಭಗವಂತನ ಆ ಮನೋಹರವಾದ ಲೀಲೆಗಳನ್ನು ವರ್ಣಿಸಿರಿ. ॥ ೨ ॥ ಭಗವಾನ್ ಶ್ರೀಕೃಷ್ಣನು ಮನುಷ್ಯಲೋಕದಲ್ಲಿ ಅವತರಿಸಿ ಮನುಷ್ಯರ ಸ್ವಭಾವಗುಣಗಳನ್ನು ಅನುಕರಿಸುತ್ತಾ ಮಾಡಿದ ಬಾಲಲೀಲೆಗಳು ಪರಮಾದ್ಭುತವಾದವುಗಳು. ಅದಕ್ಕಾಗಿ ಈಗ ಅವನ ಇತರ ಬಾಲಲೀಲೆಗಳನ್ನೂ ವರ್ಣಿಸಿರಿ. ॥ ೩ ॥

*ಶ್ರೀಶುಕ ಉವಾಚ*

ಕದಾಚಿದೌತ್ಥಾನಿಕಕೌತುಕಾಪ್ಲವೇ
ಜನ್ಮರ್ಕ್ಷಯೋಗೇ ಸಮವೇತಯೋಷಿತಾಮ್ ।
ವಾದಿತ್ರಗೀತದ್ವಿಜಮಂತ್ರವಾಚಕೈ-
ಶ್ಚಕಾರ ಸೂನೋರಭಿಷೇಚನಂ ಸತೀ ॥ ೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಮುದ್ದುಕೃಷ್ಣನು ಮೂರು ತಿಂಗಳಿಗೆ ಸರಿಯಾಗಿ ಬೋರಲುಬಿದ್ದನು. ಅಂದಿಗೆ ಸರಿಯಾಗಿ ಅವನ ಜನ್ಮನಕ್ಷತ್ರ ರೋಹಿಣಿ ನಕ್ಷತ್ರದ ಯೋಗವಿತ್ತು. ಮಗುವಿಗೆ ನೀರೆರೆದು ಹಬ್ಬವನ್ನಾಚರಿಸುವ ಸಂಭ್ರಮ. ಹಲವಾರು ಗೋಪಿಯರು ನಂದಗೋಪನ ಮನೆಗೆ ಬಂದರು. ಕೆಲವರು ಸಂಪ್ರದಾಯದ ಹಾಡುಗಳನ್ನು ಹಾಡುತ್ತಿದ್ದರು. ಮಂಗಳವಾದ್ಯಗಳು ಮೊಳಗುತ್ತಿದ್ದುವು. ಗೋಪಿಯರ ಮಧ್ಯದಲ್ಲಿದ್ದ ಯಶೋದೆಯು ಮುದ್ದುಕೃಷ್ಣನಿಗೆ ನೀರೆರೆದಳು. ಬ್ರಾಹ್ಮಣರು ಮಂತ್ರಗಳನ್ನು ಹೇಳುತ್ತಾ ಆಶೀರ್ವದಿಸುತ್ತಿದ್ದರು. ॥ ೪ ॥

ನಂದಸ್ಯ ಪತ್ನೀ ಕೃತಮಜ್ಜನಾದಿಕಂ
ವಿಪ್ರೈಃ ಕೃತಸ್ವಸ್ತ್ಯಯನಂ ಸುಪೂಜಿತೈಃ ।
ಅನ್ನಾದ್ಯವಾಸಃಸ್ರಗಭೀಷ್ಟಧೇನುಭಿಃ
ಸಂಜಾತನಿದ್ರಾಕ್ಷಮಶೀಶಯಚ್ಛನೈಃ ॥ ೫ ॥

ನಂದ ರಾಣಿಯಾದ ಯಶೋದಾ ದೇವಿಯು ಬ್ರಾಹ್ಮಣರನ್ನು ಪೂಜಿಸಿ ಸಮ್ಮಾನಿಸಿದಳು. ಅವರಿಗೆ ಅನ್ನ, ವಸ್ತ್ರ, ಮಾಲೆ, ಗೋವುಗಳು ಮುಂತಾದ ಅವರ ಅಭೀಷ್ಟವಸ್ತುಗಳನ್ನು ದಾನಮಾಡಿದಳು. ಯಶೋದೆಯು ಆ ಬ್ರಾಹ್ಮಣರಿಂದ ಸ್ವಸ್ತಿವಾಚನ ಮಾಡಿಸಿ ನೀರೆರೆಯುವುದನ್ನು ಮುಗಿಸಿದಾಗ ಮುದ್ದುಕೃಷ್ಣನಿಗೆ ಕಣ್ಣುಗಳಲ್ಲಿ ನಿದ್ದೆ ತುಂಬಿದೆ ಎಂದು ನೋಡಿ ನಿಧಾನವಾಗಿ ಶಯ್ಯೆಯಲ್ಲಿ ಮಗುವನ್ನು ಮಲಗಿಸಿದಳು. ॥ ೫ ॥

ಔತ್ಥಾನಿಕೌತ್ಸುಕ್ಯಮನಾ ಮನಸ್ವಿನೀ
ಸಮಾಗತಾನ್ಪೂಜಯತೀ ವ್ರಜೌಕಸಃ ।
ನೈವಾಶೃಣೋದ್ವೈ ರುದಿತಂ ಸುತಸ್ಯ ಸಾ
ರುದನ್ ಸ್ತನಾರ್ಥೀ ಚರಣಾವುದಕ್ಷಿಪತ್ ॥ ೬ ॥

ಸ್ವಲ್ಪ ಸಮಯದಲ್ಲಿ ಶ್ಯಾಮಸುಂದರನು ಕಣ್ಣುತೆರೆದು ಸ್ತನ್ಯಪಾನಕ್ಕಾಗಿ ಅಳತೊಡಗಿದನು. ಆಗ ಮನಸ್ವಿನಿಯಾದ ಯಶೋದೆಯು ಉತ್ಸವಕ್ಕೆ ಬಂದಿರುವ ವ್ರಜವಾಸಿಗಳ ಸ್ವಾಗತ-ಸತ್ಕಾರದಲ್ಲಿ ತನ್ಮಯಳಾಗಿದ್ದಳು. ಇದರಿಂದ ಆಕೆಗೆ ಶ್ರೀಕೃಷ್ಣನ ಅಳುವು ಕೇಳಿಸಲಿಲ್ಲ. ಶ್ರೀಕೃಷ್ಣನು ಅಳುತ್ತಾ ಅಳುತ್ತಾ ಕಾಲುಗಳನ್ನು ಬಡಿಯತೊಡಗಿದನು. ॥ ೬ ॥

ಅಧಃ ಶಯಾನಸ್ಯ ಶಿಶೋರನೋಽಲ್ಪಕ-
ಪ್ರವಾಲಮೃದ್ವಂಘ್ರಿಹತಂ ವ್ಯವರ್ತತ ।
ವಿಧ್ವಸ್ತನಾನಾರಸಕುಪ್ಯಭಾಜನಂ
ವ್ಯತ್ಯಸ್ತಚಕ್ರಾಕ್ಷವಿಭಿನ್ನಕೂಬರಮ್ ॥ ೭ ॥

ಬಾಲ ಕೃಷ್ಣನು ಒಂದು ಬಂಡಿಯ ಕೆಳಗೆ ಮಲಗಿದ್ದನು. ಅವನ ಕಾಲುಗಳು ಎಳೆ ಚಿಗುರಿನಂತೆ ತುಂಬಾ ಕೋಮಲವಾಗಿದ್ದು ಮನೋಹರವಾಗಿದ್ದವು. ಆದರೆ ಆ ಎಳೆಯಕಾಲು ಆ ವಿಶಾಲವಾದ ಬಂಡಿಗೆ ತಗಲುತ್ತಲೇ ಅದು ತಲೆಕೆಳಗಾಯಿತು.* ಆ ಬಂಡಿಯಲ್ಲಿ ಹಾಲು-ಮೊಸರು ಮುಂತಾದ ಅನೇಕ ರಸಗಳಿಂದ ತುಂಬಿದ ಮಡಕೆಗಳನ್ನೂ, ಇತರ ಪಾತ್ರೆಗಳನ್ನೂ ಇಟ್ಟಿದ್ದರು. ಅವೆಲ್ಲವೂ ಬಿದ್ದು ಒಡೆದುಹೋದವು. ಗಾಡಿಯ ಗಾಲಿಗಳು, ಅಚ್ಚುಮರ, ನೊಗ ಇತ್ಯಾದಿಗಳೆಲ್ಲ ಮುರಿದು ನುಚ್ಚುನೂರಾದವು. ॥ ೭ ॥

ದೃಷ್ಟ್ವಾ ಯಶೋದಾಪ್ರಮುಖಾ ವ್ರಜಸ್ತ್ರಿಯ
ಔತ್ಥಾನಿಕೇ ಕರ್ಮಣಿ ಯಾಃ ಸಮಾಗತಾಃ ।
ನಂದಾದಯಶ್ಚಾದ್ಭುತದರ್ಶನಾಕುಲಾಃ
ಕಥಂ ಸ್ವಯಂ ವೈ ಶಕಟಂ ವಿಪರ್ಯಗಾತ್ ॥ ೮ ॥

ಮುದ್ದುಕೃಷ್ಣನು ಬೋರಲುಬಿದ್ದ ಆ ಉತ್ಸವದಲ್ಲಿ ಭಾಗವಹಿಸಲು ಬಂದಿದ್ದ ಗೋಪಿಯರೂ, ಯಶೋದಾ ರೋಹಿಣೀ-ನಂದಗೋಪರೂ, ಗೋಪಾಲಕರೆಲ್ಲರೂ ಈ ವಿಚಿತ್ರ ಘಟನೆಯನ್ನು ನೋಡಿ ವ್ಯಾಕುಲಗೊಂಡರು. 'ಇದೇನಾಯಿತು ? ಈ ಗಾಡಿಯು ತಾನಾಗಿಯೇ ಹೇಗೆ ಮಗುಚಿಬಿತ್ತು ?' ಎಂದು ಪರಸ್ಪರ ಮಾತನಾಡತೊಡಗಿದರು. ॥ ೮ ॥

ಊಚುರವ್ಯವಸಿತಮತೀನ್ಗೋಪಾನ್ಗೋಪೀಶ್ಚ ಬಾಲಕಾಃ ।
ರುದತಾನೇನ ಪಾದೇನ ಕ್ಷಿಪ್ತಮೇತನ್ನ ಸಂಶಯಃ ॥ ೯ ॥

ಅವರು ಇದರ ಕಾರಣವನ್ನು ನಿಶ್ಚಯಿಸದಾದರು. ಅಲ್ಲೇ ಆಡುತ್ತಿದ್ದ ಗೋಪಬಾಲಕರು ಮತ್ತು ಗೋಪಿಯರು ಹೇಳಿದರು – 'ಈ ಮುದ್ದುಕೃಷ್ಣನೇ ಅಳುತ್ತಾ ಅಳುತ್ತಾ ತನ್ನ ಕಾಲಿನಿಂದ ಒದ್ದು ಗಾಡಿಯನ್ನು ತಲೆಕೆಳಗಾಗಿಸಿದನು.' ಇದರಲ್ಲಿ ಸಂದೇಹವೇ ಇಲ್ಲ. ॥ ೯ ॥

ನ ತೇ ಶ್ರದ್ದಧಿರೇ ಗೋಪಾ ಬಾಲಭಾಷಿತಮಿತ್ಯುತ ।
ಅಪ್ರಮೇಯಂ ಬಲಂ ತಸ್ಯ ಬಾಲಕಸ್ಯ ನ ತೇ ವಿದುಃ ॥ ೧೦ ॥

ಆದರೆ ಗೋಪಾಲಕರು ಅದನ್ನು 'ಹುಡುಗರ ಮಾತು' ಎಂದು ತಿಳಿದು ಅದರಲ್ಲಿ ವಿಶ್ವಾಸವಿಡಲಿಲ್ಲ. ಆ ಗೋಪರು ಈ ಬಾಲಕನ ಅನಂತಬಲವನ್ನು ತಿಳಿಯದಿರುವುದು ಸರಿಯೇ ಆಗಿದೆ. ॥ ೧೦ ॥

* ಶಕಟಾಸುರನ ಪೂರ್ವಕಥೆ : ಉತ್ಕಚನೆಂಬುವವನು ಹಿರಣ್ಯಾಕ್ಷನ ಮಗನು. ಅವನು ಮಹಾಬಲಿಷ್ಠನೂ ಸ್ಥೂಲಕಾಯನೂ ಆಗಿದ್ದನು. ಅವನು ಪ್ರಪಂಚ ಪರ್ಯಟನ ಮಾಡುತ್ತಿದ್ದಾಗ ಒಮ್ಮೆ ಲೋಮಶಮಹರ್ಷಿಗಳ ಆಶ್ರಮಕ್ಕೂ ಬಂದನು. ಋಷಿ-ಮುನಿಗಳ ವಿಷಯದಲ್ಲಿ ಅವನಿಗೆ ತಿರಸ್ಕಾರ ಬುದ್ಧಿಯಿದ್ದಿತು. ರಾಕ್ಷಸಸಹಜವಾದ ಬುದ್ಧಿಯಿಂದ ಅವನು ಆಶ್ರಮದ ಪರಿಸರದಲ್ಲಿದ್ದ ವೃಕ್ಷಗಳೆಲ್ಲವನ್ನೂ ಕೀಳತೊಡಗಿದನು. ಲೋಮಶರು ಕುಪಿತರಾಗಿ ಶಪಿಸಿದರು. 'ದುಷ್ಟನೇ ! ನೀನು ದೇಹರಹಿತನಾಗು'. ಮರುಕ್ಷಣದಲ್ಲಿಯೇ ಉತ್ಕಚನು ಹಾವಿನ ಪೊರೆಯಂತೆ ಆಗಿಬಿಟ್ಟನು. ಭಯಗ್ರಸ್ತನಾದ ರಾಕ್ಷಸನು ಒಡನೆಯೇ ಲೋಮಶರ ಕಾಲುಗಳಿಗೆ ಬಿದ್ದು ಶಾಪದ ನಿರಸನಕ್ಕಾಗಿ ಬೇಡಿಕೊಂಡನು. ಲೋಮಶರು ಪ್ರಸನ್ನರಾದರು. ಮಹಾತ್ಮರ ಶಾಪವೂ ಕೆಲವು ವೇಳೆ ವರವಾಗಿ ಪರಿಣಮಿಸುತ್ತದೆ. ಪ್ರಸನ್ನರಾದ ಲೋಮಶರು ಹೇಳಿದರು : 'ವೈವಸ್ವತ ಮನ್ವಂತರದಲ್ಲಿ ಶ್ರೀಕೃಷ್ಣನ ಪಾದಸ್ಪರ್ಶದಿಂದ ನೀನು ಮುಕ್ತನಾಗುವೆ.' ಅವನೇ ಶಕಟಾಸುರನಾಗಿ ಬಂದು ಮುದ್ದುಕೃಷ್ಣನ ಪಾದಸ್ಪರ್ಶದಿಂದ ಮುಕ್ತನಾದನು.

ರುದಂತಂ ಸುತಮಾದಾಯ ಯಶೋದಾ ಗ್ರಹಶಂಕಿತಾ ।
ಕೃತಸ್ವಸ್ತ್ಯಯನಂ ವಿಪ್ರೈಃ ಸೂಕ್ತೈಃ ಸ್ತನಮಪಾಯಯತ್ ॥ ೧೧ ॥

ಪೂರ್ವವತ್ಸ್ಥಾಪಿತಂ ಗೋಪೈರ್ಬಲಿಭಿಃ ಸಪರಿಚ್ಛದಮ್ ।
ವಿಪ್ರಾ ಹುತ್ವಾರ್ಚಯಾಂಚಕ್ರುರ್ದಧ್ಯಕ್ಷತಕುಶಾಂಬುಭಿಃ ॥ ೧೨ ॥

ಯೇಽಸೂಯಾನೃತದಂಭೇರ್ಷ್ಯಾಹಿಂಸಾಮಾನವಿವರ್ಜಿತಾಃ ।
ನ ತೇಷಾಂ ಸತ್ಯಶೀಲಾನಾಮಾಶಿಷೋ ವಿಫಲಾಃ ಕೃತಾಃ ॥ ೧೩ ॥

ಇತಿ ಬಾಲಕಮಾದಾಯ ಸಾಮರ್ಗ್ಯಜುರುಪಾಕೃತೈಃ ।
ಜಲೈಃ ಪವಿತ್ರೌಷಧಿಭಿರಭಿಷಿಚ್ಯ ದ್ವಿಜೋತ್ತಮೈಃ ॥ ೧೪ ॥

ವಾಚಯಿತ್ವಾ ಸ್ವಸ್ತ್ಯಯನಂ ನಂದಗೋಪಃ ಸಮಾಹಿತಃ ।
ಹುತ್ವಾ ಚಾಗ್ನಿಂ ದ್ವಿಜಾತಿಭ್ಯಃ ಪ್ರಾದಾದನ್ನಂ ಮಹಾಗುಣಮ್ ॥ ೧೫ ॥

ಗಾವಃ ಸರ್ವಗುಣೋಪೇತಾ ವಾಸಃಸ್ರಗ್ರುಕ್ಮಮಾಲಿನೀಃ ।
ಆತ್ಮಜಾಭ್ಯುದಯಾರ್ಥಾಯ ಪ್ರಾದಾತ್ತೇ ಚಾನ್ವಯುಂಜತ ॥ ೧೬ ॥

ವಿಪ್ರಾ ಮಂತ್ರವಿದೋ ಯುಕ್ತಾಸ್ತೈರ್ಯಾಃ ಪ್ರೋಕ್ತಾಸ್ತಥಾಽಽಶಿಷಃ ।
ತಾ ನಿಷ್ಫಲಾ ಭವಿಷ್ಯಂತಿ ನ ಕದಾಚಿದಪಿ ಸ್ಫುಟಮ್ ॥ ೧೭ ॥

ಏಕದಾಽಽರೋಹಮಾರೂಢಂ ಲಾಲಯಂತೀ ಸುತಂ ಸತೀ ।
ಗರಿಮಾಣಂ ಶಿಶೋರ್ವೋಢುಂ ನ ಸೇಹೇ ಗಿರಿಕೂಟವತ್ ॥ ೧೮ ॥

ಭೂಮೌ ನಿಧಾಯ ತಂ ಗೋಪೀ ವಿಸ್ಮಿತಾ ಭಾರಪೀಡಿತಾ ।
ಮಹಾಪುರುಷಮಾದಧ್ಯೌ ಜಗತಾಮಾಸ ಕರ್ಮಸು ॥ ೧೯ ॥

ದೈತ್ಯೋ ನಾಮ್ನಾ ತೃಣಾವರ್ತಃ ಕಂಸಭೃತ್ಯಃ ಪ್ರಣೋದಿತಃ ।
ಚಕ್ರವಾತಸ್ವರೂಪೇಣ ಜಹಾರಾಸೀನಮರ್ಭಕಮ್ ॥ ೨೦ ॥

ಯಶೋದೆಯು ಈ ಘಟನೆಯನ್ನು ಯಾವುದೋ ಗ್ರಹಚೇಷ್ಟೆಯಿರಬಹುದೆಂದು ಭಾವಿಸಿದಳು. ಆಕೆಯು ಅಳುತ್ತಿದ್ದ ಮುದ್ದುಕೃಷ್ಣನನ್ನು ತೊಡೆಯಮೇಲೆ ಎತ್ತಿಕೊಂಡು ಸಮಾಧಾನ ಪಡಿಸುತ್ತಾ, ಬ್ರಾಹ್ಮಣರಿಂದ ಮಂತ್ರಪುರಸ್ಸರವಾಗಿ ಸ್ವಸ್ತಿವಾಚನ ಮಾಡಿಸಿ, ಹಾಲುಣಿಸಿದಳು. ॥ ೧೧ ॥ ಬಲಿಷ್ಠರಾದ ಗೋಪರು ಆ ಬಂಡಿಯನ್ನು ಸರಿಪಡಿಸಿದರು. ಮೊದಲಿದ್ದಂತೆ ಸಾಮಗ್ರಿಗಳನ್ನು ಗಾಡಿಯಲ್ಲಿಟ್ಟರು. ಬ್ರಾಹ್ಮಣರು ಅನಿಷ್ಟನಿವಾರಕಗಳಾದ ಹೋಮಗಳನ್ನು ಮಾಡಿ ಭಗವಂತನನ್ನು ಮತ್ತು ಆ ಗಾಡಿಯನ್ನು ಮೊಸರು, ಅಕ್ಷತೆ, ದರ್ಭೆ, ನೀರು ಇತ್ಯಾದಿಗಳಿಂದ ಪೂಜಿಸಿದರು. ॥ ೧೨ ॥

ಯಾರು ಇತರರಲ್ಲಿ ದೋಷಗಳನ್ನು ಹುಡುಕುವುದಿಲ್ಲವೋ, ಸುಳ್ಳುಹೇಳುವುದಿಲ್ಲವೋ, ದಂಭ, ಈರ್ಷೆ, ಹಿಂಸೆ ಇವುಗಳನ್ನು ಮಾಡುವುದಿಲ್ಲವೋ, ದುರಭಿಮಾನ ಶೂನ್ಯರಾಗಿರುವರೋ, ಅಂತಹ ಸತ್ಯಶೀಲ ಬ್ರಾಹ್ಮಣರ ಆಶೀರ್ವಾದವು ಎಂದೂ ನಿಷ್ಫಲವಾಗುವುದಿಲ್ಲ. ॥ ೧೩ ॥ ಹೀಗೆ ಯೋಚಿಸಿದ ನಂದಗೋಪನು ಮಗುವನ್ನು ತೊಡೆಯಮೇಲೆ ಮಲಗಿಸಿಕೊಂಡು ಬ್ರಾಹ್ಮಣರಿಂದ ಋಗ್ಯಜುಸ್ಸಾಮ ಮಂತ್ರಗಳಿಂದ ಅಭಿಮಂತ್ರಿತವಾದ ಮತ್ತು ಔಷಧಿಗಳಿಂದ ಕೂಡಿದ ಪವಿತ್ರಜಲದಿಂದ ಮಗುವಿಗೆ ಅಭಿಷೇಕವನ್ನು ಮಾಡಿಸಿದನು. ॥ ೧೪ ॥ ನಂದಗೋಪನು ಏಕಾಗ್ರಚಿತ್ತನಾಗಿ ಸ್ವಸ್ತಿವಾಚನ ಮತ್ತು ಹವನಮಾಡಿಸಿ ಬ್ರಾಹ್ಮಣರಿಗೆ ಷಡ್ರಸೋಪೇತವಾದ ಭಕ್ಷ್ಯ-ಭೋಜ್ಯಾದಿಗಳಿಂದ ಭೋಜನ ಮಾಡಿಸಿದನು. ॥ ೧೫ ॥ ಅನಂತರ ನಂದಗೋಪನು ಪುತ್ರನ ಅಭ್ಯುದಯಾರ್ಥವಾಗಿ ವಸ್ತ್ರಗಳಿಂದಲೂ, ಪುಷ್ಪಮಾಲಿಕೆಗಳಿಂದಲೂ, ಚಿನ್ನದ ಹಾರಗಳಿಂದಲೂ ಸಮಲಂಕೃತವಾದ ಒಳ್ಳೆಯ ಗುಣಗಳಿಂದ ಕೂಡಿದ ಅನೇಕ ಗೋವುಗಳನ್ನು ಬ್ರಾಹ್ಮಣರಿಗೆ ದಾನಮಾಡಿದನು. ಬ್ರಾಹ್ಮಣರೆಲ್ಲರೂ ಮುದ್ದುಕೃಷ್ಣನಿಗೂ, ನಂದಗೋಪನಿಗೂ ಆಶೀರ್ವದಿಸಿದರು. ॥ ೧೬ ॥ ಸದಾಚಾರವುಳ್ಳ ವೇದವಿದರಾದ ಬ್ರಾಹ್ಮಣರು ಮಾಡಿದ ಆಶೀರ್ವಾದಗಳು ಎಂದಿಗೂ ನಿಷ್ಫಲವಾಗುವುದಿಲ್ಲವೆಂಬುದು ಸ್ಪಷ್ಟವೇ ಆಗಿದೆ. ॥ ೧೭ ॥

ಮುಂದೆ ಒಂದು ದಿನ ಯಶೋದೆಯು ಮುದ್ದುಕೃಷ್ಣನನ್ನು ತೊಡೆಯಮೇಲೆ ಮಲಗಿಸಿಕೊಂಡು ಆಡಿಸುತ್ತಿದ್ದಳು. ಇದ್ದಕ್ಕಿದ್ದಂತೆ ಶ್ರೀಕೃಷ್ಣನು ಪರ್ವತದಂತೆ ಬಹಳ ಭಾರವಾಗಿಬಿಟ್ಟನು. ಯಶೋದೆಯು ಅವನ ಭಾರವನ್ನು ತಡೆಯದಾದಳು. ॥ ೧೮ ॥ ಆಕೆಯು ಭಾರಪೀಡಿತಳಾಗಿ ಶ್ರೀಕೃಷ್ಣನನ್ನು ನೆಲದ ಮೇಲೆ ಕುಳ್ಳಿರಿಸಿದಳು. ಇಂತಹ ಹೊಸ ಘಟನೆಯಿಂದ ಆಕೆಯು ಅತ್ಯಂತ ಚಕಿತಳಾಗಿದ್ದಳು. ಬಳಿಕ ಅವಳು ಕಂದನಿಗೆ ಯಾವುದೇ ಉಪದ್ರವವೂ ಆಗದಿರಲಿ ಎಂದು ಭಗವಂತನನ್ನು ಧ್ಯಾನಿಸಿ ಗೃಹಕೃತ್ಯದಲ್ಲಿ ತೊಡಗಿದಳು. ॥ ೧೯ ॥

ತೃಣಾವರ್ತನೆಂಬ ದೈತ್ಯನು ಕಂಸನ ಸೇವಕನಾಗಿದ್ದನು. ಕಂಸನ ಪ್ರೇರಣೆಯಿಂದ ಅವನು ಸುಂಟರಗಾಳಿಯ ರೂಪದಿಂದ ಗೋಕುಲಕ್ಕೆ ಬಂದನು ಹಾಗೂ ಕುಳಿತಿರುವ ಶ್ರೀಕೃಷ್ಣನನ್ನು ಹಾರಿಸಿಕೊಂಡು ಆಕಾಶಕ್ಕೆ ನೆಗೆದನು. ॥ ೨೦ ॥

ಗೋಕುಲಂ ಸರ್ವಮಾವೃಣ್ವನ್ಮುಷ್ಣಂಶ್ಚಕ್ಷೂಂಷಿ ರೇಣುಭಿಃ ।
ಈರಯನ್ಸುಮಹಾಘೋರಶಬ್ದೇನ ಪ್ರದಿಶೋ ದಿಶಃ
॥ ೨೧ ॥

ಮುಹೂರ್ತಮಭವದ್ಗೋಷ್ಠಂ ರಜಸಾ ತಮಸಾಽಽವೃತಮ್ ।
ಸುತಂ ಯಶೋದಾ ನಾಪಶ್ಯತ್ತಸ್ಮಿನ್ನ್ಯಸ್ತವತೀ ಯತಃ
॥ ೨೨ ॥

ನಾಪಶ್ಯತ್ಕಶ್ಚನಾತ್ಮಾನಂ ಪರಂ ಚಾಪಿ ವಿಮೋಹಿತಃ ।
ತೃಣಾವರ್ತನಿಸೃಷ್ಟಾಭಿಃ ಶರ್ಕರಾಭಿರುಪದ್ರುತಃ
॥ ೨೩ ॥

ಇತಿ ಖರಪವನಚಕ್ರಪಾಂಸುವರ್ಷೇ
ಸುತಪದವೀಮಬಲಾವಿಲಕ್ಷ್ಯ ಮಾತಾ ।
ಅತಿಕರುಣಮನುಸ್ಮರಂತ್ಯಶೋಚದ್
ಭುವಿ ಪತಿತಾ ಮೃತವತ್ಸಕಾ ಯಥಾ ಗೌಃ ॥ ೨೪ ॥

ರುದಿತಮನುನಿಶಮ್ಯ ತತ್ರ ಗೋಪ್ಯೋ
ಭೃಶಮನುತಪ್ತಧಿಯೋಽಶ್ರುಪೂರ್ಣಮುಖ್ಯಃ ।
ರುರುದುರನುಪಲಭ್ಯ ನಂದಸೂನುಂ
ಪವನ ಉಪಾರತಪಾಂಸುವರ್ಷವೇಗೇ ॥ ೨೫ ॥

ತೃಣಾವರ್ತಃ ಶಾಂತರಯೋ ವಾತ್ಯಾರೂಪಧರೋ ಹರನ್ ।
ಕೃಷ್ಣಂ ನಭೋಗತೋ ಗಂತುಂ ನಾಶಕ್ನೋದ್ಭೂರಿಭಾರಭೃತ್
॥ ೨೬ ॥

ತಮಶ್ಮಾನಂ ಮನ್ಯಮಾನ ಆತ್ಮನೋ ಗುರುಮತ್ತಯಾ ।
ಗಲೇ ಗೃಹೀತ ಉತ್ಸ್ರಷ್ಟುಂ ನಾಶಕ್ನೋದದ್ಭುತಾರ್ಭಕಮ್
॥ ೨೭ ॥

ಗಲಗ್ರಹಣನಿಶ್ಚೇಷ್ಟೋ ದೈತ್ಯೋ ನಿರ್ಗತಲೋಚನಃ ।
ಅವ್ಯಕ್ತರಾವೋ ನ್ಯಪತತ್ಸಹಬಾಲೋ ವ್ಯಸುರ್ವ್ರಜೇ
॥ ೨೮ ॥

ತಮಂತರಿಕ್ಷಾತ್ಪತಿತಂ ಶಿಲಾಯಾಂ
ವಿಶೀರ್ಣಸರ್ವಾವಯವಂ ಕರಾಲಮ್ ।
ಪುರಂ ಯಥಾ ರುದ್ರಶರೇಣ ವಿದ್ಧಂ
ಸ್ತ್ರಿಯೋ ರುದತ್ಯೋ ದದೃಶುಃ ಸಮೇತಾಃ ॥ ೨೯ ॥

ಅವನು ಗೋಕುಲದಲ್ಲೆಲ್ಲ ಧೂಳನ್ನು ಎಬ್ಬಿಸಿ ಎಲ್ಲರ ಕಣ್ಣುಗಳನ್ನು ಮುಚ್ಚಿಸಿದನು. ಅವನ (ಸುಂಟರಗಾಳಿಯ) ಅತಿಘೋರವಾದ ಕರ್ಕಶವಾದ ಶಬ್ದವು ಹತ್ತು ದಿಕ್ಕುಗಳಲ್ಲಿ ತುಂಬಿ ಹೋಯಿತು. ॥ ೨೧ ॥ ಮುಹೂರ್ತಕಾಲ ಗೋಕುಲವು ಧೂಳಿನಿಂದ ಮತ್ತು ಕತ್ತಲೆಯಿಂದ ಮುಚ್ಚಿಹೋಗಿತ್ತು. ಯಶೋದೆಯು ಶ್ರೀಕೃಷ್ಣನನ್ನು ಕುಳ್ಳಿರಿಸಿದಲ್ಲಿಗೆ ಬಂದುನೋಡಿದರೆ ಅಲ್ಲಿ ಅವನು ಇರಲಿಲ್ಲ. ॥ ೨೨ ॥ ಆ ಸಮಯದಲ್ಲಿ ತೃಣಾವರ್ತನು ಸುಂಟರಗಾಳಿಯ ರೂಪದಿಂದ ಹಾರಿಸಿದ ಧೂಳು-ಮರಳಿನಿಂದಾಗಿ ಜನರೆಲ್ಲರೂ ಅತ್ಯಂತ ಉದ್ವಿಗ್ನರಾಗಿ, ಕಳವಳಗೊಂಡು, ಒಬ್ಬರು ಮತ್ತೊಬ್ಬರನ್ನು ನೋಡಲಾಗುತ್ತಿರಲಿಲ್ಲ. ॥ ೨೩ ॥ ಜೋರಾಗಿ ಬೀಸುತ್ತಿದ್ದ ಸುಂಟರಗಾಳಿಯಿಂದ, ಧೂಳಿನ ಮಳೆಯಲ್ಲಿ ತನ್ನ ಪುತ್ರನನ್ನು ಕಾಣದೆ ಯಶೋದೆಯು ಅತ್ಯಂತ ಶೋಕಾಕುಲಳಾಗಿ ಪುತ್ರನನ್ನು ನೆನೆಯುತ್ತಾ ಕರುವನ್ನು ಕಳಕೊಂಡ ಹಸುವಿನಂತಾಗಿ ಅತೀವ ದುಃಖದಿಂದ ಅವಳು ನೆಲಕ್ಕುರುಳಿದಳು. ॥ ೨೪ ॥ ಸುಂಟರಗಾಳಿಯು ಶಾಂತವಾಗಿ ಧೂಳಿನ ಮಳೆಯು ಕಡಿಮೆಯಾದಾಗ ಯಶೋದೆಯ ಅಳುವಿನ ಶಬ್ದವನ್ನು ಕೇಳಿ ಗೋಪಿಯರೆಲ್ಲರೂ ಅಲ್ಲಿಗೆ ಧಾವಿಸಿಬಂದರು. ಯಶೋದೆಯ ಬಳಿ ನಂದನಂದನ ಶ್ರೀಕೃಷ್ಣನು ಇಲ್ಲದಿರುವುದನ್ನು ನೋಡಿ ಅವರೆಲ್ಲರೂ ಪರಿತಪಿಸತೊಡಗಿದರು. ಅವರ ಕಣ್ಣುಗಳಿಂದ ಕಂಬನಿಯು ಧಾರಾಕಾರವಾಗಿ ಹರಿಯುತ್ತಿದ್ದು ಅವರೆಲ್ಲರೂ ಬಿಕ್ಕಿ-ಬಿಕ್ಕಿಅಳುತ್ತಿದ್ದರು.॥೨೫॥

ತೃಣಾವರ್ತನು ಸುಂಟರಗಾಳಿಯ ರೂಪದಿಂದ ಭಗವಾನ್ ಶ್ರೀಕೃಷ್ಣನನ್ನು ಎತ್ತಿಕೊಂಡು ಆಕಾಶಕ್ಕೆ ಹೋದಾಗ ಕೃಷ್ಣನ ಭಾರವನ್ನು ಸಹಿಸಲಾರದೆ ಅವನ ವೇಗವು ಕಡಿಮೆಯಾಯಿತು. ಅವನನ್ನು ಮೇಲೆತ್ತಿಕೊಂಡು ಹೋಗಲು ಸಾಧ್ಯವಾಗಲಿಲ್ಲ. ॥ ೨೬ ॥ ತೃಣಾವರ್ತನು ತನಗಿಂತಲೂ ಹೆಚ್ಚು ಭಾರವಾಗಿರುವ ಶ್ರೀಕೃಷ್ಣನನ್ನು ನೀಲಗಿರಿಯ ಬಂಡೆಯೆಂದೇ ಭಾವಿಸಿದನು. ಅವನನ್ನು ಬಿಟ್ಟುಬಿಡಲು ಸಾಧ್ಯವಾಗದಂತೆ ಶ್ರೀಕೃಷ್ಣನು ಅಸುರನ ಕತ್ತನ್ನು ಗಟ್ಟಿಯಾಗಿ ಹಿಡಿದುಕೊಂಡಿದ್ದನು. ॥ ೨೭ ॥ ಭಗವಂತನು ಬಿಗಿಯಾಗಿ ಅವನ ಕತ್ತನ್ನು ಹಿಡಿದಿದ್ದರಿಂದ ಅಸುರನ ಕಣ್ಣುಗುಡ್ಡೆಗಳು ಹೊರಚಾಚಿಕೊಂಡು ನಿಶ್ಚೇಷ್ಟಿತನಾದನು. ಮಾತು ನಿಂತುಹೋಯಿತು. ಪ್ರಾಣಪಕ್ಷಿಯು ಹಾರಿಹೋಗಿ ಬಾಲಕ ಶ್ರೀಕೃಷ್ಣನೊಂದಿಗೆ ಗೋಕುಲದಲ್ಲಿ ಬಿದ್ದುಬಿಟ್ಟನು.* ॥ ೨೮ ॥ ಮುದ್ದುಕೃಷ್ಣನನ್ನು ಕಾಣದೆ ರೋದಿಸುತ್ತಿದ್ದ ಗೋಪಿಯರೆಲ್ಲರೂ ರಾಕ್ಷಸನೊಬ್ಬನು ಆಕಾಶದಿಂದ ಬಿದ್ದುದನ್ನು ಕಂಡರು. ಅವನು ಆಕಾಶದಿಂದ ಒಂದು ದೊಡ್ಡ ಬಂಡೆಯ ಮೇಲೆ ಬಿದ್ದಿದ್ದನು. ಕರಾಳಸ್ವರೂಪನಾದ ಆ ದೈತ್ಯನು ಬಂಡೆಯ ಮೇಲೆ ಬಿದ್ದೊಡನೆಯೇ ಶಂಕರನ ಬಾಣಗಳಿಂದ ತ್ರಿಪುರಾಸುರರು ಛಿನ್ನ-ಭಿನ್ನವಾದಂತೆ ಅವನು ನುಚ್ಚುನೂರಾಗಿದ್ದನು. ॥ ೨೯ ॥

* ತೃಣಾವರ್ತನ ಪೂರ್ವಕಥೆ : ಪಾಂಡ್ಯದೇಶದಲ್ಲಿ ಸಹಸ್ರಾಕ್ಷನೆಂಬ ಹೆಸರಿನ ರಾಜನಿದ್ದನು. ಅವನು ನರ್ಮದಾನದಿಯ ತೀರದಲ್ಲಿ ತನ್ನ ರಾಣಿಯರೊಡನೆ ಜಲಕ್ರೀಡೆಯಾಡುತ್ತಿದ್ದನು. ಅಲ್ಲಿಗೆ ದುರ್ವಾಸ ಋಷಿಗಳು ಬಂದರು. ಮಹರ್ಷಿಗಳು ಆಗಮಿಸಿದರೂ ರಾಜನು ಅವರಿಗೆ ನಮಸ್ಕರಿಸಲಿಲ್ಲ. ದುರ್ವಾಸರು ಕೋಪಗೊಂಡು ರಾಕ್ಷಸನಾಗೆಂದು ಶಾಪಕೊಟ್ಟರು. ರಾಜನು ಮಹರ್ಷಿಗಳ ಕಾಲಿಗೆಬಿದ್ದು ಶಾಪವಿಮೋಚನೆಗೆ ಪ್ರಾರ್ಥಿಸಲಾಗಿ ದಯಾಮಯರಾದ ದುರ್ವಾಸರು ಹೇಳಿದರು – 'ಭಗವಾನ್ ಶ್ರೀಕೃಷ್ಣಮೂರ್ತಿಯ ಶ್ರೀವಿಗ್ರಹದ ಸ್ಪರ್ಶವಾದೊಡನೆಯೇ ನೀನು ಶಾಪದಿಂದ ವಿಮುಕ್ತನಾಗುವೆ.' ಅಂತೆಯೇ ತೃಣಾವರ್ತನೆಂಬ ರಾಕ್ಷಸನಾಗಿ ಹುಟ್ಟಿದ್ದ ರಾಜನು ಶ್ರೀಕೃಷ್ಣನ ಸ್ಪರ್ಶವಾದೊಡನೆಯೇ ಮುಕ್ತಿಯನ್ನು ಹೊಂದಿದನು.

ಪ್ರಾದಾಯ ಮಾತ್ರೇ ಪ್ರತಿಹೃತ್ಯ ವಿಸ್ಮಿತಾಃ
ಕೃಷ್ಣಂ ಚ ತಸ್ಯೋರಸಿ ಲಂಬಮಾನಮ್ ।
ತಂ ಸ್ವಸ್ತಿಮಂತಂ ಪುರುಷಾದನೀತಂ
ವಿಹಾಯಸಾ ಮೃತ್ಯುಮುಖಾತ್ಪ್ರಮುಕ್ತಮ್ ।
ಗೋಪ್ಯಶ್ಚ ಗೋಪಾಃ ಕಿಲ ನಂದಮುಖ್ಯಾ
ಲಬ್ಧ್ವಾ ಪುನಃ ಪ್ರಾಪುರತೀವ ಮೋದಮ್ ॥ ೩೦ ॥

ಅಹೋ ಬತಾತ್ಯದ್ಭುತಮೇಷ ರಕ್ಷಸಾ
ಬಾಲೋ ನಿವೃತ್ತಿಂ ಗಮಿತೋಽಭ್ಯಗಾತ್ಪುನಃ ।
ಹಿಂಸ್ರಃ ಸ್ವಪಾಪೇನ ವಿಹಿಂಸಿತಃ ಖಲಃ
ಸಾಧುಃ ಸಮತ್ವೇನ ಭಯಾದ್ವಿಮುಚ್ಯತೇ ॥ ೩೧ ॥

ಕಿಂ ನಸ್ತಪಶ್ಚೀರ್ಣಮಧೋಕ್ಷಜಾರ್ಚನಂ
ಪೂರ್ತೇಷ್ಟದತ್ತಮುತ ಭೂತಸೌಹೃದಮ್ ।
ಯತ್ಸಂಪರೇತಃ ಪುನರೇವ ಬಾಲಕೋ
ದಿಷ್ಟ್ಯಾ ಸ್ವಬಂಧೂನ್ಪ್ರಣಯನ್ನುಪಸ್ಥಿತಃ ॥ ೩೨ ॥

ದೃಷ್ಟ್ವಾದ್ಭುತಾನಿ ಬಹುಶೋ ನಂದಗೋಪೋ ಬೃಹದ್ವನೇ ।
ವಸುದೇವವಚೋ ಭೂಯೋ ಮಾನಯಾಮಾಸ ವಿಸ್ಮಿತಃ ॥ ೩೩ ॥

ಏಕದಾರ್ಭಕಮಾದಾಯ ಸ್ವಾಂಕಮಾರೋಪ್ಯ ಭಾಮಿನೀ ।
ಪ್ರಸ್ನುತಂ ಪಾಯಯಾಮಾಸ ಸ್ತನಂ ಸ್ನೇಹಪರಿಪ್ಲುತಾ ॥ ೩೪ ॥

ಪೀತಪ್ರಾಯಸ್ಯ ಜನನೀ ಸಾ ತಸ್ಯ ರುಚಿರಸ್ಮಿತಮ್ ।
ಮುಖಂ ಲಾಲಯತೀ ರಾಜನ್ ಜೃಂಭತೋ ದದೃಶೇ ಇದಮ್ ॥ ೩೫ ॥

ಖಂ ರೋದಸೀ ಜ್ಯೋತಿರನೀಕಮಾಶಾಃ
ಸೂರ್ಯೇಂದುವಹ್ನಿಶ್ವಸನಾಂಬುಧೀಂಶ್ಚ ।
ದ್ವೀಪಾನ್ ನಗಾಂಸ್ತದ್ದುಹಿತೄರ್ವನಾನಿ
ಭೂತಾನಿ ಯಾನಿ ಸ್ಥಿರಜಂಗಮಾನಿ ॥ ೩೬ ॥

ಸಾ ವೀಕ್ಷ್ಯ ವಿಶ್ವಂ ಸಹಸಾ ರಾಜನ್ಸಂಜಾತವೇಪಥುಃ ।
ಸಮ್ಮೀಲ್ಯ ಮೃಗಶಾವಾಕ್ಷೀ ನೇತ್ರೇ ಆಸೀತ್ಸುವಿಸ್ಮಿತಾ ॥ ೩೭ ॥

ಭಗವಾನ್ ಶ್ರೀಕೃಷ್ಣನು ಅವನ ಎದೆಯಮೇಲೆ ಆಡುತ್ತಿದ್ದನು. ಇದನ್ನು ನೋಡಿ ಗೋಪಿಯರು ವಿಸ್ಮಿತರಾದರು. ಅವರು ಒಡನೆಯೇ ಅಲ್ಲಿಗೆ ಹೋಗಿ ಶ್ರೀಕೃಷ್ಣನನ್ನು ಎತ್ತಿಕೊಂಡುಬಂದು ಅಳುತ್ತಿದ್ದ ಯಶೋದೆಯ ಕೈಗೆ ಕೊಟ್ಟರು. ಬಾಲಕನು ಮೃತ್ಯು ಮುಖದಿಂದ ಸಕುಶಲನಾಗಿ ಮರಳಿದನು. ಅವನನ್ನು ರಾಕ್ಷಸನು ಆಕಾಶಕ್ಕೆ ಎತ್ತಿಕೊಂಡು ಹೋಗಿದ್ದರೂ ಅವನು ಬದುಕುಳಿದನು. ಹೀಗೆ ಬಾಲಕ ಶ್ರೀಕೃಷ್ಣನನ್ನು ಪುನಃ ಪಡೆದ ಯಶೋದೆಯೇ ಮೊದಲಾದ ಗೋಪಿಯರೂ ನಂದಾದಿಗೋಪರು ಅತ್ಯಂತ ಆನಂದಭರಿತರಾದರು. ॥ ೩೦ ॥ ಅವರೆಲ್ಲರೂ ಹೇಳತೊಡಗಿದರು ಆಹಾ! ಎಂತಹ ಆಶ್ಚರ್ಯವಿದು! ಈ ಬಾಲಕನು ರಾಕ್ಷಸನಿಂದ ಮೃತ್ಯುಮುಖದಲ್ಲಿ ಹಾಕಲ್ಪಟ್ಟಿದ್ದನು. ಆದರೂ ಮತ್ತೆ ಬದುಕಿ ಬಂದಿರುವನು. ಹಿಂಸಕನಾದ ಆ ದುಷ್ಟನ ಪಾಪಗಳೇ ಅವನನ್ನು ನುಂಗಿಬಿಟ್ಟಿತು. ನೋಡಿರಲ್ಲ! ಸಾಧು ಪುರುಷನು ತನ್ನ ಸಮತೆಯಿಂದಲೇ ಸಮಸ್ತ ಭಯದಿಂದ ಪಾರಾಗುತ್ತಾನೆ, ಇದು ನಿಜವಾಗಿದೆ. ॥ ೩೧ ॥ ಈ ಬಾಲಕನು ರಾಕ್ಷಸನ ವಶನಾಗಿ ಸತ್ತೇ ಹೋಗಿದ್ದವನು ತಮ್ಮ ಸ್ವಜನರಿಗೆ ಸುಖವನ್ನು ಕೊಡಲು ಮರಳಿ ಬಂದಿರುವುದನ್ನು ನೋಡಿದರೆ – ತಪಸ್ಸು, ಭಗವಂತನ ಪೂಜೆ, ಅರವಟ್ಟಿಗೆ ಇಡುವುದು, ಕೆರೆ-ಬಾವಿಗಳನ್ನು ಕಟ್ಟಿಸುವುದು, ಉದ್ಯಾನಗಳನ್ನು ರಚಿಸುವುದು, ಯಜ್ಞ, ದಾನ ಅಥವಾ ಸಮಸ್ತ ಜನರಿಗೆ ಹಿತವನ್ನು ಮಾಡುವುದು ಇವುಗಳಲ್ಲಿ ಏನಾದರೂ ನಾವು ಮಾಡಿರಬೇಕು. ಖಂಡಿತವಾಗಿ ಇದೊಂದು ಸೌಭಾಗ್ಯದ ಮಾತೇ ಆಗಿದೆ. ॥ ೩೨ ॥ ತಾವು ವಾಸಿಸುವ ಮಹಾವನದಲ್ಲಿ ಅನೇಕ ಅದ್ಭುತವಾದ ಘಟನೆಗಳು ನಡೆಯುವುದನ್ನು ನೋಡಿದಾಗ ನಂದ ಗೋಪನು ಆಶ್ಚರ್ಯಚಕಿತನಾಗಿ ವಸುದೇವನು ಹೇಳಿದ್ದ ಮಾತನ್ನು ಸಮರ್ಥಿಸಿಕೊಂಡನು. ॥ ೩೩ ॥

ಒಂದು ದಿನ ಯಶೋದಾದೇವಿಯು ತಮ್ಮ ಮುದ್ದು ಕಂದಮ್ಮನನ್ನು ತೊಡೆಯಲ್ಲಿಟ್ಟಿಕೊಂಡು ಪ್ರೇಮದಿಂದ ಹಾಲನ್ನು ಉಣಿಸುತ್ತಿದ್ದಳು. ಅವಳು ವಾತ್ಸಲ್ಯ-ಸ್ನೇಹದಲ್ಲಿ ಮುಳುಗಿಹೋಗಿ, ಆಕೆಯ ಸ್ತನಗಳಿಂದ ತನ್ನಿಂದತಾನೇ ಹಾಲು ಹರಿಯುತ್ತಿತ್ತು. ॥ ೩೪ ॥ ಬಾಲಮುಕುಂದನು ಹಾಲುಕುಡಿದಾಗಿತ್ತು. ತಾಯಿ ಯಶೋದೆಯು ಅವನು ಕಿಲಕಿಲನೆ ನಗುತ್ತಿರುವಾಗ ಮುಖವನ್ನು ಮುದ್ದಿಸಿದಳು. ಆಗಲೇ ಶ್ರೀಕೃಷ್ಣನಿಗೆ ಆಕಳಿಕೆ ಬಂತು. ತಾಯಿಯು ಅವನ ಬಾಯಲ್ಲಿ ನೋಡುತ್ತಾಳೆ – ॥ ೩೫ ॥ ಅದರಲ್ಲಿ ಆಕಾಶ, ಅಂತರಿಕ್ಷ, ಜ್ಯೋತಿರ್ಮಂಡಲ, ದಿಕ್ಕುಗಳು, ಸೂರ್ಯ, ಚಂದ್ರ, ಅಗ್ನಿ, ವಾಯು, ಸಮುದ್ರ, ದ್ವೀಪಗಳು, ಪರ್ವತ, ನದಿಗಳು, ವನಗಳು, ಸಮಸ್ತ ಚರಾಚರ ಪ್ರಾಣಿಗಳು ನೆಲೆಸಿರುವುದನ್ನು ಆಕೆಯು ನೋಡಿದಳು. ॥ ೩೬ ॥ ಪರೀಕ್ಷಿತನೇ! ತನ್ನ ಪುತ್ರನ ಬಾಯಲ್ಲಿ ಹೀಗೆ ಸಮಸ್ತ ಜಗತ್ತನ್ನೂ ನೋಡಿದ ಹರಿಣಾಕ್ಷಿಯಾದ ಯಶೋದೆಯ ಶರೀರ ನಡುಗಿತು. ಆಕೆಯು ತನ್ನ ವಿಶಾಲವಾದ ಕಣ್ಣುಗಳನ್ನು ಮುಚ್ಚಿಕೊಂಡಳು. ಅವಳು ಅತ್ಯಂತ ಆಶ್ಚರ್ಯ ಚಕಿತಳಾದಳು. ॥ ೩೭ ॥

*ಏಳನೆಯ ಅಧ್ಯಾಯವು ಮುಗಿಯಿತು. ॥ ೭ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ತೃಣಾವರ್ತಮೋಕ್ಷೋ ನಾಮ ಸಪ್ತಮೋಽಧ್ಯಾಯಃ ॥ ೭ ॥

# ಎಂಟನೆಯ ಅಧ್ಯಾಯ

## ನಾಮಕರಣ ಸಂಸ್ಕಾರ ಮತ್ತು ಬಾಲಲೀಲೆಗಳು

*ಶ್ರೀಶುಕ ಉವಾಚ*

ಗರ್ಗಃ ಪುರೋಹಿತೋ ರಾಜನ್ ಯದೂನಾಂ ಸುಮಹಾತಪಾಃ ।
ವ್ರಜಂ ಜಗಾಮ ನಂದಸ್ಯ ವಸುದೇವಪ್ರಚೋದಿತಃ ॥ ೧ ॥

ತಂ ದೃಷ್ಟ್ವಾ ಪರಮಪ್ರೀತಃ ಪ್ರತ್ಯುತ್ಥಾಯ ಕೃತಾಂಜಲಿಃ ।
ಆನರ್ಚಾಧೋಕ್ಷಜಧಿಯಾ ಪ್ರಣಿಪಾತಪುರಃಸರಮ್ ॥ ೨ ॥

ಸೂಪವಿಷ್ಟಂ ಕೃತಾತಿಥ್ಯಂ ಗಿರಾ ಸೂನೃತಯಾ ಮುನಿಮ್ ।
ನಂದಯಿತ್ವಾಬ್ರವೀದ್ಬ್ರಹ್ಮನ್ಪೂರ್ಣಸ್ಯ ಕರವಾಮ ಕಿಮ್ ॥ ೩ ॥

ಮಹದ್ವಿಚಲನಂ ನೃಣಾಂ ಗೃಹಿಣಾಂ ದೀನಚೇತಸಾಮ್ ।
ನಿಃಶ್ರೇಯಸಾಯ ಭಗವನ್ಕಲ್ಪತೇ ನಾನ್ಯಥಾ ಕ್ವಚಿತ್ ॥ ೪ ॥

ಜ್ಯೋತಿಷಾಮಯನಂ ಸಾಕ್ಷಾದ್ಯತ್ತಜ್ಜ್ಞಾನಮತೀಂದ್ರಿಯಮ್ ।
ಪ್ರಣೀತಂ ಭವತಾ ಯೇನ ಪುಮಾನ್ವೇದ ಪರಾವರಮ್ ॥ ೫ ॥

ತ್ವಂ ಹಿ ಬ್ರಹ್ಮವಿದಾಂ ಶ್ರೇಷ್ಠಃ ಸಂಸ್ಕಾರಾನ್ಕರ್ತುಮರ್ಹಸಿ ।
ಬಾಲಯೋರನಯೋರ್ನೃಣಾಂ ಜನ್ಮನಾ ಬ್ರಾಹ್ಮಣೋ ಗುರುಃ ॥ ೬ ॥

*ಗರ್ಗ ಉವಾಚ*

ಯದೂನಾಮಹಮಾಚಾರ್ಯಃ ಖ್ಯಾತಶ್ಚ ಭುವಿ ಸರ್ವತಃ ।
ಸುತಂ ಮಯಾ ಸಂಸ್ಕೃತಂ ತೇ ಮನ್ಯತೇ ದೇವಕೀಸುತಮ್ ॥ ೭ ॥

ಕಂಸಃ ಪಾಪಮತಿಃ ಸಖ್ಯಂ ತವ ಚಾನಕದುಂದುಭೇಃ ।
ದೇವಕ್ಯಾ ಅಷ್ಟಮೋ ಗರ್ಭೋ ನ ಸ್ತ್ರೀ ಭವಿತುಮರ್ಹತಿ ॥ ೮ ॥

ಇತಿ ಸಂಚಿಂತಯನ್ ಶ್ರುತ್ವಾ ದೇವಕ್ಯಾ ದಾರಿಕಾವಚಃ ।
ಅಪಿ ಹಂತಾಽಽಗತಾಶಂಕಸ್ತರ್ಹಿ ತನ್ನೋಽನಯೋ ಭವೇತ್ ॥ ೯ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿತನೇ! ಗರ್ಗರೆಂಬುವರು ಯದುವಂಶಕ್ಕೆ ಕುಲಪುರೋಹಿತರಾಗಿದ್ದರು. ಅವರು ಮಹಾತಪಸ್ವಿಗಳು. ವಸುದೇವನ ಪ್ರೇರಣೆಯಿಂದ ಅವರೊಮ್ಮೆ ನಂದಗೋಕುಲಕ್ಕೆ ಆಗಮಿಸಿದರು. ॥ ೧ ॥ ಅವರನ್ನು ನೋಡುತ್ತಲೇ ನಂದಗೋಪನಿಗೆ ಮಹದಾನಂದವಾಯಿತು. ಅವನು ಕೈಜೋಡಿಸಿಕೊಂಡು ಎದ್ದು ನಿಂತು ಅವರ ಚರಣಗಳಿಗೆ ನಮಸ್ಕರಿಸಿದನು. ಗರ್ಗರು ಸಾಕ್ಷಾತ್ ಭಗವತ್ಸ್ವರೂಪರೇ ಎಂದು ತಿಳಿದು ಅವರನ್ನು ಅರ್ಘ್ಯ-ಪಾದ್ಯಾದಿಗಳಿಂದ ಪೂಜಿಸಿ ಸತ್ಕರಿಸಿದನು. ॥ ೨ ॥ ಸತ್ಕಾರಗಳೆಲ್ಲ ಮುಗಿದನಂತರ ಗರ್ಗರು ಸುಖಾಸೀನರಾದಾಗ ನಂದಗೋಪನು ಕೈಮುಗಿದುಕೊಂಡು ಮಧುರವಾದ ಮಾತುಗಳಿಂದ ಬಿನ್ನವಿಸಿಕೊಂಡನು – ಬ್ರಾಹ್ಮಣೋತ್ತಮರೇ! ನೀವು ಪೂರ್ಣಕಾಮರಾಗಿರುವಿರಿ. ಹಾಗಿರುವಾಗ ನಾನೇನು ತಮ್ಮ ಸೇವೆಮಾಡಬಲ್ಲೆನು? ॥ ೩ ॥ ತಮ್ಮಂತಹ ಮಹಾತ್ಮರ ಆಗಮನವು ದೀನಮನಸ್ಕರಾದ, ಗೃಹಸ್ಥರಾದ ಮನುಷ್ಯರ ಶ್ರೇಯಸ್ಸಿಗಾಗಿಯೇ ಇರುತ್ತದೆ. ಬೇರೆ ಯಾವ ಕಾರಣದಿಂದಲೂ ಮಹಾತ್ಮರಾದವರು ನಮ್ಮಂತಹವರ ಮನೆಗೆ ಆಗಮಿಸುವುದಿಲ್ಲ. ॥ ೪ ॥ ಸ್ವಾಮಿ! ಯಾವುದು ಇಂದ್ರಿಯಗಳಿಗೆ ಅಗೋಚರವಾದ ವಿಷಯವನ್ನು ತಿಳಿಸುವುದೋ, ಅಥವಾ ಭೂತ ಭವಿಷ್ಯದ ಗರ್ಭದಲ್ಲಿ ಏನಿದೆಯೆಂಬುದನ್ನು ಪ್ರತ್ಯಕ್ಷವಾಗಿ ಯಾವ ಶಾಸ್ತ್ರದಿಂದ ತಿಳಿಯಲಾಗುತ್ತದೋ, ಅಂತಹ ಜ್ಯೋತಿಷ್ಯಶಾಸ್ತ್ರವನ್ನು ತಾವು ರಚಿಸಿರುವಿರಿ. ॥ ೫ ॥ ತಾವು ಬ್ರಹ್ಮಜ್ಞರಲ್ಲಿ ಶ್ರೇಷ್ಠರಾಗಿ ಇರುವಿರಿ. ಅದಕ್ಕಾಗಿ ನನ್ನ ಇಬ್ಬರೂ ಬಾಲಕರಿಗೂ ನೀವೇ ನಾಮಕರಣಾದಿ ಸಂಸ್ಕಾರಗಳನ್ನು ಮಾಡಿರಿ. ಏಕೆಂದರೆ, ಬ್ರಾಹ್ಮಣರು ಹುಟ್ಟಿನಿಂದಲೇ ಮನುಷ್ಯಮಾತ್ರರಿಗೆ ಗುರುವಾಗಿರುತ್ತಾರೆ. ॥ ೬ ॥

**ಗರ್ಗಾಚಾರ್ಯರು ಹೇಳಿದರು** – ನಂದಗೋಪನೇ! ಯದುವಂಶೀಯರಿಗೆ ಆಚಾರ್ಯನೆಂದು ನಾನು ಜಗತ್ತಿನಲ್ಲಿ ಪ್ರಸಿದ್ಧನಾಗಿರುವೆನು. ನಾನು ನಿನ್ನ ಪುತ್ರನ ನಾಮಕರಣಸಂಸ್ಕಾರ ಮಾಡಿದರೆ ಜನರು ಇವನು ದೇವಕಿಯ ಪುತ್ರನೆಂದೇ ತಿಳಿಯುವರು. ॥ ೭ ॥ ಪಾಪಬುದ್ಧಿಯವನಾದ ಕಂಸನು ನಿನಗೂ ಮತ್ತು ವಸುದೇವನಿಗೂ ಗಾಢವಾದ ಸ್ನೇಹವಿರುವುದನ್ನು ತಿಳಿದಿರುತ್ತಾನೆ. ದೇವಕಿಯ ಮಗಳಿಂದ 'ನಿನ್ನನ್ನು ಕೊಲ್ಲುವವನು ಬೇರೆಲ್ಲೋ ಬೆಳೆಯುತ್ತಿದ್ದಾನೆ' ಎಂಬ ಮಾತನ್ನು ಕೇಳಿದಂದಿನಿಂದ ಕಂಸನು ದೇವಕಿಯ ಎಂಟನೆಯ ಗರ್ಭದಲ್ಲಿ ಹೆಣ್ಣುಶಿಶುವು ಹುಟ್ಟಲಾರದೆಂದೇ ತರ್ಕಿಸುತ್ತಿದ್ದಾನೆ. ನಿನ್ನ ಪುತ್ರನಿಗೆ ನಾನು ಸಂಸ್ಕಾರವನ್ನು ಮಾಡಿದರೆ ಅವನು ಈ ಬಾಲಕನು ವಸುದೇವನ ಮಗನೆಂದೇ ಬಗೆದು ಕೊಲ್ಲಲೂಬಹುದು. ಹಾಗಾದರೆ ನಮ್ಮಿಂದ ಭಾರೀ ಅನ್ಯಾಯವೇ ಆದೀತು. ॥ ೮-೯ ॥

*ನಂದ ಉವಾಚ*

**ಅಲಕ್ಷಿತೋಽಸ್ಮಿನ್ ರಹಸಿ ಮಾಮಕೈರಪಿ ಗೋವ್ರಜೇ ।**
**ಕುರು ದ್ವಿಜಾತಿಸಂಸ್ಕಾರಂ ಸ್ವಸ್ತಿವಾಚನಪೂರ್ವಕಮ್ ॥ ೧೦ ॥**

*ಶ್ರೀಶುಕ ಉವಾಚ*

**ಏವಂ ಸಂಪ್ರಾರ್ಥಿತೋ ವಿಪ್ರಃ ಸ್ವಚಿಕೀರ್ಷಿತಮೇವ ತತ್ ।**
**ಚಕಾರ ನಾಮಕರಣಂ ಗೂಢೋ ರಹಸಿ ಬಾಲಯೋಃ ॥ ೧೧ ॥**

*ಗರ್ಗ ಉವಾಚ*

**ಅಯಂ ಹಿ ರೋಹಿಣೀ ಪುತ್ರೋ ರಮಯನ್ಸುಹೃದೋ ಗುಣೈಃ ।**
**ಆಖ್ಯಾಸ್ಯತೇ ರಾಮ ಇತಿ ಬಲಾಧಿಕ್ಯಾದ್ಬಲಂ ವಿದುಃ ।**
**ಯದೂನಾಮಪೃಥಗ್ಭಾವಾತ್ಸಂಕರ್ಷಣಮುಶಂತ್ಯುತ ॥ ೧೨ ॥**

**ಆಸನ್ವರ್ಣಾಸ್ತ್ರಯೋ ಹ್ಯಸ್ಯ ಗೃಹ್ಣತೋಽನುಯುಗಂ ತನೂಃ ।**
**ಶುಕ್ಲೋ ರಕ್ತಸ್ತಥಾ ಪೀತ ಇದಾನೀಂ ಕೃಷ್ಣತಾಂ ಗತಃ ॥ ೧೩ ॥**

**ಪ್ರಾಗಯಂ ವಸುದೇವಸ್ಯ ಕ್ವಚಿಜ್ಜಾತಸ್ತವಾತ್ಮಜಃ ।**
**ವಾಸುದೇವ ಇತಿ ಶ್ರೀಮಾನಭಿಜ್ಞಾಃ ಸಂಪ್ರಚಕ್ಷತೇ ॥ ೧೪ ॥**

**ಬಹೂನಿ ಸಂತಿ ನಾಮಾನಿ ರೂಪಾಣಿ ಚ ಸುತಸ್ಯ ತೇ ।**
**ಗುಣಕರ್ಮಾನುರೂಪಾಣಿ ತಾನ್ಯಹಂ ವೇದ ನೋ ಜನಾಃ ॥ ೧೫ ॥**

**ಏಷ ವಃ ಶ್ರೇಯ ಆಧಾಸ್ಯದ್ಗೋಪಗೋಕುಲನಂದನಃ ।**
**ಅನೇನ ಸರ್ವದುರ್ಗಾಣಿ ಯೂಯಮಂಜಸ್ತರಿಷ್ಯಥ ॥ ೧೬ ॥**

**ಪುರಾನೇನ ವ್ರಜಪತೇ ಸಾಧವೋ ದಸ್ಯುಪೀಡಿತಾಃ ।**
**ಅರಾಜಕೇ ರಕ್ಷ್ಯಮಾಣಾ ಜಿಗ್ಯುರ್ದಸ್ಯೂನ್ಸಮೇಧಿತಾಃ ॥ ೧೭ ॥**

**ನಂದಗೋಪನು ಹೇಳಿದನು** – ಆಚಾರ್ಯರೇ! ನೀವು ಏಕಾಂತದಲ್ಲಿ ಗೋಶಾಲೆಯಲ್ಲಿ ಸ್ವಸ್ತಿವಾಚನವನ್ನು ಮಾಡಿ ಈ ಬಾಲಕನಿಗೆ ದ್ವಿಜಾತಿಗೆ ಉಚಿತವಾದ ನಾಮಕರಣಾದಿ ಸಂಸ್ಕಾರಗಳನ್ನು ಮಾಡಿರಿ. ಬೇರೆಯವರಿಗಿರಲಿ, ನನ್ನ ಜ್ಞಾತಿಬಂಧುಗಳಿಗೂ ಈ ವಿಷಯ ತಿಳಿಯದಂತಿರಲಿ. ॥ ೧೦ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಪರೀಕ್ಷಿದ್ರಾಜನೇ! ಗರ್ಗಾಚಾರ್ಯರಾದರೋ ಸಂಸ್ಕಾರವನ್ನು ಮಾಡಲು ಬಯಸುತ್ತಲೇ ಇದ್ದರು. ನಂದಗೋಪನೂ ಒತ್ತಾಯಿಸಿ ಪ್ರಾರ್ಥಿಸಿದಾಗ ಅವರು ಏಕಾಂತದಲ್ಲಿ ಅಡಗಿಕೊಂಡೇ ಗುಪ್ತವಾಗಿ ಇಬ್ಬರು ಬಾಲಕರಿಗೂ ನಾಮಕರಣ ಸಂಸ್ಕಾರವನ್ನು ಮಾಡಿಬಿಟ್ಟರು. ॥ ೧೧ ॥

**ಗರ್ಗಾಚಾರ್ಯರು ಹೇಳುತ್ತಾರೆ** – ನಂದಗೋಪನೇ! ಇವನು ರೋಹಿಣಿಯ ಮಗನು. ಆದುದರಿಂದ ಇವನ ಹೆಸರು ರೌಹಿಣೇಯ. ಇವನು ಬಂಧುಗಳಿಗೂ, ಸುಹೃದರಿಗೂ ತನ್ನ ಒಳ್ಳೆಯ ಗುಣಗಳಿಂದ ಆನಂದವನ್ನುಂಟುಮಾಡುವನು. ಆದರಿಂದ ಇವನ ಇನ್ನೊಂದು ಹೆಸರು 'ರಾಮ' ಎಂದಿರುತ್ತದೆ. ಅಸೀಮ ಬಲನಾಗಿರುವುದರಿಂದ ಇವನಿಗೆ 'ಬಲಭದ್ರ'ನೆಂದೂ ಒಂದು ಹೆಸರು ಇದೆ. ಯಾದವರಲ್ಲಿ ಮತ್ತು ನಿಮ್ಮಲ್ಲಿ ಜಗಳವುಂಟಾದಾಗ ಇವನು ಒಂದಾಗಿಸುವನು. ಆದ್ದರಿಂದ 'ಸಂಕರ್ಷಣ'ನೆಂದೂ ಇನ್ನೊಂದು ಹೆಸರಿನಿಂದ ಇವನನ್ನು ಕರೆಯುವರು. ॥ ೧೨ ॥ ಶ್ರೀಕೃಷ್ಣನ ಕಡೆಗೆ ಕೈತೋರಿಸುತ್ತಾ ಶ್ಯಾಮಲವರ್ಣನಾಗಿರುವ ಇವನು ಪ್ರತಿಯೊಂದು ಯುಗದಲ್ಲಿಯೂ ಒಂದೊಂದು ವರ್ಣದಿಂದ ಶರೀರವನ್ನು ಧರಿಸುವನು. ಕೃತಯುಗದಲ್ಲಿ ಶ್ವೇತವರ್ಣದವನಾಗಿಯೂ, ತ್ರೇತಾಯುಗದಲ್ಲಿ ರಕ್ತವರ್ಣದವನಾಗಿಯೂ, ದ್ವಾಪರಯುಗದಲ್ಲಿ ಪೀತವರ್ಣದವನಾಗಿಯೂ ಹುಟ್ಟಿದ್ದಾನೆ. ಈಗ ದ್ವಾಪರದ ಕಡೆಯಲ್ಲಿ ಕೃಷ್ಣವರ್ಣದವನಾಗಿಯೂ ಹುಟ್ಟಿದ್ದಾನೆ. ಆದುದರಿಂದ ಇವನಿಗೆ ಕೃಷ್ಣನೆಂದೇ ಹೆಸರು ಆಗುವುದು. ॥ ೧೩ ॥ ನಂದಗೋಪನೇ! ಈ ನಿನ್ನ ಪುತ್ರನು ಹಿಂದೆ ವಸುದೇವನ ಮಗನಾಗಿಯೂ ಹುಟ್ಟಿದ್ದನು. ಆದುದರಿಂದಲೇ ಈ ರಹಸ್ಯವನ್ನು ತಿಳಿದಿರುವ ಜನರು ಇವನನ್ನು 'ಶ್ರೀಮಾನ್ ವಾಸುದೇವ' ಎಂದೂ ಕರೆಯುತ್ತಾರೆ. ॥ ೧೪ ॥ ನಿನ್ನ ಪುತ್ರನಿಗೆ ಇನ್ನೂ ಹಲವಾರು ನಾಮಧೇಯಗಳೂ ಇವೆ ಹಾಗೂ ರೂಪಗಳೂ ಅನೇಕವಾಗಿವೆ. ಇವನ ಎಲ್ಲ ಗುಣಗಳು ಮತ್ತು ಕರ್ಮಗಳಿಗೆ ಅನುಸಾರ ಬೇರೆ-ಬೇರೆ ನಾಮಧೇಯಗಳಾಗುತ್ತವೆ. ನಾನಾದರೋ ಅವೆಲ್ಲ ನಾಮಗಳನ್ನು ಅರಿತಿರುವೆನು. ಆದರೆ ಜಗತ್ತಿನ ಸಾಧಾರಣ ಜನರು ಅರಿಯಲಾರರು. ॥ ೧೫ ॥ ಇವನು ನಿಮ್ಮಗಳ ಪರಮ ಕಲ್ಯಾಣವನ್ನುಂಟುಮಾಡುವನು. ಸಮಸ್ತ ಗೋಪರಿಗೂ, ಗೋವುಗಳಿಗೂ ಇವನು ಆನಂದಗೊಳಿಸುವನು. ಇವನ ಸಹಾಯದಿಂದ ನೀವುಗಳು ಮಹಾವಿಪತ್ತುಗಳಿಂದ ಸುಲಭವಾಗಿ ಪಾರಾಗುವಿರಿ.॥ ೧೬ ॥ ವ್ರಜರಾಜನೇ! ಹಿಂದೊಮ್ಮೆ ಭೂಮಂಡಲವು ಅರಾಜಕವಾಗಿತ್ತು. ದರೋಡೆಕೋರರು ಸತ್ಪುರುಷರನ್ನು ಬಹಳ ಪೀಡಿಸುತ್ತಿದ್ದರು. ಆಗ ನಿನ್ನ ಇದೇ ಪುತ್ರನು ಸಜ್ಜನರನ್ನು ರಕ್ಷಿಸಿದನು. ಇವನಿಂದ ಬಲವನ್ನು ಪಡೆದು ಆ ಜನರು ದರೋಡೆಕೋರರನ್ನು ಜಯಿಸಿದ್ದರು. ॥ ೧೭ ॥

ಯ ಏತಸ್ಮಿನ್ಮಹಾಭಾಗಾಃ ಪ್ರೀತಿಂ ಕುರ್ವಂತಿ ಮಾನವಾಃ ।
ನಾರಯೋಽಭಿಭವಂತ್ಯೇತಾನ್ವಿಷ್ಣುಪಕ್ಷಾನಿವಾಸುರಾಃ ॥ ೧೮ ॥

ತಸ್ಮಾನ್ನಂದಾತ್ಮಜೋಽಯಂ ತೇ ನಾರಾಯಣಸಮೋ ಗುಣೈಃ ।
ಶ್ರಿಯಾ ಕೀರ್ತ್ಯಾನುಭಾವೇನ ಗೋಪಾಯಸ್ವ ಸಮಾಹಿತಃ ॥ ೧೯ ॥

ಇತ್ಯಾತ್ಮಾನಂ ಸಮಾದಿಶ್ಯ ಗರ್ಗೇ ಚ ಸ್ವಗೃಹಂ ಗತೇ ।
ನಂದಃ ಪ್ರಮುದಿತೋ ಮೇನೇ ಆತ್ಮಾನಂ ಪೂರ್ಣಮಾಶಿಷಾಮ್ ॥ ೨೦ ॥

ಕಾಲೇನ ವ್ರಜತಾಲ್ಪೇನ ಗೋಕುಲೇ ರಾಮಕೇಶವೌ ।
ಜಾನುಭ್ಯಾಂ ಸಹ ಪಾಣಿಭ್ಯಾಂ ರಿಂಗಮಾಣೌ ವಿಜಹ್ರತುಃ ॥ ೨೧ ॥

ತಾವಂಘ್ರಿಯುಗ್ಮಮನುಕೃಷ್ಯ ಸರೀಸೃಪಂತೌ
ಘೋಷಪ್ರಘೋಷರುಚಿರಂ ವ್ರಜಕರ್ದಮೇಷು ।
ತನ್ನಾದಹೃಷ್ಟಮನಸಾವನುಸೃತ್ಯ ಲೋಕಂ
ಮುಗ್ಧಪ್ರಭೀತವದುಪೇಯತುರಂತಿ ಮಾತ್ರೋಃ ॥ ೨೨ ॥

ತನ್ಮಾತರೌ ನಿಜಸುತೌ ಘೃಣಯಾ ಸ್ನುವಂತ್ಯೌ
ಪಂಕಾಂಗರಾಗರುಚಿರಾವುಪಗುಹ್ಯ ದೋರ್ಭ್ಯಾಮ್ ।
ದತ್ತ್ವಾ ಸ್ತನಂ ಪ್ರಪಿಬತೋಃ ಸ್ಮ ಮುಖಂ ನಿರೀಕ್ಷ್ಯ
ಮುಗ್ಧಸ್ಮಿತಾಲ್ಪದಶನಂ ಯಯತುಃ ಪ್ರಮೋದಮ್ ॥ ೨೩ ॥

ಯಾವ ಮನುಷ್ಯರು ನಿನ್ನ ಈ ಶ್ಯಾಮಲ ಶಿಶುವನ್ನು ಪ್ರೀತಿಸುವರೋ ಅವರು ಮಹಾ ಭಾಗ್ಯಶಾಲಿಗಳೇ ಸರಿ. ಭಗವಾನ್ ವಿಷ್ಣುವಿನ ಕರಕಮಲಗಳ ಛತ್ರಛಾಯೆಯಲ್ಲಿದ್ದ ದೇವತೆಗಳನ್ನು ಅಸುರರು ಜಯಿಸಲಾರರೋ ಹಾಗೆಯೇ ಇವನನ್ನು ಪ್ರೀತಿಸುವವರನ್ನು ಒಳಗಿನ ಅಥವಾ ಹೊರಗಿನ ಯಾವ ಶತ್ರುಗಳು ಜಯಿಸಲಾರರು. ॥ ೧೮ ॥ ನಂದಗೋಪನೇ! ಯಾರ ದೃಷ್ಟಿಯಿಂದ ನೋಡಿದರೂ ಗುಣಗಳಲ್ಲಿ, ಸಂಪತ್ತಿನಲ್ಲಿ, ಸೌಂದರ್ಯದಲ್ಲಿ, ಕೀರ್ತಿಯಲ್ಲಿ, ಮಹಿಮೆಯಲ್ಲಿ ನಿನ್ನ ಈ ಬಾಲಕನು ಸಾಕ್ಷಾತ್ ಭಗವಾನ್ ನಾರಾಯಣನಿಗೆ ಸಮಾನನಾಗಿರುವನು. ನೀನು ಬಹಳ ಎಚ್ಚರಿಕೆಯಿಂದ, ತತ್ಪರತೆಯಿಂದ ಇವನನ್ನು ರಕ್ಷಿಸುತ್ತಿರು. ॥ ೧೯ ॥ ಹೀಗೆ ನಂದಗೋಪನಿಗೆ ಗರ್ಗರು 'ಇವನೇ ಭಗವಂತ' ಎಂದು ಮಾತ್ರ ಹೇಳದೆ ಉಳಿದೆಲ್ಲ ವಿಷಯವನ್ನು ಹೇಳಿ, ಅವನ ಅನುಮತಿಯನ್ನು ಪಡೆದು ತಮ್ಮ ಆಶ್ರಮಕ್ಕೆ ತೆರಳಿದರು. ಗರ್ಗರ ಮಾತನ್ನು ಕೇಳಿ ನಂದಗೋಪನು ಆನಂದಭರಿತನಾದನು. ತನ್ನ ಆಸೆಗಳೆಲ್ಲವೂ ತೀರಿದುವೆಂದೂ, ಕೃತಕೃತ್ಯನಾದೆನೆಂದೂ ಆತನು ಭಾವಿಸಿಕೊಂಡನು. ॥ ೨೦ ॥

ಪರೀಕ್ಷಿತನೇ! ಕೆಲವು ದಿವಸಗಳಲ್ಲಿಯೇ ರಾಮ ಮತ್ತು ಶ್ಯಾಮರು ಅಂಬೆಗಾಲಿಟ್ಟುಕೊಂಡು ಗೋಕುಲದಲ್ಲೆಲ್ಲ ಆಟವಾಡತೊಡಗಿದರು. ॥ ೨೧ ॥ ಇಬ್ಬರು ಸೋದರರೂ ತಮ್ಮ ಸುಕುಮಾರವಾದ ಕಾಲುಗಳನ್ನೆಳೆಯುತ್ತಾ ಗೋಕುಲದ ಧೂಳಿನಲ್ಲಿ ನಡೆಯುತ್ತಿದ್ದರು. ಆ ಸಮಯದಲ್ಲಿ ಕಾಲುಗಳಲ್ಲಿ ಮತ್ತು ಸೊಂಟದಲ್ಲಿ ಅಲಂಕೃತವಾದ ಗೆಜ್ಜೆಗಳು ಉಲಿಯುತ್ತಿದ್ದವು. ಆ ಮಂಜುಳ ಮಧುರ ಧ್ವನಿಯನ್ನು ಕೇಳಿ ಅವರಿಬ್ಬರೂ ಕಿಲ-ಕಿಲನೆ ನಗುತ್ತಿದ್ದರು. ಕೆಲವೊಮ್ಮೆ ಅವರು ದಾರಿಯಲ್ಲಿ ಯಾರೋ ಅಜ್ಞಾತವ್ಯಕ್ತಿಯ ಹಿಂದೆ-ಹಿಂದೆಯೇ ಸ್ವಲ್ಪದೂರ ಹೋಗುತ್ತಿದ್ದರು. ಮತ್ತೆ ಇವನು ಯಾರೋ ಬೇರೆ ಎಂದು ತಿಳಿದಾಗ ಮರುಕ್ಷಣದಲ್ಲೇ ಭಯಗೊಂಡವರಂತೆ ರೋಹಿಣೀ-ಯಶೋದೆಯರ ಬಳಿಗೆ ಬಂದು ಬಿಡುತ್ತಿದ್ದರು. ॥ ೨೨ ॥ ತಾಯಂದಿರು ಇದೆಲ್ಲವನ್ನು ನೋಡಿ ಸ್ನೇಹಪರವಶರಾಗುತ್ತಿದ್ದರು. ಅವರ ಸ್ತನಗಳಿಂದ ಹಾಲು ತಾನಾಗಿಯೇ ಒಸರುತ್ತಿತ್ತು. ಅವರ ಇಬ್ಬರೂ ಮುದ್ದುಕಂದಮ್ಮಗಳು ತಮ್ಮ ಶರೀರದಲ್ಲಿ ಧೂಳಿನ ಅಂಗರಾಗವನ್ನು ಹಚ್ಚಿಕೊಂಡು ಮರಳಿದಾಗ ಅವರ ಸೌಂದರ್ಯವು ಇನ್ನೂ ಹೆಚ್ಚುತ್ತಿತ್ತು. ಅವರು ಬರುತ್ತಲೇ ತಾಯಂದಿರು ಎರಡೂ ಕೈಗಳಿಂದ ಬಾಚಿತಬ್ಬಿಕೊಂಡು ತೊಡೆಗಳಲ್ಲಿ ಕುಳ್ಳಿರಿಸಿಕೊಂಡು ಸ್ತನ್ಯಪಾನಮಾಡಿಸುತ್ತಿದ್ದರು. ಅವರು ಹಾಲುಕುಡಿಯುತ್ತಿರುವಾಗ ನಡು-ನಡುವೆ ಮುಗುಳ್ನಗುತ್ತಾ ತಮ್ಮ ತಾಯಂದಿರ ಕಡೆಗೆ ನೋಡತೊಡಗಿದಾಗ ಅವರು ಬಾಲಕರ ಮಂದ-ಮಂದ ಮುಗುಳ್ನಗೆಯನ್ನು ಪುಟ್ಟದಾದ ಹಾಲುಹಲ್ಲುಗಳನ್ನೂ, ಮುದ್ದಾದ ಮುಖವನ್ನೂ ನೋಡಿ ಆನಂದಸಾಗರದಲ್ಲಿ ಮುಳುಗಿಹೋಗುತ್ತಿದ್ದರು. ॥ ೨೩ ॥ ರಾಮ ಮತ್ತು ಶ್ಯಾಮರಿಬ್ಬರೂ ಸ್ವಲ್ಪ ದೊಡ್ಡವರಾದಾಗ ವ್ರಜದ ಮನೆಯ ಹೊರಗೆ ಅವರು ನಡೆಸುತ್ತಿದ್ದ ಲೀಲೆಗಳನ್ನು ಗೋಪಿಯರು ನೋಡುತ್ತಾ ನಿಂತುಬಿಡುತ್ತಿದ್ದರು. ಅವರು ಯಾವುದೋ ಮಲಗಿದ ಕರುವಿನ ಬಾಲ

ಯರ್ಹ್ಯಂಗನಾದರ್ಶನೀಯಕುಮಾರಲೀಲಾ-
ವಂತರ್ವ್ರಜೇ ತದಬಲಾಃ ಪ್ರಗೃಹೀತಪುಚ್ಛೈಃ ।
ವತ್ಸೈರಿತಸ್ತತ ಉಭಾವನುಕೃಷ್ಯಮಾಣೌ
ಪ್ರೇಕ್ಷಂತ್ಯ ಉಜ್ಝಿತಗೃಹಾ ಜಹೃಷುರ್ಹಸಂತ್ಯಃ ॥ ೨೪ ॥

ಶೃಂಗ್ಯಗ್ನಿದಂಷ್ಟ್ರ್ಯಸಿಜಲದ್ವಿಜಕಂಟಕೇಭ್ಯಃ
ಕ್ರೀಡಾಪರಾವತಿಚಲೌ ಸ್ವಸುತೌ ನಿಷೇದ್ಧುಮ್ ।
ಗೃಹ್ಯಾಣಿ ಕರ್ತುಮಪಿ ಯತ್ರ ನ ತಜ್ಜನನ್ಯೌ
ಶೇಕಾತ ಆಪತುರಲಂ ಮನಸೋಽನವಸ್ಥಾಮ್ ॥ ೨೫ ॥

ಕಾಲೇನಾಲ್ಪೇನ ರಾಜರ್ಷೇ ರಾಮಃ ಕೃಷ್ಣಶ್ಚ ಗೋಕುಲೇ ।
ಅಘೃಷ್ಟಜಾನುಭಿಃ ಪದ್ಭಿರ್ವಿಚಕ್ರಮತುರಂಜಸಾ ॥ ೨೬ ॥

ತತಸ್ತು ಭಗವಾನ್ಕೃಷ್ಣೋ ವಯಸ್ಯೈರ್ವ್ರಜಬಾಲಕೈಃ ।
ಸಹರಾಮೋ ವ್ರಜಸ್ತ್ರೀಣಾಂ ಚಿಕ್ರೀಡೇ ಜನಯನ್ಮುದಮ್ ॥ ೨೭ ॥

ಕೃಷ್ಣಸ್ಯ ಗೋಪ್ಯೋ ರುಚಿರಂ ವೀಕ್ಷ್ಯ ಕೌಮಾರಚಾಪಲಮ್ ।
ಶೃಣ್ವತ್ಯಾಃ ಕಿಲ ತನ್ಮಾತುರಿತಿ ಹೋಚುಃ ಸಮಾಗತಾಃ ॥ ೨೮ ॥

ವನ್ನು ಹಿಡಿದುಕೊಂಡಾಗ ಹಾಗೂ ಕರುವು ಹೆದರಿ ಅತ್ತ-ಇತ್ತ ಓಡುವಾಗ ಅವರಿಬ್ಬರೂ ಇನ್ನೂ ಜೋರಾಗಿ ಬಾಲವನ್ನು ಹಿಡಿದುಕೊಂಡುಬಿಡುತ್ತಿದ್ದರು. ಕರುಗಳು ಅವರನ್ನೂ ಎಳೆದುಕೊಂಡು ಓಡತೊಡಗುತ್ತಿದ್ದವು. ಗೋಪಿಯರು ತಮ್ಮ ಮನೆಗೆಲಸವನ್ನೆಲ್ಲ ಬಿಟ್ಟು ಇದೆಲ್ಲವನ್ನು ನೋಡುತ್ತಲೇ ಇರುತ್ತಿದ್ದರು ಮತ್ತು ಹೊಟ್ಟೆ ಹುಣ್ಣಾಗುವಂತೆ ನಗುತ್ತಾ ಪರಮಾನಂದದಲ್ಲಿ ಮಗ್ನರಾಗುತ್ತಿದ್ದರು. ॥ ೨೪ ॥ ಕೃಷ್ಣ-ಬಲರಾಮರಿಬ್ಬರೂ ಬಹಳ ಚಂಚಲರೂ, ತುಂಟರೂ ಆಗಿದ್ದರು. ಅವರು ಎಲ್ಲೋ ಜಿಂಕೆ, ಹಸು ಮುಂತಾದ ಕೋಡುಗಳುಳ್ಳ ಪಶುಗಳ ಬಳಿಗೆ ಧಾವಿಸಿದರೆ, ಕೆಲವೊಮ್ಮೆ ಉರಿಯುತ್ತಿರುವ ಬೆಂಕಿಯ ಬಳಿಗೆ ಆಡಲು ಓಡುತ್ತಿದ್ದರು. ಕೆಲವೊಮ್ಮೆ ಹಲ್ಲುಗಳಿಂದ ಕಡಿಯುವಂತಹ ನಾಯಿಗಳ ಬಳಿಗೆ ತಲುಪಿದರೆ, ಕೆಲವೊಮ್ಮೆ ಕಣ್ಣುತಪ್ಪಿಸಿ ಖಡ್ಗವನ್ನೆತ್ತಿಕೊಳ್ಳುತ್ತಿದ್ದರು. ಕೆಲವೊಮ್ಮೆ ಬಾವಿ-ಹಳ್ಳಗಳ ಬಳಿಗೆ ಹೋಗಿ ನೀರಿನಲ್ಲಿ ಬೀಳುವರೋ ಎಂದು ಅನಿಸುತ್ತಿತ್ತು. ಕೆಲವೊಮ್ಮೆ ನವಿಲು ಮುಂತಾದ ಪಕ್ಷಿಗಳ ಹತ್ತಿರ ಹೋದರೆ, ಕೆಲವೊಮ್ಮೆ ಮುಳ್ಳುಗಳಿರುವಲ್ಲಿಗೆ ಮುಂದರಿಯುತ್ತಿದ್ದರು. ತಾಯಂದಿರು ಅವರನ್ನು ಬಹಳವಾಗಿ ನಿವಾರಿಸುತ್ತಿದ್ದರು. ಆದರೆ ಅವರ ಮಾತು ಕೇಳುತ್ತಲೇ ಇರಲಿಲ್ಲ. ಇಂತಹ ಸ್ಥಿತಿಯಲ್ಲಿ ಅವರಿಂದ ಮನೆಯ ಕೆಲಸವನ್ನು ನಿರ್ವಹಿಸಲಾಗುತ್ತಿರಲಿಲ್ಲ. ಅವರ ಚಿತ್ತವು ಮಕ್ಕಳನ್ನು ಭಯದ ವಸ್ತುಗಳಿಂದ ಕಾಪಾಡುವ ಚಿಂತೆಯಲ್ಲೇ ಅತ್ಯಂತ ಚಂಚಲವಾಗಿರುತ್ತಿತ್ತು. ॥ ೨೫ ॥

ರಾಜರ್ಷಿಯೇ! ಕೆಲವೇ ದಿನಗಳಲ್ಲಿ ಯಶೋದೆ ಮತ್ತು ರೋಹಿಣಿಯರ ಮುದ್ದಿನ ಮಕ್ಕಳು ಅಂಬೆಗಾಲನ್ನಿಡುವುದನ್ನು ಬಿಟ್ಟು ಗೋಕುಲದಲ್ಲಿ ನಡೆದಾಡಲು ಪ್ರಾರಂಭಿಸಿದರು. ॥ ೨೬ ॥ ಕೃಷ್ಣನು ವ್ರಜವಾಸಿಯರಿಗೆ ಪ್ರತ್ಯಕ್ಷ ಭಗವಂತನೇ ಆಗಿದ್ದು, ಪರಮ ಸುಂದರ, ಪರಮಮಧುರವಾಗಿದ್ದಾನೆ. ಈಗ ಅವನು ಮತ್ತು ಬಲರಾಮರಿಬ್ಬರೂ ತಮ್ಮ ವಯಸ್ಸಿನ ಗೊಲ್ಲಬಾಲಕರೊಂದಿಗೆ ಜೊತೆ ಸೇರಿಸಿಕೊಂಡು ಆಟವಾಡಲು ಗೋಕುಲದಲ್ಲೆಲ್ಲ ಓಡಾಡುತ್ತಿದ್ದರು. ವ್ರಜದ ಭಾಗ್ಯವತಿಯರಾದ ಗೋಪಿಯರನ್ನು ಸಂತೋಷಪಡಿಸುತ್ತಾ ಅನೇಕ ರೀತಿಯ ಆಟಗಳನ್ನು ಆಡುತ್ತಾರೆ. ॥ ೨೭ ॥ ಶ್ರೀಕೃಷ್ಣನ ಕೌಮಾರ್ಯದ ಚಂಚಲತೆಯಿಂದ ಕೂಡಿದ ಆಟ ಪಾಟಗಳು ಅತ್ಯಂತ ಮನೋಹರವಾಗಿದ್ದುವು. ಗೋಪಿಯರಿಗಾದರೋ ಅವುಗಳು ಬಹಳ ಸುಂದರವಾಗಿ, ಮಧುರವಾಗಿ ಕಾಣುತ್ತಿದ್ದವು. ಒಂದು ದಿನ ಅವರೆಲ್ಲರೂ ಸೇರಿ ನಂದಗೋಪನ ಮನೆಗೆ ಬಂದು ತಾಯಿ ಯಶೋದೆಯನ್ನು ಸಂಬೋಧಿಸುತ್ತಾ ಕೃಷ್ಣನ ತುಂಟತನವನ್ನು ಹೇಳತೊಡಗಿದರು. ॥ ೨೮ ॥ ಅಮ್ಮಾ! ಯಶೋದೆಯೇ! ನಿನ್ನ ಮಗನು ಕೊಡುವ ಉಪಟಳವನ್ನು ಎಷ್ಟೆಂದು ವರ್ಣಿಸೋಣ! ನಿನ್ನ ಮಗನು ನಿಶ್ಚಯವಾಗಿ ಬಹಳ ತುಂಟನಾಗಿರುವನು. ಹಾಲು ಕರೆಯುವ ಸಮಯವಲ್ಲದಿದ್ದರೂ ಕರುಗಳನ್ನು ಬಿಟ್ಟುಬಿಡುತ್ತಾನೆ. ನಾವು ಗದರಿಸಿದರೆ ಅಣಕಿಸಿ ನಗುತ್ತಾನೆ. ಇವನು ಉಪಾಯಾಂತರಗಳಿಂದ ನಾವು ಬಚ್ಚಿಟ್ಟಿದ್ದ ರುಚಿಕರವಾದ ಹಾಲು-ಮೊಸರುಗಳನ್ನು ಕದ್ದು ತಿನ್ನುತ್ತಾನೆ. ಕೇವಲ

ವತ್ಸಾನ್ಮುಂಚನ್ ಕ್ವಚಿದಸಮಯೇ ಕ್ರೋಶಸಂಜಾತಹಾಸಃ
ಸ್ತೇಯಂ ಸ್ವಾದ್ವತ್ತ್ಯಥ ದಧಿ ಪಯಃ ಕಲ್ಪಿತೈಃ ಸ್ತೇಯಯೋಗೈಃ ।
ಮರ್ಕಾನ್ಭೋಕ್ಷ್ಯನ್ವಿಭಜತಿ ಸ ಚೇನ್ನಾತ್ತಿ ಭಾಂಡಂ ಭಿನತ್ತಿ
ದ್ರವ್ಯಾಲಾಭೇ ಸ ಗೃಹಕುಪಿತೋ ಯಾತ್ಯುಪಕ್ರೋಶ್ಯ ತೋಕಾನ್
॥ ೨೯ ॥

ತಾನೇ ತಿಂದರೆ ತಿನ್ನಲಿ, ಪಾಪ. ಆದರೆ ಹಾಗೆಮಾಡದೆ ಇವನು ಎಲ್ಲ ಹಾಲು-ಮೊಸರುಗಳನ್ನು ಮಂಗಗಳಿಗೆ ಮತ್ತು ಜೊತೆಗಾರ ಬಾಲಕರಿಗೆ ಹಂಚಿಬಿಡುತ್ತಾನೆ. ಅವು ಕೂಡ ಹೊಟ್ಟೆತುಂಬಾ ತಿಂದು ಇನ್ನು ತಿನ್ನಲು ಆಗದಿದ್ದಾಗ ಇವನು ನಮ್ಮ ಹಾಲು-ಮೊಸರಿನ ಗಡಿಗೆಗಳನ್ನು ಒಡೆದು ಹಾಕುತ್ತಾನೆ. ಇವನಿಗೆ ಮನೆಯಲ್ಲಿ ಬೇಕಾದ ವಸ್ತುವು ಸಿಗದಿದ್ದರೆ ಮನೆಯವರ ಮೇಲೆ ರೇಗುತ್ತಾನೆ ಮತ್ತು ನಮ್ಮ ಮಕ್ಕಳನ್ನು ಕೀಟಲೆಮಾಡಿ ಅಳಿಸುತ್ತಾನೆ. ॥ ೨೯ ॥

ಹಸ್ತಾಗ್ರಾಹ್ಯೇ ರಚಯತಿ ವಿಧಿಂ ಪೀಠಕೋಲೂಖಲಾದ್ಯೈ-
ಶ್ಛಿದ್ರಂ ಹ್ಯಂತರ್ನಿಹಿತವಯುನಃ ಶಿಕ್ಯಭಾಂಡೇಷು ತದ್ವಿತ್ ।
ಧ್ವಾಂತಾಗಾರೇ ಧೃತಮಣಿಗಣಂ ಸ್ವಾಂಗಮರ್ಥಪ್ರದೀಪಂ
ಕಾಲೇ ಗೋಪ್ಯೋ ಯರ್ಹಿ ಗೃಹಕೃತ್ಯೇಷು ಸುವ್ಯಗ್ರಚಿತ್ತಾಃ
॥ ೩೦ ॥

ನಾವು ಹಾಲು ಮೊಸರುಗಳನ್ನು ನೆಲವುಗಳಲ್ಲಿ ಇಟ್ಟುಬಿಡುತ್ತೇವೆ. ಇವನ ಪುಟ್ಟ ಕೈ-ಕಾಲುಗಳು ಅಲ್ಲಿಗೆ ಎಟಕದಿದ್ದಾಗ ನಾನಾ ಉಪಾಯಗಳನ್ನು ಮಾಡುತ್ತಾನೆ. ಕೆಲವೊಮ್ಮೆ ನಾಲ್ಕಾರು ಮಣೆಗಳನ್ನು ಒಂದರ ಮೇಲೊಂದು ಇಟ್ಟುಬಿಡುತ್ತಾನೆ. ಕೆಲವೊಮ್ಮೆ ಒರಳಿನಮೇಲೆ ಹತ್ತಿಬಿಡುತ್ತಾನೆ. ಕೆಲವೊಮ್ಮೆ ಒರಳಿನ ಮೇಲೆ ಮಣೆಯನ್ನಿಡುತ್ತಾನೆ. ಕೆಲವೊಮ್ಮೆ ತನ್ನ ಜೊತೆಯ ಬಾಲಕನ ಹೆಗಲೇರಿ ಬಿಡುತ್ತಾನೆ. ಇಷ್ಟಾದರೂ ಕಾರ್ಯಸಫಲವಾಗದಿದ್ದರೆ ಇವನು ಕೆಳಗಿನಿಂದಲೇ ಕೋಲಿನಿಂದ ಪಾತ್ರೆಗೆ ತೂತು ಮಾಡಿಬಿಡುತ್ತಾನೆ. ಯಾವ-ಯಾವ ನೆಲುವಿನಲ್ಲಿ ಯಾವ ಪಾತ್ರೆಯಲ್ಲಿ ಏನೇನಿದೆ ಎಂಬುದು ಇವನಿಗೆ ಚೆನ್ನಾಗಿ ತಿಳಿದಿರುತ್ತದೆ. ಯಾರಿಗೂ ತಿಳಿಯದಂತೆ ಪಾತ್ರೆಗೆ ಛಿದ್ರ ಕೊರೆಯುವ ಕಲೆ ಇವನಿಗೆ ಚೆನ್ನಾಗಿ ತಿಳಿದಿದೆ. ನಾವು ನಮ್ಮ ವಸ್ತುಗಳನ್ನು ಗಾಢವಾದ ಕತ್ತಲಲ್ಲಿ ಅಡಗಿಸಿಟ್ಟರೂ ನಂದ ರಾಣಿಯೇ! ನೀನು ಇವನಿಗೆ ತೊಡಿಸಿದ ನವರತ್ನಮಯ ಆಭೂಷಣಗಳ ಪ್ರಭೆಯಿಂದ ಎಲ್ಲವನ್ನೂ ನೋಡಿಕೊಳ್ಳುವನು. ಎಲ್ಲವನ್ನೂ ಕಾಣಿಸುವಂತಹ ಒಂದು ಜ್ಯೋತಿಯೇ ಇವನ ಶರೀರದಲ್ಲಿದೆ. ಯಾವಾಗ ಯಾರು ಎಲ್ಲಿ ಇರುತ್ತಾರೆ ಎಂಬುದು ಇವನಿಗೆ ನಿಶ್ಚಿತವಾಗಿ ತಿಳಿಯುವಷ್ಟು ಇವನು ಜಾಣನಾಗಿದ್ದಾನೆ. ನಾವೆಲ್ಲರೂ ಮನೆಗೆಲಸದಲ್ಲಿ ನಿರತರಾದಾಗ ಇವನು ತನ್ನ ಕಾರ್ಯವನ್ನು ಮಾಡಿಬಿಡುತ್ತಾನೆ. ॥ ೩೦ ॥

ಏವಂ ಧಾರ್ಷ್ಟ್ಯಾನ್ಯುಶತಿ ಕುರುತೇ ಮೇಹನಾದೀನಿ ವಾಸ್ತೌ
ಸ್ತೇಯೋಪಾಯೈರ್ವಿರಚಿತಕೃತಿಃ ಸುಪ್ರತೀಕೋ ಯಥಾಽಽಸ್ತೇ ।
ಇತ್ಥಂ ಸ್ತ್ರೀಭಿಃ ಸಭಯನಯನಶ್ರೀಮುಖಾಲೋಕಿನೀಭಿ-
ರ್ವ್ಯಾಖ್ಯಾತಾರ್ಥಾ ಪ್ರಹಸಿತಮುಖೀ ನ ಹ್ಯುಪಾಲಬ್ಧುಮೈಚ್ಛತ್
॥ ೩೧ ॥

ಇಷ್ಟು ಮಾಡಿಯೂ ದೊಡ್ಡಸ್ತಿಕೆಯ ಮಾತನಾಡುತ್ತಾ ನಮ್ಮನ್ನು ಕಳ್ಳೆಯರೆಂದು ದಬಾಯಿಸುತ್ತಾನೆ ಮತ್ತು ಮನೆಯ ಯಜಮಾನನಂತೆ ವರ್ತಿಸುತ್ತಾನೆ. ಇಷ್ಟೇ ಅಲ್ಲ, ನಾವು ಗುಡಿಸಿ, ಸಾರಿಸಿ ಸ್ವಚ್ಛಗೊಳಿಸಿದ ಮನೆಯನ್ನು ಇವನು ಮೂತ್ರ-ಪುರೀಷೋತ್ಸರ್ಜನಗಳಿಂದ ಕೆಡಿಸಿಬಿಡುತ್ತಾನೆ. ಮನೆ-ಮನೆಯಲ್ಲಿಯೂ ಹೀಗೆ ತುಂಟತನ ಮಾಡುವ ಈ ಪೋರನು ನಿನ್ನ ಬಳಿಯಲ್ಲಿ ಏನೂ ಅರಿಯದವನಂತೆ ಹೆದರಿ ನಿಂತಿದ್ದಾನಲ್ಲ! ಎಂದು ದೂರುತ್ತಿದ್ದ ಗೋಪಿಯರ ಮಾತನ್ನು ಕೇಳಿದ ಯಶೋದೆಯು ಭಯಗೊಂಡವನಂತೆ ನಟಿಸುತ್ತಿದ್ದ ಮುದ್ದುಕೃಷ್ಣನ ಮುದ್ದುಮುಖವನ್ನು ನೋಡಿ ನಕ್ಕುಬಿಟ್ಟಳು. ಮುದ್ದಿನ ಕಂದಮ್ಮನಾದ ಕೃಷ್ಣನಲ್ಲಿ ವಿಚಾರಿಸಲೂ ಆಗದಿರುವ ಆಕೆಯು ಗದರಿಸಲು ಸಾಧ್ಯವೇ ? ॥ ೩೧ ॥

ಏಕದಾ ಕ್ರೀಡಮಾನಾಸ್ತೇ ರಾಮಾದ್ಯಾ ಗೋಪದಾರಕಾಃ ।
ಕೃಷ್ಣೋ ಮೃದಂ ಭಕ್ಷಿತವಾನಿತಿ ಮಾತ್ರೇ ನ್ಯವೇದಯನ್
॥ ೩೨ ॥

ಒಂದು ದಿನ ಬಲರಾಮನೇ ಮೊದಲಾದ ಗೋಪಬಾಲಕರು ಶ್ರೀಕೃಷ್ಣನೊಡನೆ ಆಟವಾಡುತ್ತಿದ್ದರು. ಆಗ ಒಮ್ಮೆ ಶ್ರೀಕೃಷ್ಣನು ಆಟ ಆಡುತ್ತಿರುವಾಗ ಮಣ್ಣು ತಿಂದನು. ಗೋಪಾಲಕರು ಇದನ್ನು ನೋಡಿ ಬಂದು ಯಶೋದೆಗೆ ದೂರಿತ್ತರು. ॥ ೩೨ ॥

ಸಾ ಗೃಹೀತ್ವಾ ಕರೇ ಕೃಷ್ಣಮುಪಾಲಭ್ಯ ಹಿತೈಷಿಣೀ ।
ಯಶೋದಾ ಭಯಸಂಭ್ರಾಂತಪ್ರೇಕ್ಷಣಾಕ್ಷಮಭಾಷತ
॥ ೩೩ ॥

ಕಸ್ಮಾನ್ಮೃದಮದಾಂತಾತ್ಮನ್ ಭವಾನ್ಭಕ್ಷಿತವಾನ್ರಹಃ ।
ವದಂತಿ ತಾವಕಾ ಹ್ಯೇತೇ ಕುಮಾರಾಸ್ತೇಗ್ರಜೋಽಪ್ಯಯಮ್
॥ ೩೪ ॥

ಶ್ರೀಕೃಷ್ಣ ಉವಾಚ

ನಾಹಂ ಭಕ್ಷಿತವಾನಂಬ ಸರ್ವೇ ಮಿಥ್ಯಾಭಿಶಂಸಿನಃ ।
ಯದಿ ಸತ್ಯಗಿರಸ್ತರ್ಹಿ ಸಮಕ್ಷಂ ಪಶ್ಯ ಮೇ ಮುಖಮ್
॥ ೩೫ ॥

ಯದ್ಯೇವಂ ತರ್ಹಿ ವ್ಯಾದೇಹೀತ್ಯುಕ್ತಃ ಸ ಭಗವಾನ್ಹರಿಃ ।
ವ್ಯಾದತ್ತಾವ್ಯಾಹತೈಶ್ವರ್ಯಃ ಕ್ರೀಡಾಮನುಜಬಾಲಕಃ
॥ ೩೬ ॥

ಸಾ ತತ್ರ ದದೃಶೇ ವಿಶ್ವಂ ಜಗತ್ ಸ್ಥಾಸ್ನು ಚ ಖಂ ದಿಶಃ ।
ಸಾದ್ರಿದ್ವೀಪಾಬ್ಧಿಭೂಗೋಲಂ ಸವಾಯ್ವಗ್ನೀಂದು ತಾರಕಮ್
॥ ೩೭ ॥

ಜ್ಯೋತಿಶ್ಚಕ್ರಂ ಜಲಂ ತೇಜೋ ನಭಸ್ವಾನ್ವಿಯದೇವ ಚ ।
ವೈಕಾರಿಕಾಣೀಂದ್ರಿಯಾಣಿ ಮನೋ ಮಾತ್ರಾ ಗುಣಾಸ್ತ್ರಯಃ
॥ ೩೮ ॥

ಏತದ್ವಿಚಿತ್ರಂ ಸಹ ಜೀವಕಾಲ-
ಸ್ವಭಾವಕರ್ಮಾಶಯಲಿಂಗಭೇದಮ್ ।
ಸೂನೋಸ್ತನೌ ವೀಕ್ಷ್ಯ ವಿದಾರಿತಾಸ್ಯೇ
ವ್ರಜಂ ಸಹಾತ್ಮಾನಮವಾಪ ಶಂಕಾಮ್ ॥ ೩೯ ॥

ಕಿಂ ಸ್ವಪ್ನ ಏತದುತ ದೇವಮಾಯಾ
ಕಿಂ ವಾ ಮದೀಯೋ ಬತ ಬುದ್ಧಿಮೋಹಃ ।
ಅಥೋ ಅಮುಷ್ಯೈವ ಮಮಾರ್ಭಕಸ್ಯ
ಯಃ ಕಶ್ಚನೌತ್ಪತ್ತಿಕ ಆತ್ಮಯೋಗಃ ॥ ೪೦ ॥

ಅಥೋ ಯಥಾವನ್ನ ವಿತರ್ಕಗೋಚರಂ
ಚೇತೋಮನಃ ಕರ್ಮವಚೋಭಿರಂಜಸಾ ।
ಯದಾಶ್ರಯಂ ಯೇನ ಯತಃ ಪ್ರತೀಯತೇ
ಸುದುರ್ವಿಭಾವ್ಯಂ ಪ್ರಣತಾಸ್ಮಿ ತತ್ಪದಮ್ ॥ ೪೧ ॥

ಮಗುವಿನ ಹಿತೈಷಿಣಿಯಾದ ಯಶೋದೆಯು ಒಡನೆಯೇ ಶ್ರೀಕೃಷ್ಣನ ಕೈಗಳನ್ನು ಹಿಡಿದುಕೊಂಡಳು. ಆ ಸಮಯದಲ್ಲಿ ಶ್ರೀಕೃಷ್ಣನು ಹೆದರಿದವನಂತೆ ನಟಿಸುತ್ತಿದ್ದ ಅವನ ಕಣ್ಣುಗಳು ಕೆಳ ಮುಖವಾಗಿತ್ತು. ಯಶೋದೆಯು ಗದರಿಸುತ್ತಾ ಕೇಳಿದಳು ॥೩೩॥ ಏನೋ ತುಂಟ ! ನೀನು ಬಹಳ ಉದ್ಧಟನಾಗಿರುವೆ. ನೀನು ಅಡಗಿ ಕೊಂಡು ಮಣ್ಣನ್ನೇಕೆ ತಿಂದೆ ? ಹಾಗೆ ತಿಂದೆಯೆಂದು ನಿನ್ನ ಗೆಳೆಯರು ಹೇಳುತ್ತಿದ್ದಾರೆ. ನಿನ್ನಣ್ಣ ಬಲರಾಮನೂ ಹೇಳುತ್ತಿರುವನು. ॥ ೩೪ ॥

**ಭಗವಾನ್ ಶ್ರೀಕೃಷ್ಣನು ಹೇಳಿದನು** – ಅಮ್ಮಾ! ನಾನು ಖಂಡಿತವಾಗಿ ಮಣ್ಣು ತಿಂದಿಲ್ಲ. ಇವರೆಲ್ಲರೂ ಸುಳ್ಳನ್ನೇ ಹೇಳುತ್ತಿರುವರು. ನೀನು ಇವರ ಮಾತು ನಿಜವೆಂದು ತಿಳಿಯುವೆಯಾದರೆ ನನ್ನ ಮುಖ ನಿನ್ನ ಇದಿರಿಗೆ ಇದೆಯಲ್ಲ, ನೀನೇ ಪ್ರತ್ಯಕ್ಷವಾಗಿ ಕಣ್ಣಿಂದ ನೋಡು. ಆಗ ನಾನು ಮಣ್ಣು ತಿಂದಿರುವೆನೊ, ಇಲ್ಲವೋ ಎಂಬುದು ಗೊತ್ತಾಗುತ್ತಲ್ಲ! ॥ ೩೫ ॥ ಯಶೋದೆಯು ಹೇಳಿದಳು ಸರಿ, ಹಾಗಾದರೆ ಬಾಯ್ತೆರೆ, ನಾನೇ ನೋಡುತ್ತೇನೆ. ತಾಯಿಯು ಹೀಗೆ ಹೇಳಿದಾಗ ಭಗವಾನ್ ಶ್ರೀಕೃಷ್ಣನು ತನ್ನ ಬಾಯನ್ನು ತೆರೆದನು. ಪರೀಕ್ಷಿತನೇ ! ಶ್ರೀಕೃಷ್ಣನು ಅನಂತೈಶ್ವರ್ಯನು. ಅವನು ಕೇವಲ ಲೀಲೆಗಾಗಿಯೇ ಮನುಷ್ಯ ಬಾಲಕನಾಗಿದ್ದನು. ॥ ೩೬ ॥ ಯಶೋದೆಯು ಬಗ್ಗಿ ನೋಡುತ್ತಾಳೆ – ಅವನ ಬಾಯಲ್ಲಿ ಚರಾಚರ ಸಮಸ್ತ ಜಗತ್ತು ಅಡಕವಾಗಿರುವುದನ್ನು ನೋಡಿದಳು. ಆಕಾಶ, ದಿಕ್ಕುಗಳು, ಪರ್ವತಗಳು, ದ್ವೀಪಗಳೂ ಮತ್ತು ಸಮುದ್ರ ಸಹಿತ ಇಡೀ ಭೂಮಂಡಲ, ಬೀಸುವ ಗಾಳಿ, ವಿದ್ಯುತ್, ಅಗ್ನಿ, ಚಂದ್ರ-ತಾರೆಗಳು, ಸಂಪೂರ್ಣವಾದ ಜ್ಯೋತಿರ್ಮಂಡಲ, ಜಲ, ತೇಜಸ್ಸು, ಪವನ, ವಿಯತ್ (ಪ್ರಾಣಿಗಳು ಓಡಾಡುವ ಆಕಾಶ), ರಸಾತಳವೇ ಮುಂತಾದ ಅಧೋಲೋಕಗಳು. ಅಧಿಷ್ಠಾನ ದೇವತೆಗಳಿಂದ ಕೂಡಿದ ಇಂದ್ರಿಯಗಳು, ಮನಸ್ಸು ಪಂಚತನ್ಮಾತ್ರೆಗಳು ಮತ್ತು ತ್ರಿಗುಣಗಳು ಶ್ರೀಕೃಷ್ಣನ ಬಾಯಲ್ಲಿ ಕಂಡು ಬಂದವು. ॥ ೩೭-೩೮ ॥ ಪರೀಕ್ಷಿತನೇ ! ಜೀವಾತ್ಮರು, ಕಾಲ, ಸ್ವಭಾವ, ಕರ್ಮ, ಅವರ ವಾಸನೆಗಳು, ಶರೀರಾದಿಗಳಿಂದ ಭಿನ್ನ-ಭಿನ್ನವಾಗಿ ತೋರುವ ಈ ಇಡೀ ವಿಚಿತ್ರ ಜಗತ್ತು, ಅದರಲ್ಲಿಯೇ ಇರುವ ಗೋಕುಲ ಮತ್ತು ಆ ಗೋಕುಲದಲ್ಲಿ ತಾನಿರುವುದನ್ನು ಯಶೋದೆಯು ಶ್ರೀಕೃಷ್ಣನ ಮುದ್ದಾದ ತೆರೆದ ಬಾಯಿಯಲ್ಲಿ ನೋಡಿ ಅವಳಿಗೆ ಶಂಕೆಯುಂಟಾಯಿತು. ॥ ೩೯ ॥ ನಾನೀಗ ಎಲ್ಲಿದ್ದೇನೆ ? ಏನನ್ನು ನೋಡುತ್ತಿದ್ದೇನೆ ? ಇದೇನು ಸ್ವಪ್ನವೇ ? ಅಥವಾ ಭಗವಂತನ ಮಾಯೆಯೇ ? ನನ್ನ ಬುದ್ಧಿಯಲ್ಲಿ ಏನಾದರೂ ಭ್ರಮೆಯುಂಟಾಗಲಿಲ್ಲವಲ್ಲ! ನನ್ನ ಈ ಬಾಲಕನಲ್ಲೇ ಯಾವುದೋ ಜನ್ಮಜಾತ ಯೋಗಸಿದ್ಧಿಯಿರುವುದೂ ಸಂಭವವಿದೆ. ಅದನ್ನೇ ನನಗೆ ತೋರುತ್ತಿರುವನು. ॥ ೪೦ ॥ ಯಾವುದು ತರ್ಕಕ್ಕೆ ಗೋಚರವಾಗುವುದಿಲ್ಲವೋ, ಯಾವುದು ಬುದ್ಧಿ, ಮನಸ್ಸು, ಕರ್ಮ ಮತ್ತು ವಾಕ್ಕುಗಳಿಗೆ ನಿಲುಕದೋ, ಈ ಇಡೀ ವಿಶ್ವವು ಯಾವುದನ್ನು ಆಶ್ರಯಿಸಿದೆಯೋ, ಯಾವುದರಿಂದ ಈ ಜಗತ್ತು ವ್ಯಾವಹಾರಿಕವಾಗಿ ಇರುವಂತೆ ತೋರುವುದೋ, ಯಾರ ಸ್ವರೂಪವು ಸರ್ವಥಾ ಅಚಿಂತ್ಯವಾಗಿದೆಯೋ ಅಂತಹ ಪ್ರಭುವಿಗೆ ನಾನು ನಮಸ್ಕರಿಸುತ್ತೇನೆ. ॥ ೪೧ ॥

ಅಹಂ ಮಮಾಸೌ ಪತಿರೇಷ ಮೇ ಸುತೋ
ವ್ರಜೇಶ್ವರಸ್ಯಾಖಿಲವಿತ್ತಪಾ ಸತೀ ।
ಗೋಪ್ಯಶ್ಚ ಗೋಪಾಃ ಸಹಗೋಧನಾಶ್ಚ ಮೇ
ಯನ್ಮಾಯಯೇತ್ಥಂ ಕುಮತಿಃ ಸ ಮೇ ಗತಿಃ ॥ ೪೨ ॥

ಇತ್ಥಂ ವಿದಿತತತ್ತ್ವಾಯಾಂ ಗೋಪಿಕಾಯಾಂ ಸ ಈಶ್ವರಃ ।
ವೈಷ್ಣವೀಂ ವ್ಯತನೋನ್ಮಾಯಾಂ ಪುತ್ರಸ್ನೇಹಮಯೀಂ ವಿಭುಃ
॥ ೪೩ ॥

ಸದ್ಯೋನಷ್ಟಸ್ಮೃತಿರ್ಗೋಪೀ ಸಾಽಽರೋಪ್ಯಾರೋಹಮಾತ್ಮಜಮ್ ।
ಪ್ರವೃದ್ಧಸ್ನೇಹಕಲಿಲಹೃದಯಾಽಽಸೀದ್ಯಥಾ ಪುರಾ
॥ ೪೪ ॥

ತ್ರಯ್ಯಾ ಚೋಪನಿಷದ್ಭಿಶ್ಚ ಸಾಂಖ್ಯಯೋಗೈಶ್ಚ ಸಾತ್ವತೈಃ ।
ಉಪಗೀಯಮಾನಮಾಹಾತ್ಮ್ಯಂ ಹರಿಂ ಸಾಮನ್ಯತಾತ್ಮಜಮ್
॥ ೪೫ ॥

*ರಾಜೋವಾಚ*

ನಂದಃ ಕಿಮಕರೋದ್ ಬ್ರಹ್ಮನ್ ಶ್ರೇಯ ಏವಂ ಮಹೋದಯಮ್ ।
ಯಶೋದಾ ಚ ಮಹಾಭಾಗಾ ಪಪೌ ಯಸ್ಯಾಃ ಸ್ತನಂ ಹರಿಃ
॥ ೪೬ ॥

ಪಿತರೌ ನಾನ್ವವಿಂದೇತಾಂ ಕೃಷ್ಣೋದಾರಾರ್ಭಕೇಹಿತಮ್ ।
ಗಾಯಂತ್ಯದ್ಯಾಪಿ ಕವಯೋ ಯಲ್ಲೋಕಶಮಲಾಪಹಮ್
॥ ೪೭ ॥

*ಶ್ರೀಶುಕ ಉವಾಚ*

ದ್ರೋಣೋ ವಸೂನಾಂ ಪ್ರವರೋ ಧರಯಾ ಸಹ ಭಾರ್ಯಯಾ ।
ಕರಿಷ್ಯಮಾಣ ಆದೇಶಾನ್ ಬ್ರಹ್ಮಣಸ್ತಮುವಾಚ ಹ
॥ ೪೮ ॥

ಜಾತಯೋರ್ನೌ ಮಹಾದೇವೇ ಭುವಿ ವಿಶ್ವೇಶ್ವರೇ ಹರೌ ।
ಭಕ್ತಿಃ ಸ್ಯಾತ್ಪರಮಾ ಲೋಕೇ ಯಯಾಂಜೋ ದುರ್ಗತಿಂ ತರೇತ್
॥ ೪೯ ॥

ಪರಮಾತ್ಮನ ಮಾಯೆಯಿಂದ ಬುದ್ಧಿಗೆಟ್ಟವಳಾಗಿ 'ನಾನು ನನ್ನದು' ಎಂಬ ಅಹಂಕಾರದಲ್ಲಿ ತುಂಬಿಹೋಗಿದ್ದೇನೆ. ಇವನು ನನ್ನ ಪತಿ, ಇವನು ನನ್ನ ಮಗ, ವ್ರಜೇಶ್ವರನಾದ ನಂದಗೋಪನ ಸಕಲ ಐಶ್ವರ್ಯಕ್ಕೂ ನಾನೇ ಯಜಮಾನಿ, ನಾನು ಮಹಾಪತಿವ್ರತೆ. ಈ ಗೋಪಿಯರು – ಗೋಪಾಲಕರೆಲ್ಲರೂ ನನ್ನ ಸೇವಕರು ಮುಂತಾಗಿ ಅಹಂಕಾರ ಪಡುತ್ತಿದ್ದೇನೆ. ಇದಕ್ಕೆ ಭಗವಂತನ ಮಾಯೆಯೇ ಕಾರಣ. ಹೀಗೆ ಮಾಯಾವರಣವನ್ನು ಹೊದ್ದಿಸಿ ನನ್ನನ್ನು ಕುಮತಿಯನ್ನಾಗಿಸಿದ ಆ ಪರಮಾತ್ಮನಲ್ಲಿ ನಾನು ಶರಣು ಹೊಂದುತ್ತೇನೆ. ॥ ೪೨ ॥ ಹೀಗೆ ತಾಯಿ ಯಶೋದೆಯು ಶ್ರೀಕೃಷ್ಣನ ತತ್ತ್ವವನ್ನು ತಿಳಿದುಕೊಂಡಾಗ ಸರ್ವಶಕ್ತನಾದ, ಸರ್ವವ್ಯಾಪಕನಾದ ಪ್ರಭುವು ತನ್ನ ಪುತ್ರಸ್ನೇಹವೆಂಬ ವೈಷ್ಣವೀ ಯೋಗಮಾಯೆಯನ್ನೂ ಅವಳ ಹೃದಯದಲ್ಲಿ ಪ್ರಕಾಶಗೊಳಿಸಿದನು. ॥ ೪೩ ॥ ಯಶೋದೆಗೆ ಒಡನೆಯೇ ಆ ಘಟನೆ ಮರೆತುಹೋಯಿತು. ಆಕೆಯು ತನ್ನ ಮುದ್ದುಕೃಷ್ಣನನ್ನು ತೊಡೆಯಲ್ಲಿ ಕುಳ್ಳಿರಿಸಿಕೊಂಡಳು. ಮೊದಲು ಅವಳ ಹೃದಯದಲ್ಲಿ ಪ್ರೇಮಸಮುದ್ರವು ಉಕ್ಕುತ್ತಿರುವಂತೆಯೇ ಪುನಃ ಉಕ್ಕತೊಡಗಿತು. ॥ ೪೪ ॥ ಸಕಲ ವೇದಗಳೂ ಉಪನಿಷತ್ತುಗಳೂ, ಸಾಂಖ್ಯ-ಯೋಗಶಾಸ್ತ್ರಗಳೂ, ಭಕ್ತಜನರೂ ಯಾವ ಪರಮಪುರುಷನ ಮಾಹಾತ್ಮ್ಯೆಯನ್ನು ನಿರಂತರವಾಗಿ ಕೊಂಡಾಡುವರೋ ಅದೇ ಭಗವಂತನನ್ನು ಯಶೋದೆಯು ತನ್ನ ಪುತ್ರನೆಂದೇ ಭಾವಿಸುತ್ತಿದ್ದಳು. ॥ ೪೫ ॥

**ಪರೀಕ್ಷಿದ್ರಾಜನು ಕೇಳಿದನು** – ಬ್ರಾಹ್ಮಣಶ್ರೇಷ್ಠರೇ! ಭಗವಂತನನ್ನು ಪುತ್ರನನ್ನಾಗಿ ಪಡೆಯಲು ನಂದಗೋಪನು ಎಂತಹ ಅದ್ಭುತವಾದ ಮಂಗಲಮಯವಾದ ಸಾಧನೆಯನ್ನು ಮಾಡಿದ್ದನು? ಭಗವಂತನು ಅಕ್ಕರೆಯಿಂದ ಸ್ತನ್ಯವನ್ನು ಕುಡಿಯುತ್ತಿದ್ದ ಪರಮ ಭಾಗ್ಯವತಿಯಾದ ಯಶೋದಾದೇವಿಯು ಎಂತಹ ಮಹತ್ತಾದ ತಪಸ್ಸನ್ನು ಮಾಡಿದ್ದಳು! ॥ ೪೬ ॥ ಸಕಲ ಪಾಪಗಳನ್ನು ಹೋಗಲಾಡಿಸುವ ಭಗವಂತನ ಪರಮಾದ್ಭುತವಾದ ಬಾಲಲೀಲೆಗಳನ್ನು ಈಗಲೂ ಜ್ಞಾನೀ ಪುರುಷರು ವರ್ಣಿಸುತ್ತಿರುತ್ತಾರೆ ಅಂತಹ ಲೀಲೆಗಳನ್ನು ನೋಡಿ ಆನಂದಿಸಲು ಹೆತ್ತ ತಂದೆ-ತಾಯಿಗಳಾದ ವಸುದೇವ-ದೇವಕಿಯರಿಗೂ ಲಭ್ಯವಾಗಲಿಲ್ಲವೋ, ಅವುಗಳನ್ನು ನೋಡಿ ಆನಂದಿಸಲು ನಂದ-ಯಶೋದೆಯರಿಗೆ ಹೇಗೆ ಸಾಧ್ಯವಾಯಿತು? ಇದನ್ನು ದಯಮಾಡಿ ತಿಳಿಸಿರಿ. ॥ ೪೭ ॥

**ಶ್ರೀಶುಕಮಹಾಮುನಿಗಳು ಹೇಳಿದರು** – ಪರೀಕ್ಷಿತನೇ! ನಂದಗೋಪನು ಹಿಂದಿನ ಜನ್ಮದಲ್ಲಿ ಒಬ್ಬ ಶ್ರೇಷ್ಠನಾದ ವಸುವಾಗಿದ್ದನು. 'ದ್ರೋಣ' ಎಂದು ಅವನಿಗೆ ಹೆಸರಿತ್ತು. ಅವನ ಪತ್ನಿಯ ಹೆಸರು 'ಧರಾದೇವಿ' ಎಂದಿತ್ತು. ಅವರು ಬ್ರಹ್ಮದೇವರ ಆದೇಶವನ್ನು ಪಾಲಿಸುವುದಕ್ಕಾಗಿ ಅವರಲ್ಲಿ ವಿಜ್ಞಾಪಿಸಿಕೊಂಡರು.॥ ೪೮ ॥ ಚತುರ್ಮುಖನೇ! ನಿನ್ನ ಆಜ್ಞೆಯಂತೆ ನಾವು ಭೂಮಿಯಲ್ಲಿ ಹುಟ್ಟಿದಾಗ ಯಾವ ಅನನ್ಯ ಭಕ್ತಿಯ ಮೂಲಕ ಜಗತ್ತಿನ ಜನರು ಅನಾಯಾಸವಾಗಿಯೇ ದುರ್ಗತಿಗಳನ್ನು ದಾಟಿಹೋಗುವರೋ ಅಂತಹ ಅನನ್ಯವಾದ ಪ್ರೇಮಮಯವಾದ ಭಕ್ತಿಯು ಜಗದೀಶ್ವರನಾದ ಭಗವಾನ್ ಶ್ರೀಕೃಷ್ಣನಲ್ಲಿ ಉಂಟಾಗುವಂತೆ ಅನುಗ್ರಹಿಸು. ॥ ೪೯ ॥

ಅಸ್ತ್ವಿತ್ಯುಕ್ತಃ ಸ ಭಗವಾನ್ವ್ರಜೇ ದ್ರೋಣೋ ಮಹಾಯಶಾಃ ।
ಜಜ್ಞೇ ನಂದ ಇತಿ ಖ್ಯಾತೋ ಯಶೋದಾ ಸಾ ಧರಾಭವತ್
॥ ೫೦ ॥

ತತೋ ಭಕ್ತಿರ್ಭಗವತಿ ಪುತ್ರೀಭೂತೇ ಜನಾರ್ದನೇ ।
ದಂಪತ್ಯೋರ್ನಿತರಾಮಾಸೀದ್ಗೋಪಗೋಪೀಷು ಭಾರತ
॥ ೫೧ ॥

ಕೃಷ್ಣೋ ಬ್ರಹ್ಮಣ ಆದೇಶಂ ಸತ್ಯಂ ಕರ್ತುಂ ವ್ರಜೇ ವಿಭುಃ ।
ಸಹರಾಮೋ ವಸಂಶ್ಚಕ್ರೇ ತೇಷಾಂ ಪ್ರೀತಿಂ ಸ್ವಲೀಲಯಾ
॥ ೫೨ ॥

ಬ್ರಹ್ಮದೇವರು–'ಹಾಗೆಯೇ ಆಗಲಿ' ಎಂದು ಅವರನ್ನು ಹರಸಿದರು. ಆ ಪರಮಯಶಸ್ವಿ ಭಗವನ್ಮಯ ದ್ರೋಣನೇ ವ್ರಜದಲ್ಲಿ ಹುಟ್ಟಿ ಅವರ ಹೆಸರು ನಂದಗೋಪನೆಂದಾಯಿತು ಮತ್ತು ಆ ಧರಾದೇವಿಯೇ ಈ ಜನ್ಮದಲ್ಲಿ ಯಶೋದಾ ಎಂಬ ಹೆಸರಿನಿಂದ ಅವನ ಪತ್ನಿಯಾದಳು. ॥ ೫೦ ॥ ಪರೀಕ್ಷಿತನೇ! ಈ ಜನ್ಮದಲ್ಲಿ ಜನ್ಮ-ಮೃತ್ಯುರೂಪವಾದ ಚಕ್ರದಿಂದ ಬಿಡುಗಡೆಗೊಳಿಸುವಂತಹ ಭಗವಂತನು ಇವರಿಗೆ ಪುತ್ರನಾದಾಗ ಸಮಸ್ತ ಗೋಪ-ಗೋಪಿಕೆಯರಿಗಿಂತ ಮಿಗಿಲಾಗಿ ಈ ದಂಪತಿಗಳಾದ ನಂದ-ಯಶೋದೆಯರಿಗೆ ಶ್ರೀಕೃಷ್ಣನ ಕುರಿತು ಅತ್ಯಂತ ಪ್ರೇಮ ಉಂಟಾಯಿತು. ॥ ೫೧ ॥ ಬ್ರಹ್ಮದೇವರ ಮಾತನ್ನು ಸತ್ಯವಾಗಿಸಲೆಂದೇ ಭಗವಾನ್ ಶ್ರೀಕೃಷ್ಣನು ಬಲರಾಮನೊಂದಿಗೆ ವ್ರಜದಲ್ಲಿದ್ದು ಸಮಸ್ತ ವ್ರಜವಾಸಿಗಳನ್ನೂ ತನ್ನ ಬಾಲಲೀಲೆಗಳಿಂದ ಆನಂದಗೊಳಿಸುತ್ತಿದ್ದನು. ॥ ೫೨ ॥

*ಎಂಟನೆಯ ಅಧ್ಯಾಯವು ಮುಗಿಯಿತು. ॥ ೮ ॥*

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ ವಿಶ್ವರೂಪದರ್ಶನೇಽಷ್ಟಮೋಽಧ್ಯಾಯಃ ॥ ೮ ॥

# ಒಂಭತ್ತನೆಯ ಅಧ್ಯಾಯ

## ಶ್ರೀಕೃಷ್ಣನನ್ನು ಒರಳಿಗೆ ಕಟ್ಟಿಹಾಕಿದುದು

*ಶ್ರೀಶುಕ ಉವಾಚ*

ಏಕದಾ ಗೃಹದಾಸೀಷು ಯಶೋದಾ ನಂದಗೇಹಿನೀ ।
ಕರ್ಮಾಂತರನಿಯುಕ್ತಾಸು ನಿರ್ಮಮಂಥ ಸ್ವಯಂ ದಧಿ
॥ ೧ ॥

ಯಾನಿ ಯಾನೀಹ ಗೀತಾನಿ ತದ್ಬಾಲಚರಿತಾನಿ ಚ ।
ದಧಿನಿರ್ಮಂಥನೇ ಕಾಲೇ ಸ್ಮರಂತೀ ತಾನ್ಯಗಾಯತ
॥ ೨ ॥

ಕ್ಷೌಮಂ ವಾಸಃ ಪೃಥುಕಟಿತಟೇ ಬಿಭ್ರತೀ ಸೂತ್ರನದ್ಧಂ
ಪುತ್ರಸ್ನೇಹಸ್ನುತಕುಚಯುಗಂ ಜಾತಕಂಪಂ ಚ ಸುಭ್ರೂಃ ।
ರಜ್ಜ್ವಾಕರ್ಷಶ್ರಮಭುಜಚಲತ್ಕಂಕಣೌ ಕುಂಡಲೇ ಚ
ಸ್ವಿನ್ನಂ ವಕ್ತ್ರಂ ಕಬರವಿಗಲನ್ಮಾಲತೀ ನಿರ್ಮಮಂಥ
॥ ೩ ॥

ಶ್ರೀಶುಕಮಹಾಮುನಿಗಳು ಹೇಳುತ್ತಾರೆ – ಪರೀಕ್ಷಿತನೇ! ಒಮ್ಮೆ ನಂದಪತ್ನಿಯಾದ ಯಶೋದೆಯು ಮನೆಗೆಲಸದ ದಾಸಿಯರನ್ನು ಬೇರೆ ಮನೆಗೆಲಸಕ್ಕೆ ನೇಮಿಸಿ, ಸ್ವತಃ ತನ್ನ ಕಂದಮ್ಮನಿಗೆ ಬೆಣ್ಣೆಯನ್ನು ತಿನ್ನಿಸುವ ಸಲುವಾಗಿ ಮೊಸರುಕಡೆಯಲು ಪ್ರಾರಂಭಿಸಿದಳು. ॥ ೧ ॥ ಮಹಾರಾಜಾ! ನಾನು ಇದುವರೆಗೆ ಭಗವಂತನ ಯಾವ ಬಾಲಲೀಲೆಗಳನ್ನು ನಿನಗೆ ವರ್ಣಿಸಿ ಹೇಳಿರುವೆನೋ ಅವೆಲ್ಲವನ್ನೂ ಸ್ಮರಿಸಿಕೊಳ್ಳುತ್ತಾ ಹೃದಯಂಗಮವಾಗಿ ಹಾಡುತ್ತಾ ಯಶೋದೆಯು ಮೊಸರು ಕಡೆಯುತ್ತಿದ್ದಳು. ॥ ೨ ॥ ಹೀಗೆ ಮೊಸರು ಕಡೆಯುತ್ತಿರುವಾಗ ಯಶೋದೆಯು ದಿವ್ಯವಾದ ರೇಶ್ಮೆಯ ಸೀರೆಯನ್ನು ಉಟ್ಟಿದ್ದಳು. ಆಕೆಯು ನಡುವಿನಲ್ಲಿ ಕಿರುಗೆಜ್ಜೆಗಳಿಂದ ಕೂಡಿದ ಸ್ವರ್ಣಮಯವಾದ ಸೊಂಟಪಟ್ಟಿಯನ್ನು ಧರಿಸಿದ್ದಳು. ಪುತ್ರಸ್ನೇಹದ ಆಧಿಕ್ಯದಿಂದ ಆಕೆಯ ಸ್ತನಗಳಿಂದ ಹಾಲು ಒಸರುತ್ತಿತ್ತು ಹಾಗೂ ಕಂಪಿಸುತ್ತಿದ್ದವು. ಕಡೆಗೋಲ ಹಗ್ಗವನ್ನು ಎಳೆಯುತ್ತಿರುವಾಗ ಆಕೆಗೆ ಬಳಲಿಕೆ ಉಂಟಾಗಿತ್ತು. ಕೈಗಳಿಂದ ಮೊಸರು ಕಡೆಯುವಾಗ ಕೈಯಲ್ಲಿ ಧರಿಸಿದ ರತ್ನಕಂಕಣಗಳೂ ಝುಣ-ಝುಣಿಸುತ್ತಿದ್ದವು. ಕರ್ಣಕುಂಡಲಗಳು ಮುಖ ಮಂಡಲದ ಮೇಲೆ ತಮ್ಮ ಕಾಂತಿಯನ್ನು ಎರಚುತ್ತಾ ಅಲುಗಾಡುತ್ತಿದ್ದವು. ಮುಖವು ಬೆವರಿತ್ತು. ಮುಡಿಯಲ್ಲಿ ಮುಡಿದ ಹೂವುಗಳು ಉದುರುತ್ತಿದ್ದವು. ಸುಂದರವಾದ ಹುಬ್ಬುಗಳಿಂದ ಕಂಗೊಳಿಸುತ್ತಿದ್ದ ಯಶೋದೆಯು ಹೀಗೆ ಮೊಸರು ಕಡೆಯುತ್ತಿದ್ದಳು. ॥ ೩ ॥

ತಾಂ ಸ್ತನ್ಯಕಾಮ ಆಸಾದ್ಯ ಮಥ್ನಂತೀಂ ಜನನೀಂ ಹರಿಃ ।
ಗೃಹೀತ್ವಾ ದಧಿಮಂಥಾನಂ ನ್ಯಷೇಧತ್ಪ್ರೀತಿಮಾವಹನ್ ॥ ೪ ॥

ಆ ವೇಳೆಗೆ ಮುದ್ದುಕೃಷ್ಣನು ಸ್ತನ್ಯಪಾನ ಮಾಡುವ ಸಲುವಾಗಿ ಮೊಸರು ಕಡೆಯುತ್ತಿದ್ದ ತಾಯಿಯ ಬಳಿಗೆ ಬಂದನು. ಅವನು ತನ್ನ ತಾಯಿಯ ಹೃದಯದಲ್ಲಿ ಪ್ರೇಮವನ್ನು ಮತ್ತು ಆನಂದವನ್ನು ಹೆಚ್ಚಿಸುತ್ತಾ ಕಡೆಗೋಲನ್ನು ತನ್ನ ಪುಟ್ಟಕೈಗಳಿಂದ ಹಿಡಿದುಕೊಂಡು ತಾಯಿಯನ್ನು ಮೊಸರು ಕಡೆಯಲು ತಡೆದನು. ॥ ೪ ॥

ತಮಂಕಮಾರೂಢಮಪಾಯಯತ್ಸ್ತನಂ
ಸ್ನೇಹಸ್ನುತಂ ಸಸ್ಮಿತಮೀಕ್ಷತೀ ಮುಖಮ್ ।
ಅತೃಪ್ತಮುತ್ಸೃಜ್ಯ ಜವೇನ ಸಾ ಯಯಾ-
ವುತ್ಸಿಚ್ಯಮಾನೇ ಪಯಸಿ ತ್ವಧಿಶ್ರಿತೇ ॥ ೫ ॥

ಶ್ರೀಕೃಷ್ಣನು ತಾಯಿಯಾದ ಯಶೋದೆಯ ತೊಡೆಯೇರಿದನು. ವಾತ್ಸಲ್ಯ ಸ್ನೇಹದ ಆಧಿಕ್ಯದಿಂದ ಆಕೆಯ ಸ್ತನಗಳಿಂದ ಹಾಲು ತಾನಾಗಿಯೇ ಸುರಿಯುತ್ತಿತ್ತು. ಅವಳು ಕೃಷ್ಣನಿಗೆ ಹಾಲುಣಿಸತೊಡಗಿದಳು ಹಾಗೂ ಮಂದಮಧುರ ಮುಗುಳ್ನಗುತ್ತಿದ್ದ ಕೃಷ್ಣನ ಮುಖವನ್ನೇ ನೋಡುತ್ತಿದ್ದಳು. ಇಷ್ಟರಲ್ಲಿ ಒಲೆಯ ಮೇಲಿಟ್ಟ ಹಾಲುಕ್ಕಿ ಬಂತು. ಅದನ್ನು ನೋಡಿದ ಯಶೋದೆಯು ಅತೃಪ್ತನಾದ ಅವನನ್ನು ಅಲ್ಲೇ ಬಿಟ್ಟು ಲಗುಬಗೆಯಿಂದ ಹಾಲನ್ನಿಳಿಸಲು ಹೊರಟು ಹೋದಳು. ॥ ೫ ॥

ಸಂಜಾತಕೋಪಃ ಸ್ಫುರಿತಾರುಣಾಧರಂ
ಸಂದಶ್ಯ ದದ್ಭಿರ್ದಧಿಮಂಥಭಾಜನಮ್ ।
ಭಿತ್ತ್ವಾ ಮೃಷಾಶ್ರುರ್ದೃಷದಶ್ಮನಾ ರಹೋ
ಜಘಾಸ ಹೈಯಂಗವಮಂತರಂ ಗತಃ ॥ ೬ ॥

ಇದರಿಂದ ಶ್ರೀಕೃಷ್ಣನಿಗೆ ಸ್ವಲ್ಪ ಸಿಟ್ಟು ಬಂತು. ಅವನ ಕೆಂದುಟಿಗಳು ಅದುರತೊಡಗಿದವು. ಅವನ್ನು ಹಲ್ಲುಗಳಿಂದ ಕಚ್ಚಿ ಶ್ರೀಕೃಷ್ಣನು ಬಳಿಯಲ್ಲೇ ಇದ್ದ ಗುಂಡುಕಲ್ಲಿನಿಂದ ಮೊಸರಿನ ಮಡಕೆಯನ್ನು ಒಡೆದುಹಾಕಿದನು. ಕಳ್ಳ ಅಳುವಿನಿಂದ ಕಣ್ಣಲ್ಲಿ ನೀರನ್ನು ತುಂಬಿಕೊಂಡು ಮೆಲ್ಲನೆ ಒಳಮನೆಗೆ ಹೋಗಿ ಅಲ್ಲಿಟ್ಟಿದ್ದ ಬೆಣ್ಣೆಯನ್ನು ತಿನ್ನತೊಡಗಿದನು. ॥ ೬ ॥

ಉತ್ತಾರ್ಯ ಗೋಪೀ ಸುಶೃತಂ ಪಯಃ ಪುನಃ
ಪ್ರವಿಶ್ಯ ಸಂದೃಶ್ಯ ಚ ದಧ್ಯಮತ್ರಕಮ್ ।
ಭಗ್ನಂ ವಿಲೋಕ್ಯ ಸ್ವಸುತಸ್ಯ ಕರ್ಮ ತತ್
ಜಹಾಸ ತಂ ಚಾಪಿ ನ ತತ್ರ ಪಶ್ಯತೀ ॥ ೭ ॥

ಯಶೋದೆಯು ಕಾದಿರುವ ಹಾಲನ್ನು ಕೆಳಗಿಳಿಸಿಟ್ಟು ಪುನಃ ಮೊಸರು ಕಡೆವಲ್ಲಿಗೆ ಬಂದಳು. ಅಲ್ಲಿ ಬಂದು ನೋಡಿದಳು – ಮೊಸರಿನ ಗಡಿಗೆಯು ಪುಡಿ-ಪುಡಿಯಾಗಿ ಮೊಸರೆಲ್ಲಾ ಚೆಲ್ಲಿ ಹೋಗಿತ್ತು. ಇದು ಶ್ರೀಕೃಷ್ಣನದೇ ಕೆಲಸವೆಂದು ತಿಳಿಯುವಲ್ಲಿ ತಡವಾಗಲಿಲ್ಲ. ಜೊತೆಗೆ ಅವನು ಅಲ್ಲಿ ಇಲ್ಲದಿರುವುದನ್ನು ನೋಡಿ ಯಶೋದೆಯು ನಗತೊಡಗಿದಳು. ॥ ೭ ॥

ಉಲೂಖಲಾಂಘ್ರೇರುಪರಿ ವ್ಯವಸ್ಥಿತಂ
ಮರ್ಕಾಯ ಕಾಮಂ ದದತಂ ಶಿಚಿ ಸ್ಥಿತಮ್ ।
ಹೈಯಂಗವಂ ಚೌರ್ಯವಿಶಂಕಿತೇಕ್ಷಣಂ
ನಿರೀಕ್ಷ್ಯ ಪಶ್ಚಾತ್ಸುತಮಾಗಮಚ್ಛನೈಃ ॥ ೮ ॥

ಅಲ್ಲಿ-ಇಲ್ಲಿ ಹುಡುಕಿದಾಗ ಮತ್ತೊಂದು ಕೊಠಡಿಯಲ್ಲಿ ಶ್ರೀಕೃಷ್ಣನು ಒಂದು ಒರಳಿನ ಮೇಲೆ ನಿಂತು ನೆಲವಿನ ಮೇಲೆ ಇಟ್ಟ ಬೆಣ್ಣೆಯನ್ನು ತೆಗೆ-ತೆಗೆದು ಕೋತಿಗಳಿಗೆ ಮತ್ತು ಸಂಗಾತಿಗಳಿಗೆ ಯಥೇಚ್ಛವಾಗಿ ತಿನ್ನಿಸುತ್ತಿದ್ದನು. ಎಲ್ಲಾದರೂ ತನ್ನ ಕಳ್ಳತನ ಬಯಲಾದೀತು ಎಂಬ ಹೆದರಿಕೆಯಿಂದ ಸುತ್ತಲೂ ನೋಡುತ್ತಾ ಇದ್ದನು. ಇದನ್ನು ನೋಡಿದ ಯಶೋದಾದೇವಿಯು ಹಿಂದಿನಿಂದ ನಿಧಾನವಾಗಿ ಅವನ ಬಳಿಗೆ ಬಂದಳು. ॥ ೮ ॥

ತಾಮಾತ್ತಯಷ್ಟಿಂ ಪ್ರಸಮೀಕ್ಷ್ಯ ಸತ್ವರಃ
ತತೋಽವರುಹ್ಯಾಪಸಸಾರ ಭೀತವತ್ ।
ಗೋಪ್ಯನ್ವಧಾವನ್ನ ಯಮಾಪ ಯೋಗಿನಾಂ
ಕ್ಷಮಂ ಪ್ರವೇಷ್ಟುಂ ತಪಸೇರಿತಂ ಮನಃ ॥ ೯ ॥

ತಾಯಿಯು ಕೈಯಲ್ಲಿ ಕೋಲನ್ನು ಹಿಡಿದುಕೊಂಡು ತನ್ನ ಕಡೆಗೆ ಬರುತ್ತಿರುವುದನ್ನು ನೋಡಿದಾಗ ಶ್ರೀಕೃಷ್ಣನು ಒಡನೆಯೇ ಒರಳಿಂದ ಕೆಳಗೆ ಹಾರಿದನು ಮತ್ತು ಹೆದರಿದವನಂತೆ ನಟಿಸುತ್ತಾ ಓಡಿದನು. ಪರೀಕ್ಷಿತನೇ! ಮಹಾಯೋಗಿಗಳು ತಪಸ್ಸಿನಿಂದ ತಮ್ಮ ಮನಸ್ಸನ್ನು ಏಕಾಗ್ರಗೊಳಿಸಿ ಶುದ್ಧವಾಗಿಸಿಕೊಂಡರೂ ಯಾವನಲ್ಲಿ ಮನಸ್ಸಿನಿಂದಲೂ ಪ್ರವೇಶಿಸಲು ಸಾಧ್ಯವಾಗುವುದಿಲ್ಲವೋ ಅಂತಹ ಭಗವಂತನನ್ನು ಹಿಡಿಯಲು ಅವನ ಹಿಂದೆ-ಹಿಂದೆ ಯಶೋದೆಯು ಓಡುತ್ತಿರುವಳು. ॥ ೯ ॥ ಹೀಗೆ ತಾಯಿ ಯಶೋದೆಯು ಶ್ರೀಕೃಷ್ಣನ ಹಿಂದೆ ಓಡತೊಡಗಿದಾಗ ಸ್ಥೂಲವಾದ ನಿತಂಬಗಳ ಭಾರದಿಂದಲೂ ಅವುಗಳ ಕಂಪನದಿಂದಲೂ ಅವಳ ಓಟ ಮಂದವಾಯಿತು. ಆಕೆಯು ಮುಂದ ಮುಂದಕ್ಕೆ ಓಡುತ್ತಿರುವಾಗ ಅವಳ ಹೆರಳು ಬಿಚ್ಚಿಹೋಗಿ

ಅನ್ವಂಚಮಾನಾ ಜನನೀ ಬೃಹಚ್ಚಲತ್
ಶ್ರೋಣೀಭರಾಕ್ರಾಂತಗತಿಃ ಸುಮಧ್ಯಮಾ ।
ಜವೇನ ವಿಸ್ರಂಸಿತ ಕೇಶಬಂಧನ-
ಚ್ಯುತಪ್ರಸೂನಾನುಗತಿಃ ಪರಾಮೃಶತ್ ॥ ೧೦ ॥

ಕೃತಾಗಸಂ ತಂ ಪ್ರರುದಂತಮಕ್ಷಿಣೀ
ಕಷಂತಮಂಜನ್ಮಷಿಣೀ ಸ್ವಪಾಣಿನಾ ।
ಉದ್ವೀಕ್ಷಮಾಣಂ ಭಯವಿಹ್ವಲೇಕ್ಷಣಂ
ಹಸ್ತೇ ಗೃಹೀತ್ವಾ ಭಿಷಯಂತ್ಯವಾಗುರತ್ ॥ ೧೧ ॥

ತ್ಯಕ್ತ್ವಾ ಯಷ್ಟಿಂ ಸುತಂ ಭೀತಂ ವಿಜ್ಞಾಯಾರ್ಭಕವತ್ಸಲಾ ।
ಇಯೇಷ ಕಿಲ ತಂ ಬದ್ಧುಂ ದಾಮ್ನಾತದ್ವೀರ್ಯಕೋವಿದಾ ॥ ೧೨ ॥

ನ ಚಾಂತರ್ನ ಬಹಿರ್ಯಸ್ಯ ನ ಪೂರ್ವಂ ನಾಪಿ ಚಾಪರಮ್ ।
ಪೂರ್ವಾಪರಂ ಬಹಿಶ್ಚಾಂತರ್ಜಗತೋ ಯೋ ಜಗಚ್ಚ ಯಃ ॥ ೧೩ ॥

ತಂ ಮತ್ವಾಽಽತ್ಮಜಮವ್ಯಕ್ತಂ ಮರ್ತ್ಯಲಿಂಗ ಮಧೋಕ್ಷಜಮ್ ।
ಗೋಪಿಕೋಲೂಖಲೇ ದಾಮ್ನಾ ಬಬಂಧ ಪ್ರಾಕೃತಂ ಯಥಾ ॥ ೧೪ ॥

ತದ್ದಾಮ ಬಧ್ಯಮಾನಸ್ಯ ಸ್ವಾರ್ಭಕಸ್ಯ ಕೃತಾಗಸಃ ।
ದ್ವ್ಯಂಗುಲೋನಮಭೂತ್ತೇನ ಸಂದಧೇಽನ್ಯಚ್ಚ ಗೋಪಿಕಾ ॥ ೧೫ ॥

ಯದಾಽಽಸೀತ್ತದಪಿ ನ್ಯೂನಂ ತೇನಾನ್ಯದಪಿ ಸಂದಧೇ ।
ತದಪಿ ದ್ವ್ಯಂಗುಲಂ ನ್ಯೂನಂ ಯದ್ಯದಾದತ್ತ ಬಂಧನಮ್ ॥ ೧೬ ॥

ಏವಂ ಸ್ವಗೇಹದಾಮಾನಿ ಯಶೋದಾ ಸಂದಧತ್ಯಪಿ ।
ಗೋಪೀನಾಂ ಸುಸ್ಮಯಂತೀನಾಂ ಸ್ಮಯಂತೀ ವಿಸ್ಮಿತಾಭವತ್ ॥ ೧೭ ॥

ಸ್ವಮಾತುಃ ಸ್ವಿನ್ನಗಾತ್ರಾಯಾ ವಿಸ್ರಸ್ತಕಬರಸ್ರಜಃ ।
ದೃಷ್ಟ್ವಾ ಪರಿಶ್ರಮಂ ಕೃಷ್ಣಃ ಕೃಪಯಾಽಽಸೀತ್ಸ್ವಬಂಧನೇ ॥ ೧೮ ॥

ಅದರಲ್ಲಿದ್ದ ಹೂವುಗಳು ದಾರಿಯುದ್ದಕ್ಕೆ ಎರಚಿದಂತೆ ಬೀಳುತ್ತಿದ್ದವು. ಹೀಗೆ ಸುಂದರಿಯಾದ ಯಶೋದೆಯು ಹೇಗಾದರೂ ಅವನನ್ನು ಹಿಡಿದುಬಿಟ್ಟಳು. (ಅಥವಾ ತಾಯಿಯ ಕಷ್ಟವನ್ನು ನೋಡಲಾರದೆ ಕರುಣಾಳು ಕೃಷ್ಣನೇ ತನ್ನ ವೇಗವನ್ನು ಕಡಿಮೆಮಾಡಿ ತಾಯಿಯ ಕೈಗೆ ಸಿಕ್ಕಿಬಿದ್ದನೋ!) ॥ ೧೦ ॥ ಎಡಗೈಯಿಂದ ಮುದ್ದು ಕೃಷ್ಣನನ್ನು ಹಿಡಿದುಕೊಂಡು, ಬಲಗೈಯಲ್ಲಿದ್ದ ಕೋಲನ್ನು ತೋರಿಸುತ್ತಾ 'ಪೋರ! ಈಗ ಸಿಕ್ಕಿದೆಯಲ್ಲ! ನಾನೇನು ಮಾಡುವೆನು ಗೊತ್ತೇ ?' ಎಂದು ಗದರಿಸಿದಳು. ಅಪರಾಧಿಯಾದ ಶ್ರೀಕೃಷ್ಣ ಬಿಕ್ಕಿ-ಬಿಕ್ಕಿ ಅಳುತ್ತಿದ್ದನು. ತಾಯಿ ಎಲ್ಲಿ ಹೊಡೆದುಬಿಡುವಳೋ ಎಂಬ ಭಯವನ್ನು ಕಣ್ಣುಗಳಿಂದಲೂ ಮುಖದಿಂದಲೂ ಸೂಚಿಸುತ್ತಿದ್ದನು. ಅಳುತ್ತಾ ಕೈಗಳಿಂದ ಕಣ್ಣುಗಳನ್ನು ಒರೆಸಿಕೊಳ್ಳುವಾಗ ಕಣ್ಣಿಗೆ ಹಚ್ಚಿದ ಕಾಡಿಗೆಯೆಲ್ಲವೂ ಮುಖಕ್ಕೆಲ್ಲ ಹರಡಿಕೊಂಡಿತು. ॥ ೧೧ ॥ ತನ್ನ ಕೈಯಲ್ಲಿರುವ ಕೋಲನ್ನು ನೋಡಿ ತನ್ನ ಮಗನು ಬಹಳ ಭಯಪಟ್ಟಿರುವನೆಂದು ವಾತ್ಸಲ್ಯಮಯಿಯಾದ ತಾಯಿಯು ಭಾವಿಸಿದಳು. ಕೈಯಲ್ಲಿದ್ದ ಕೋಲನ್ನು ಬಿಸಾಡಿದಳು. ಇವನೆಲ್ಲಾದರೂ ಓಡಿಹೋದಾನೆಂದು ಯೋಚಿಸಿ ಇವನನ್ನು ಹಗ್ಗದಿಂದ ಕಟ್ಟಿಹಾಕಬೇಕೆಂದು ನಿಶ್ಚಯಿಸಿದಳು. ಪರೀಕ್ಷಿತನೇ! ಪುತ್ರವತ್ಸಲೆಯಾದ ಅವಳಿಗೆ ತನ್ನ ಮಗನ ಐಶ್ವರ್ಯವೇನೆಂಬುದು ತಿಳಿದಿರಲಿಲ್ಲ. ॥ ೧೨ ॥ ಸರ್ವಾತ್ಮಕನಾದ ಇವನಿಗೆ ಒಳಗೆ-ಹೊರಗೆಂಬುದಿಲ್ಲ. ಆದಿ-ಅಂತ್ಯಗಳಿಲ್ಲ. ಇವನು ಜಗತ್ಸೃಷ್ಟಿಗೆ ಮೊದಲೂ ಇದ್ದನು. ಜಗತ್ಪ್ರಳಯವಾದ ಮೇಲೆಯೂ ಇರುವನು. ಈ ಜಗತ್ತಿನೊಳಗೆ ಇದ್ದೇ ಇದ್ದಾನೆ, ಹೊರಗಿನ ರೂಪಗಳಲ್ಲೂ ಇದ್ದಾನೆ ; ಜಗತ್ಸ್ವರೂಪನೂ ಅವನೇ ಇದ್ದಾನೆ. ಇಷ್ಟೇ ಅಲ್ಲ, ಸಮಸ್ತ ಇಂದ್ರಿಯಗಳಿಂದ ಅತೀತನೂ ಅವ್ಯಕ್ತನೂ ಆದ ಭಗವಂತನು ಮನುಷ್ಯರಂತೆ ರೂಪವನ್ನು ಧರಿಸಿರುವುದರಿಂದ ಇವನು ತನ್ನ ಪುತ್ರನೆಂದೇ ತಿಳಿದ ಯಶೋದಾದೇವಿಯು ಯಾರಾದರೂ ಸಾಮಾನ್ಯ ಬಾಲಕನನ್ನು ಕಟ್ಟಿಹಾಕುವಂತೆ ಹಗ್ಗದಿಂದ ಒರಳಿಗೆ ಕಟ್ಟಿಹಾಕಿದಳು. ॥ ೧೩-೧೪ ॥ ತಾಯಿಯಶೋದೆಯು ತನ್ನ ತುಂಟನಾದ ಮಗನನ್ನು ಹಗ್ಗದಿಂದ ಕಟ್ಟತೊಡಗಿದಾಗ ಆ ಹಗ್ಗವು ಎರಡು ಅಂಗುಲಗಳಷ್ಟು ಕಡಿಮೆಯಾಯಿತು. ಆಗ ಆಕೆಯು ಇನ್ನೊಂದು ಹಗ್ಗವನ್ನು ತಂದು ಅದಕ್ಕೆ ಜೋಡಿಸಿದಳು. ॥ ೧೫ ॥ ಆ ಹಗ್ಗವೂ ಸಾಲದಾದಾಗ ಅದಕ್ಕೆ ಇನ್ನೊಂದನ್ನು ಜೋಡಿಸಿದಳು. ಹೀಗೆ ಎಷ್ಟೆಷ್ಟು ಹಗ್ಗಗಳನ್ನು ಜೊಡಿಸಿದರೂ ಕೊನೆಗೆ ಅದು ಎರಡು ಅಂಗುಲ ಕಡಿಮೆಯಾಗಿ ಕೃಷ್ಣನ ಸೊಂಟಕ್ಕೆ ಸಾಕಾಗಲಿಲ್ಲ. ॥ ೧೬ ॥ ಯಶೋದಾದೇವಿಯು ಮನೆಯಲ್ಲಿದ್ದ ಎಲ್ಲ ಹಗ್ಗಗಳನ್ನು ತಂದು ಜೋಡಿಸಿದರೂ ಭಗವಾನ್ ಶ್ರೀಕೃಷ್ಣನನ್ನು ಆಕೆಯಿಂದ ಕಟ್ಟಿಹಾಕಲಾಗಲಿಲ್ಲ. ಅವಳ ಅಸಫಲತೆಯನ್ನು ಕಂಡ ಗೋಪಿಯರು ಮುಗುಳ್ನಗತೊಡಗಿದರು. ಯಶೋದೆಯೂ ನಗುತ್ತಾ ಇದೇನು ಎಂದು ಆಶ್ಚರ್ಯ ಚಕಿತಳಾದಳು. ॥ ೧೭ ॥ ಭಗವಾನ್ ಶ್ರೀಕೃಷ್ಣನು ನೋಡುತ್ತಾನೆ — ತಾಯಿಯ ಶರೀರವೆಲ್ಲ ಬೆವರಿಹೋಗಿದೆ. ಮುಡಿ ಬಿಚ್ಚಿಹೋಗಿ ಮುಡಿದ ಹೂವುಗಳೆಲ್ಲ ಕೆಳಕ್ಕೆ ಬಿದ್ದಿವೆ. ಬಹಳ ಆಯಾಸ ಗೊಂಡಿರುವಳು. ಇದನ್ನು ತಿಳಿದ ಕರುಣಾಸಮುದ್ರನಾದ ಭಗವಂತನು ತಾನೇ ತಾಯಿಯ ಬಂಧನಕ್ಕೊಳಗಾದನು. ॥ ೧೮ ॥

ಏವಂ ಸಂದರ್ಶಿತಾ ಹ್ಯಂಗ ಹರಿಣಾ ಭೃತ್ಯವಶ್ಯತಾ ।
ಸ್ವವಶೇನಾಪಿ ಕೃಷ್ಣೇನ ಯಸ್ಯೇದಂ ಸೇಶ್ವರಂ ವಶೇ ॥ ೧೯ ॥

ಪರೀಕ್ಷಿತನೇ! ಭಗವಾನ್ ಶ್ರೀಕೃಷ್ಣನು ಸರ್ವಸ್ವತಂತ್ರನು. ಬ್ರಹ್ಮಾದಿ ಸಮಸ್ತ ದೇವತೆಗಳೊಂದಿಗೆ ಈ ಸಂಪೂರ್ಣ ಜಗತ್ತು ಅವನ ವಶದಲ್ಲಿದೆ. ಹೀಗಿದ್ದರೂ ತಾಯಿಯಿಂದ ಬಂಧಿತನಾಗಿ ತಾನು ತನ್ನ ಪ್ರಿಯಭಕ್ತರ ವಶನಾಗಿರುವೆನೆಂದು ಜಗತ್ತಿಗೆ ತೋರಿಸಿ ಕೊಟ್ಟಿರುವನು. ॥ ೧೯ ॥ ಗೊಲ್ಲತಿಯಾದ ಯಶೋದಾದೇವಿಯು ಮುಕ್ತಿಪ್ರದನಾದ ಮುಕುಂದನಿಂದ ಪಡೆದುಕೊಂಡ ಅನಿರ್ವಚನೀಯ ಕೃಪಾಪ್ರಸಾದವನ್ನು ಬ್ರಹ್ಮದೇವರಾಗಲೀ, ದೇವದೇವ ಶಂಕರನೇ ಆಗಲೀ, ವಕ್ಷಸ್ಥಳದಲ್ಲೇ ವಾಸಿಸುವ ಅರ್ಧಾಂಗಿನಿಯಾದ ಲಕ್ಷ್ಮೀದೇವಿಯೇ ಆಗಲೀ ಪಡೆದುಕೊಳ್ಳಲು ಸಮರ್ಥರಾಗಲಿಲ್ಲ. ॥ ೨೦ ॥ ಈ ಗೋಪಿಕಾನಂದನನಾದ ಭಗವಾನ್ ಶ್ರೀಕೃಷ್ಣನು ಅನನ್ಯ ಪ್ರೇಮಿಗಳಾದ ಭಕ್ತರಿಗೆ ಸುಲಭನಾಗಿರುವಂತೆ, ದೇಹಾಭಿಮಾನಿಗಳಾದ ಕರ್ಮಕಾಂಡಿಗಳಿಗಾಗಲೀ, ತಪಸ್ವಿಗಳಿಗಾಗಲೀ, ತನ್ನ ಸ್ವರೂಪಭೂತ ಜ್ಞಾನಿಗಳಿಗಾಗಲೀ ಸುಲಭನಲ್ಲ. ॥ ೨೧ ॥

ನೇಮಂ ವಿರಿಂಚೋ ನ ಭವೋ ನ ಶ್ರೀರಪ್ಯಂಗಸಂಶ್ರಯಾ ।
ಪ್ರಸಾದಂ ಲೇಭಿರೇ ಗೋಪೀ ಯತ್ತತ್ಪ್ರಾಪ ವಿಮುಕ್ತಿದಾತ್ ॥ ೨೦ ॥

ನಾಯಂ ಸುಖಾಪೋ ಭಗವಾನ್ ದೇಹಿನಾಂ ಗೋಪಿಕಾಸುತಃ ।
ಜ್ಞಾನಿನಾಂ ಚಾತ್ಮಭೂತಾನಾಂ ಯಥಾ ಭಕ್ತಿಮತಾಮಿಹ ॥ ೨೧ ॥

ಕೃಷ್ಣಸ್ತು ಗೃಹಕೃತ್ಯೇಷು ವ್ಯಗ್ರಾಯಾಂ ಮಾತರಿ ಪ್ರಭುಃ ।
ಅದ್ರಾಕ್ಷೀದರ್ಜುನೌ ಪೂರ್ವಂ ಗುಹ್ಯಕೌ ಧನದಾತ್ಮಜೌ ॥ ೨೨ ॥

ಒರಳುಕಲ್ಲಿಗೆ ಕೃಷ್ಣನನ್ನು ಕಟ್ಟಿಹಾಕಿ ನಂದರಾಣೀ ಯಶೋದೆಯು ಗೃಹಕೃತ್ಯದಲ್ಲಿ ನಿರತಳಾದಳು. ಬಂಧಿತನಾದ ಭಗವಾನ್ ಶ್ಯಾಮಸುಂದರನು ತಾಯಿಗೆ ತನ್ನಕಡೆ ಗಮನವಿಲ್ಲವೆಂದರಿತು ಮೊದಲು ಯಕ್ಷರಾಜನಾದ ಕುಬೇರನ ಪುತ್ರರಾಗಿದ್ದು ಶಾಪದಿಂದ ಅರ್ಜುನ ವೃಕ್ಷಗಳಾಗಿದ್ದ ಇಬ್ಬರನ್ನು ಶಾಪವಿಮೋಚನೆ ಮಾಡಬೇಕೆಂದು ಯೋಚಿಸಿದನು. ॥ ೨೨ ॥ ನಳಕೂಬರ ಮತ್ತು ಮಣಿಗ್ರೀವರೆಂಬ ಇವರಿಬ್ಬರ ಬಳಿ ಧನ, ಸೌಂದರ್ಯ, ಐಶ್ವರ್ಯಗಳು ಪರಿಪೂರ್ಣವಾಗಿದ್ದವು. ಇದರಿಂದ ಉಂಟಾದ ಅಹಂಕಾರವನ್ನು ಕಂಡು ದೇವಋಷಿ ನಾರದರ ಶಾಪದಿಂದ ಅವರು ವೃಕ್ಷಗಳಾಗಿದ್ದರು. ॥ ೨೩ ॥

ಪುರಾ ನಾರದಶಾಪೇನ ವೃಕ್ಷತಾಂ ಪ್ರಾಪಿತೌ ಮದಾತ್ ।
ನಲಕೂಬರಮಣಿಗ್ರೀವಾವಿತಿ ಖ್ಯಾತೌ ಶ್ರಿಯಾನ್ವಿತೌ ॥ ೨೩ ॥

ಒಂಭತ್ತನೆಯ ಅಧ್ಯಾಯವು ಮುಗಿಯಿತು. ॥ ೯ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ಗೋಪೀಪ್ರಸಾದೋ ನಾಮ ನವಮೋಽಧ್ಯಾಯಃ ॥ ೯ ॥

# ಹತ್ತನೆಯ ಅಧ್ಯಾಯ

## ಯಮಳಾರ್ಜುನರ ಉದ್ಧಾರ

*ರಾಜೋವಾಚ*

ಕಥ್ಯತಾಂ ಭಗವನ್ನೇತತ್ತಯೋಃ ಶಾಪಸ್ಯ ಕಾರಣಮ್ ।
ಯತ್ತದ್ವಿಗರ್ಹಿತಂ ಕರ್ಮ ಯೇನ ವಾ ದೇವರ್ಷೇಸ್ತಮಃ ॥ ೧ ॥

**ಪರೀಕ್ಷಿದ್ರಾಜನು ಕೇಳುತ್ತಾನೆ** – ಪೂಜ್ಯರೇ! ಕುಬೇರನ ಮಕ್ಕಳಾದ ನಳಕೂಬರ – ಮಣಿಗ್ರೀವರಿಗೆ ಶಾಪ ಏಕೆ ಬಂತು? ಪರಮ ಶಾಂತರಾದ ದೇವರ್ಷಿ ನಾರದರಿಗೂ ಕೋಪ ಬರುವಂತಹ ನಿಂದನೀಯ ಯಾವ ಕರ್ಮಮಾಡಿದ್ದರು ಅವರು? ಇದನ್ನು ದಯಮಾಡಿ ತಿಳಿಸಬೇಕೆಂದು ಬೇಡಿಕೊಳ್ಳುತ್ತೇನೆ. ॥ ೧ ॥

*ಶ್ರೀಶುಕ ಉವಾಚ*

ರುದ್ರಸ್ಯಾನುಚರೌ ಭೂತ್ವಾ ಸುದೃಪ್ತೌ ಧನದಾತ್ಮಜೌ ।
ಕೈಲಾಸೋಪವನೇ ರಮ್ಯೇ ಮಂದಾಕಿನ್ಯಾಂ ಮದೋತ್ಕಟೌ ॥ ೨ ॥

**ಶ್ರೀಶುಕಮಹಾಮುನಿಗಳು ಹೇಳಿದರು** – ಎಲೈ ರಾಜನೇ! ನಳಕೂಬರ ಮತ್ತು ಮಣಿಗ್ರೀವರು ಕುಬೇರನ ಮಕ್ಕಳಾಗಿದ್ದರಲ್ಲದೆ, ಈಶ್ವರನ ಅನುಚರರೂ ಆಗಿದ್ದರು. ಇದರಿಂದ ಅತ್ಯಂತ ಅಹಂಕಾರಿಗಳಾಗಿದ್ದರು. ಒಂದು ದಿನ ಇವರಿಬ್ಬರೂ ಮಂದಾಕಿನಿಯ ತೀರದಲ್ಲಿ

ವಾರುಣೀಂ ಮದಿರಾಂ ಪೀತ್ವಾ ಮದಾಘೂರ್ಣಿತಲೋಚನೌ ।
ಸ್ತ್ರೀಜನೈರನುಗಾಯದ್ಭಿಶ್ಚೇರತುಃ ಪುಷ್ಪಿತೇ ವನೇ ॥ ೩ ॥

ಅಂತಃ ಪ್ರವಿಶ್ಯ ಗಂಗಾಯಾಮಂಭೋಜವನರಾಜಿನಿ ।
ಚಿಕ್ರೀಡತುರ್ಯುವತಿಭಿರ್ಗಜಾವಿವ ಕರೇಣುಭಿಃ ॥ ೪ ॥

ಯದೃಚ್ಛಯಾ ಚ ದೇವರ್ಷಿರ್ಭಗವಾಂಸ್ತತ್ರ ಕೌರವ ।
ಅಪಶ್ಯನ್ನಾರದೋ ದೇವೌ ಕ್ಷೀಬಾಣೌ ಸಮಬುಧ್ಯತ ॥ ೫ ॥

ತಂ ದೃಷ್ಟ್ವಾ ವ್ರೀಡಿತಾ ದೇವ್ಯೋ ವಿವಸ್ತ್ರಾಃ ಶಾಪಶಂಕಿತಾಃ ।
ವಾಸಾಂಸಿ ಪರ್ಯಧುಃ ಶೀಘ್ರಂ ವಿವಸ್ತ್ರೌ ನೈವ ಗುಹ್ಯಕೌ ॥ ೬ ॥

ತೌ ದೃಷ್ಟ್ವಾ ಮದಿರಾಮತ್ತೌ ಶ್ರೀಮದಾಂಧೌ ಸುರಾತ್ಮಜೌ ।
ತಯೋರನುಗ್ರಹಾರ್ಥಾಯ ಶಾಪಂ ದಾಸ್ಯನ್ನಿದಂ ಜಗೌ ॥ ೭ ॥

*ನಾರದ ಉವಾಚ*

ನ ಹ್ಯನ್ಯೋ ಜುಷತೋ ಜೋಷ್ಯಾನ್ಬುದ್ಧಿಭ್ರಂಶೋ ರಜೋಗುಣಃ ।
ಶ್ರೀಮದಾದಾಭಿಜಾತ್ಯಾದಿರ್ಯತ್ರ ಸ್ತ್ರೀ ದ್ಯೂತಮಾಸವಃ ॥ ೮ ॥

ಹನ್ಯಂತೇ ಪಶವೋ ಯತ್ರ ನಿರ್ದಯೈರಜಿತಾತ್ಮಭಿಃ ।
ಮನ್ಯಮಾನೈರಿಮಂ ದೇಹಮಜರಾಮೃತ್ಯು ನಶ್ವರಮ್ ॥ ೯ ॥

ದೇವಸಂಜ್ಞಿತಮಪ್ಯಂತೇ ಕೃಮಿವಿಡ್ಭಸ್ಮಸಂಜ್ಞಿತಮ್ ।
ಭೂತಧ್ರುಕ್ತತ್ಕೃತೇ ಸ್ವಾರ್ಥಂ ಕಿಂ ವೇದ ನಿರಯೋ ಯತಃ ॥ ೧೦ ॥

ಕೈಲಾಸದ ರಮಣೀಯವಾದ ಉಪವನದಲ್ಲಿ ವಾರುಣೀ ಎಂಬ ಮದ್ಯವನ್ನು ಕುಡಿದು ಮದೋನ್ಮತ್ತರಾಗಿದ್ದರು. ಮದಿರೆಯ ಅಮಲಿನಲ್ಲಿ ಅವರ ಕಣ್ಣುಗಳು ತಿರುಗುತ್ತಿದ್ದವು. ಬಹಳಷ್ಟು ನಾರಿಯರು ಹಾಡುತ್ತಾ-ಕುಣಿಯುತ್ತಾ ಪುಷ್ಪಭರಿತವಾದ ಆ ವನದಲ್ಲಿ ಅವರೊಂದಿಗೆ ವಿಹರಿಸುತ್ತಿದ್ದರು. ॥ ೨-೩ ॥ ಬಳಿಕ ಅವರು ಕೆಂದಾವರೆಗಳಿಂದ ಮಂಡಿತವಾದ ಗಂಗಾನದಿಯ ನೀರಿನಲ್ಲಿಳಿದು ಗಂಡಾನೆಗಳು ಹೆಣ್ಣಾನೆಗಳೊಂದಿಗೆ ರಮಿಸುವಂತೆ ಸ್ತ್ರೀಯರೊಂದಿಗೆ ಜಲಕ್ರೀಡೆಯಾಡುತ್ತಿದ್ದರು. ॥ ೪ ॥ ಪರೀಕ್ಷಿತನೇ ! ಕಾಲ ಕರ್ಮಸಂಯೋಗದಿಂದ ಅದೇ ಮಾರ್ಗವಾಗಿ ದೇವಋಷಿಗಳಾದ ನಾರದರು ಆಗಮಿಸಿದರು. ಸ್ತ್ರೀಯರೊಂದಿಗೆ ಜಲಕ್ರೀಡೆಯಾಡುತ್ತಿದ್ದ ಆ ಯುವಕರನ್ನು ನೋಡಿ, ಇವರು ಮದೋನ್ಮತ್ತರಾಗಿರುವರು ಎಂದು ಅವರು ತಿಳಿದುಕೊಂಡರು. ॥ ೫ ॥ ದೇವರ್ಷಿನಾರದರನ್ನು ಕಂಡೊಡನೆ ಅಪ್ಸರೆಯರು ನಾಚಿಕೊಂಡು, ಮಹರ್ಷಿಗಳು ಶಾಪಕೊಟ್ಟಾರೆಂಬ ಭಯದಿಂದ ಬೇಗ-ಬೇಗನೇ ತಮ್ಮ-ತಮ್ಮ ವಸ್ತ್ರಗಳನ್ನು ಉಟ್ಟುಕೊಂಡರು. ಆದರೆ ಈ ಯಕ್ಷ ಕುಮಾರರು ನಾರದರನ್ನು ನೋಡಿಯೂ ವಸ್ತ್ರಗಳನ್ನು ಧರಿಸದೆ ಇದ್ದರು. ॥ ೬ ॥ ಇವರು ದೇವತೆಗಳ ಪುತ್ರರಾಗಿದ್ದರೂ ಧನಮದದಿಂದ ಕುರುಡರಾಗಿ, ಮದಿರಾಪಾನದಿಂದ ಉನ್ಮತ್ತರಾಗಿರುವುದನ್ನು ನೋಡಿದ ದೇವರ್ಷಿನಾರದರೂ ಅವರ ಮೇಲೆ ಅನುಗ್ರಹವನ್ನು ತೋರಲೆಂದೇ ಶಾಪವನ್ನು ಕೊಡುತ್ತಾ ಹೀಗೆಂದರು - ॥ ೭ ॥

**ನಾರದರು ಹೇಳಿದರು** - ಇಂದ್ರಿಯಗಳಿಗೆ ಪ್ರಿಯವಾದ ವಿಷಯಗಳಲ್ಲಿ ಆಸಕ್ತನಾಗಿರುವ ಮನುಷ್ಯನ ಬುದ್ಧಿಯನ್ನು ಪೂರ್ಣವಾಗಿ ಹಾಳುಮಾಡುವುದು ವಿಶೇಷವಾಗಿ ಧನಮದವೇ ಆಗಿದೆ. ಹಿಂಸೆಯೇ ಮುಂತಾದ ರಜೋಗುಣೀ ಕರ್ಮಗಳಾಗಲೀ, ವಿದ್ಯಾಮದ, ಕುಲಮದ ಮೊದಲಾದವುಗಳಾಗಲೀ ಅಷ್ಟುಮಟ್ಟಿಗೆ ಬುದ್ಧಿಯನ್ನು ಹಾಳುಮಾಡುವುದಿಲ್ಲ, ಏಕೆಂದರೆ, ಧನಮದದ ಜೊತೆ-ಜೊತೆಗೆ ಸ್ತ್ರೀಸಂಗ, ಜೂಜು, ಮದ್ಯಪಾನ ಮುಂತಾದವುಗಳು ಸೇರಿಕೊಂಡೇ ಇರುತ್ತವೆ. ॥ ೮ ॥ ಐಶ್ವರ್ಯಮದ, ಧನಮದದಿಂದ ಕುರುಡರಾಗಿ ತಮ್ಮ ಇಂದ್ರಿಯಗಳ ವಶದಲ್ಲಿರುವ ಕ್ರೂರ ಮನುಷ್ಯರು ತನ್ನ ನಾಶವುಳ್ಳ ಶರೀರವನ್ನು ಅಮರವೆಂದೇ ತಿಳಿದಿರುತ್ತಾರೆ ಹಾಗೂ ತನ್ನಂತೆಯೇ ಶರೀರಧಾರೀ ಪಶುಗಳನ್ನು ಕೊಲ್ಲುತ್ತಾ ಇರುತ್ತಾರೆ. ॥ ೯ ॥ ಅಯ್ಯೋ ! ಯಾವ ಶರೀರವನ್ನು 'ಭೂದೇವ', 'ನರದೇವ', 'ದೇವ' ಮುಂತಾದ ಹೆಸರುಗಳಿಂದ ಕರೆಯುತ್ತಾರೋ, ಕೊನೆಗೆ ಅದರ ಗತಿ ಏನಾದೀತು ? ಪ್ರಾಣಪಕ್ಷಿಯೂ ಹಾರಿಹೋದಾಗ ಅದು ಹುಳುಗಳ ರಾಶಿ, ನರಿ ಕಾಗೆಗಳ ಆಹಾರ, ಇಲ್ಲವೇ ಬೂದಿಯ ರಾಶಿಯಷ್ಟೆ. ಇಂತಹ ಶರೀರಕ್ಕಾಗಿಯೇ ಪ್ರಾಣಿಗಳೊಂದಿಗೆ ದ್ರೋಹ ಮಾಡುವುದರಿಂದ ಮನುಷ್ಯನು ತನ್ನ ಯಾವ ಸ್ವಾರ್ಥವನ್ನು ತಿಳಿಯುವನೋ ? ಹೀಗೆ ಮಾಡುವುದರಿಂದ ಅವನಿಗೆ ನರಕವೇ ಪ್ರಾಪ್ತಿಯಾಗುವುದು. ॥ ೧೦ ॥ ನಶ್ವರವಾದ ಈ ಶರೀರವು ಯಾರದೆಂದು ನಿರ್ಧರಿಸಬಹುದೇ ? ಅನ್ನವಿಟ್ಟು ಪೋಷಿಸಿದವನದ್ದೇ ? ಗರ್ಭಾಧಾನ ಮಾಡಿದ ತಂದೆಗೆ ಸೇರಿದ್ದೇ ಅಥವಾ ಒಂಭತ್ತು ತಿಂಗಳು

ದೇಹಃ ಕಿಮನ್ನದಾತುಃ ಸ್ವಂ ನಿಷೇಕ್ತುರ್ಮಾತುರೇವ ಚ।
ಮಾತುಃ ಪಿತುರ್ವಾ ಬಲಿನಃ ಕ್ರೇತುರಗ್ನೇಃ ಶುನೋಽಪಿ ವಾ ॥ ೧೧ ॥

ಏವಂ ಸಾಧಾರಣಂ ದೇಹಮವ್ಯಕ್ತಪ್ರಭವಾಪ್ಯಯಮ್।
ಕೋ ವಿದ್ವಾನಾತ್ಮಸಾತ್ಕೃತ್ವಾ ಹಂತಿ ಜಂತೂನೃತೇಽಸತಃ ॥ ೧೨ ॥

ಅಸತಃ ಶ್ರೀಮದಾಂಧಸ್ಯ ದಾರಿದ್ರ್ಯಂ ಪರಮಂಜನಮ್।
ಆತ್ಮೌಪಮ್ಯೇನ ಭೂತಾನಿ ದರಿದ್ರಃ ಪರಮೀಕ್ಷತೇ ॥ ೧೩ ॥

ಯಥಾ ಕಂಟಕವಿದ್ಧಾಂಗೋ ಜಂತೋರ್ನೇಚ್ಛತಿ ತಾಂ ವ್ಯಥಾಮ್।
ಜೀವಸಾಮ್ಯಂ ಗತೋ ಲಿಂಗೈರ್ನ ತಥಾವಿದ್ಧಕಂಟಕಃ ॥ ೧೪ ॥

ದರಿದ್ರೋ ನಿರಹಂಸ್ತಂಭೋ ಮುಕ್ತಃ ಸರ್ವಮದೈರಿಹ।
ಕೃಚ್ಛ್ರಂ ಯದೃಚ್ಛಯಾಽಽಪ್ನೋತಿ ತದ್ಧಿ ತಸ್ಯ ಪರಂ ತಪಃ ॥ ೧೫ ॥

ನಿತ್ಯಂ ಕ್ಷುತ್ಕ್ಷಾಮದೇಹಸ್ಯ ದರಿದ್ರಸ್ಯಾನ್ನಕಾಂಕ್ಷಿಣಃ।
ಇಂದ್ರಿಯಾಣ್ಯನುಶುಷ್ಯಂತಿ ಹಿಂಸಾಪಿ ವಿನಿವರ್ತತೇ ॥ ೧೬ ॥

ದರಿದ್ರಸ್ಯೈವ ಯುಜ್ಯಂತೇ ಸಾಧವಃ ಸಮದರ್ಶಿನಃ।
ಸದ್ಭಿಃ ಕ್ಷಿಣೋತಿ ತಂ ತರ್ಷಂ ತತ ಆರಾದ್ವಿಶುದ್ಧ್ಯತಿ ॥ ೧೭ ॥

ಹೊತ್ತು ಹೆತ್ತ ತಾಯಿಯದೇ ? ತಾಯಿಯ ಜನ್ಮಕ್ಕೆ ಕಾರಣನಾದ ತಾತನದೇ ? ಬಲವಂತವಾಗಿ ಜಿತಮಾಡಿಸಿಕೊಳ್ಳುವ ಧಣಿಯದೇ ? ಅಥವಾ ಗುಲಾಮನಂತೆ ಕ್ರಯಕೊಟ್ಟುಕೊಂಡು ಕೊಂಡವನದೇ ? ಧಗಧಗನೆ ಉರಿಯುವ ಚಿತೆಯಲ್ಲಿ ಸುಟ್ಟು ಹೋಗುವ ಈ ಶರೀರ ಅಗ್ನಿಯದೆ ? ಮೃತಶರೀರವನ್ನು ತಿನ್ನಲು ಕಾದುಕುಳಿತ ನರಿ-ನಾಯಿಗಳದ್ದೇ ? ॥ ೧೧ ॥ ನಿಶ್ಚಯವಾಗಿಯೂ ಈ ದೇಹವು ಸಾಧಾರಣವಾದ ಒಂದು ವಸ್ತುವಾಗಿದೆ. ಪ್ರಕೃತಿಯಿಂದ ಹುಟ್ಟುತ್ತದೆ ಹಾಗೂ ಅದರಲ್ಲೇ ಸೇರಿಹೋಗುತ್ತದೆ. ಯಾವ ವಿದ್ವಾಂಸನು ತಾನೇ ಇಂತಹ ನಶ್ವರವಾದ ದೇಹವನ್ನು ತನ್ನದೆಂಬುದಾಗಿ ಭಾವಿಸಿಕೊಂಡು ಅದರ ಪೋಷಣೆಗಾಗಿ ತನ್ನಂತೆಯೇ ಇರುವ ಇತರ ಪ್ರಾಣಿಗಳನ್ನು ವಧಿಸಬಲ್ಲನು ? ಅಸತ್ಪುರುಷರಲ್ಲದೆ ಬೇರಾರೂ ಹೀಗೆ ಮಾಡುವುದಿಲ್ಲ ॥ ೧೨ ॥ ಧನಮದದಿಂದ ಕುರುಡಾಗಿ ಇದ್ದವನ ಕಣ್ಣು ತೆರೆಸಲು ದಾರಿದ್ರ್ಯವೆಂಬುದೇ ಶ್ರೇಷ್ಠವಾದ ಅಂಜನವಾಗಿದೆ. ಏಕೆಂದರೆ, ದರಿದ್ರನಾದವನು ಬೇರೆ ಪ್ರಾಣಿಗಳನ್ನು ತನ್ನಂತೆಯೇ ಭಾವಿಸಿಕೊಂಡಿರುತ್ತಾನೆ. ಆದುದರಿಂದ ಅವುಗಳನ್ನು ಹಿಂಸಿಸಲು ಹೋಗುವುದಿಲ್ಲ ॥ ೧೩ ॥ ಯಾವನ ಕಾಲಿಗೆ ಒಮ್ಮೆ ಮುಳ್ಳು ಚುಚ್ಚಿದೆಯೋ ಮತ್ತು ಅದರ ಯಾತನೆಯನ್ನು ಅನುಭವಿಸಿರುವನೋ, ಅಂತಹವನು ಇತರರ ಕಾಲಿಗೂ ಮುಳ್ಳು ಚುಚ್ಚಬಾರದೆಂದೇ ಅಪೇಕ್ಷಿಸುತ್ತಾನೆ. ಏಕೆಂದರೆ, ಮುಳ್ಳು ಚುಚ್ಚುವುದರಿಂದ ಆಗುವ ನೋವು-ಕಷ್ಟಗಳನ್ನು ಅವನು ಅನುಭವಿಸಿದ್ದಾನೆ. ಆದರೆ ಮುಳ್ಳು ಚುಚ್ಚದೇ ಇರುವವನಿಗೆ, ಅದರ ಯಾತನೆಯನ್ನು ಅನುಭವಿಸದವನಿಗೆ ಹಾಗೆ ಅನಿಸುವುದಿಲ್ಲ ॥ ೧೪ ॥ ದರಿದ್ರನಲ್ಲಿ ಯಾವುದೇ ಅಹಂಕಾರ, ಮದ ಇರುವುದಿಲ್ಲ, ಅವನು ಎಲ್ಲ ವಿಧವಾದ ಮದಗಳಿಂದಲೂ ದೂರವುಳಿಯುತ್ತಾನೆ. ದೈವವಶಾತ್ ಅವನಿಗೆ ಕಷ್ಟಗಳು ಒದಗಿಬಂದಾಗ ಅವೆಲ್ಲವನ್ನು ಅವನು ಅನುಭವಿಸುತ್ತಲೇ ಇರುತ್ತಾನೆ. ಅದೇ ಅವನಿಗೆ ಒಂದು ತಪಸ್ಸು ಆಗಿದೆ. ॥ ೧೫ ॥ ದರಿದ್ರನಾದವನು ಹೊಟ್ಟೆಪಾಡಿಗಾಗಿಯೇ ಒದ್ದಾಡುತ್ತಿರುತ್ತಾನೆ. ಹಸಿವಿನಿಂದ ಅವನ ಶರೀರವು ಕೃಶವಾಗಿ ಇರುತ್ತದೆ. ಕೃಶಹೊಂದಿದ ಅವನ ಇಂದ್ರಿಯಗಳು ವಿಷಯ ಸುಖಗಳನ್ನು ಬಯಸುವುದಿಲ್ಲ. ದರಿದ್ರನಾದವನು ನಾಲಿಗೆಯ ಚಾಪಲ್ಯಕ್ಕಾಗಿ ಇತರ ಪ್ರಾಣಿಗಳನ್ನು ಕೊಲ್ಲುವುದಿಲ್ಲ, ಹಿಂಸಿಸುವುದಿಲ್ಲ ॥ ೧೬ ॥ ಸಾಧು-ಸತ್ಪುರುಷರು ಸಮದರ್ಶಿಗಳಾಗಿ ಇರುವರು. ಆದುದರಿಂದ ಅವರ ಸಮಾಗಮವು ದರಿದ್ರರಿಗೆ ಸುಲಭವಾಗಿ ದೊರೆಯುತ್ತದೆ. ಏಕೆಂದರೆ, ದರಿದ್ರರಾದವರಲ್ಲಿ ಭೋಗಾದಿಗಳು ಇರುವುದೇ ಇಲ್ಲ, ಆಸೆಯೆಂಬುದೊಂದಿರುತ್ತದೆ. ಸಾಧುಸಮಾಗಮದಿಂದ ಆ ತೃಷ್ಣೆಯೂ ಇಂಗಿಹೋಗಿ ಅವರ ಮನಸ್ಸು ಬಹಳ ಬೇಗ ಶುದ್ಧವಾಗುತ್ತದೆ.* ॥ ೧೭ ॥

* ಧನಿಕರಲ್ಲಿ ಧನಮದ, ಧನದ ಮೇಲಿನ ಅಭಿಮಾನ ಮತ್ತು ಧನದ ತೃಷ್ಣೆ ಈ ಮೂರು ದೋಷಗಳು ಇರುತ್ತವೆ. ದರಿದ್ರರಲ್ಲಿ ಧನಮದವಾಗಲೀ, ಧನದ ಮೇಲಿನ ಅಭಿಮಾನವಾಗಲೀ ಇರುವುದಿಲ್ಲ. ಆದರೆ ಧನತೃಷ್ಣೆಯೆಂಬ ಒಂದು ದೋಷ ಇರುತ್ತದೆ. ಈ ದೋಷವೂ ಕೂಡ ಸತ್ಪುರುಷರ ಸಹವಾಸದಿಂದ ದೂರಾಗಿಹೋಗಿ ಬೇಗನೇ ಶ್ರೇಯಸ್ಸುಂಟಾಗುತ್ತದೆ.

ಸಾಧೂನಾಂ ಸಮಚಿತ್ತಾನಾಂ ಮುಕುಂದಚರಣೈಷಿಣಾಮ್ ।
ಉಪೇಕ್ಷ್ಯೈಃ ಕಿಂ ಧನಸ್ತಂಭೈರಸದ್ಭಿರಸದಾಶ್ರಯೈಃ ॥ ೧೮ ॥

ತದಹಂ ಮತ್ತಯೋರ್ಮಾಧ್ವ್ಯಾ ವಾರುಣ್ಯಾ ಶ್ರೀಮದಾಂಧಯೋಃ ।
ತಮೋಮದಂ ಹರಿಷ್ಯಾಮಿ ಸ್ತ್ರೈಣಯೋರಜಿತಾತ್ಮನೋಃ ॥ ೧೯ ॥

ಯದಿಮೌ ಲೋಕಪಾಲಸ್ಯ ಪುತ್ರೌ ಭೂತ್ವಾ ತಮಃಪ್ಲುತೌ ।
ನ ವಿವಾಸಸಮಾತ್ಮಾನಂ ವಿಜಾನೀತಃ ಸುದುರ್ಮದೌ ॥ ೨೦ ॥

ಅತೋಽರ್ಹತಃ ಸ್ಥಾವರತಾಂ ಸ್ಯಾತಾಂ ನೈವಂ ಯಥಾ ಪುನಃ ।
ಸ್ಮೃತಿಃ ಸ್ಯಾನ್ಮತ್ಪ್ರಸಾದೇನ ತತ್ರಾಪಿ ಮದನುಗ್ರಹಾತ್ ॥ ೨೧ ॥

ವಾಸುದೇವಸ್ಯ ಸಾನ್ನಿಧ್ಯಂ ಲಬ್ಧ್ವಾ ದಿವ್ಯಶರಚ್ಛತೇ ।
ವೃತ್ತೇ ಸ್ವರ್ಲೋಕತಾಂ ಭೂಯೋ ಲಬ್ಧಭಕ್ತೀ ಭವಿಷ್ಯತಃ ॥ ೨೨ ॥

*ಶ್ರೀಶುಕ ಉವಾಚ*

ಏವಮುಕ್ತ್ವಾ ಸ ದೇವರ್ಷಿರ್ಗತೋ ನಾರಾಯಣಾಶ್ರಮಮ್ ।
ನಲಕೂಬರಮಣಿಗ್ರೀವಾವಾಸತುರ್ಯಮಲಾರ್ಜುನೌ ॥ ೨೩ ॥

ಋಷೇರ್ಭಾಗವತಮುಖ್ಯಸ್ಯ ಸತ್ಯಂ ಕರ್ತುಂ ವಚೋ ಹರಿಃ ।
ಜಗಾಮ ಶನಕೈಸ್ತತ್ರ ಯತ್ರಾಸ್ತಾಂ ಯಮಲಾರ್ಜುನೌ ॥ ೨೪ ॥

ದೇವರ್ಷಿರ್ಮೇ ಪ್ರಿಯತಮೋ ಯದಿಮೌ ಧನದಾತ್ಮಜೌ ।
ತತ್ತಥಾ ಸಾಧಯಿಷ್ಯಾಮಿ ಯದ್ಗೀತಂ ತನ್ಮಹಾತ್ಮನಾ ॥ ೨೫ ॥

ಇತ್ಯಂತರೇಣಾರ್ಜುನಯೋಃ ಕೃಷ್ಣಸ್ತು ಯಮಯೋರ್ಯಯೌ ।
ಆತ್ಮನಿರ್ವೇಶಮಾತ್ರೇಣ ತಿರ್ಯಗ್ಗತಮುಲೂಖಲಮ್ ॥ ೨೬ ॥

ಬಾಲೇನ ನಿಷ್ಕರ್ಷಯತಾನ್ವಗುಲೂಖಲಂ ತದ್
ದಾಮೋದರೇಣ ತರಸೋತ್ಕಲಿತಾಂಘ್ರಿಬಂಧೌ ।
ನಿಷ್ಪೇತತುಃ ಪರಮವಿಕ್ರಮಿತಾತಿವೇಪ-
ಸ್ಕಂಧಪ್ರವಾಲವಿಟಪೌ ಕೃತಚಂಡಶಬ್ದೌ ॥ ೨೭ ॥

ಯಾವ ಮಹಾತ್ಮರ ಚಿತ್ತದಲ್ಲಿ ಸರ್ವರ ಕುರಿತು ಸಮತ್ವವಿದೆಯೋ, ಶ್ರೀಮುಕುಂದನ ಪಾದಾರವಿಂದಗಳಲ್ಲಿ ಯಾರು ಶರಣು ಹೊಂದಿರುವರೋ, ಅವರಿಗೆ ದುರ್ಗುಣಗಳ ಭಂಡಾರದಂತಿರುವ ಅಥವಾ ದುರಾಚಾರಿಗಳಂತೆ ಜೀವನ ನಡೆಸುವ ಹಾಗೂ ಧನಮದದಿಂದ ಉನ್ಮತ್ತರಾದ ಇಂತಹ ದುಷ್ಟರಿಂದ ಏನಾಗಬೇಕಾಗಿದೆ ? ಇವರಾದರೋ ಸತ್ಪುರುಷರ ಉಪೇಕ್ಷೆಗೆ ಪಾತ್ರರಾಗಿ ಇರುತ್ತಾರೆ. ॥ ೧೮ ॥ ಈ ಯಕ್ಷರಿಬ್ಬರೂ ವಾರುಣೀ ಮದ್ಯವನ್ನು ಕುಡಿದು ಉನ್ಮತ್ತರಾಗಿದ್ದು, ಧನಮದದಿಂದ ಕುರುಡರಾಗಿ ಇರುವರು. ತನ್ನ ಇಂದ್ರಿಯಗಳ ಅಧೀನದಲ್ಲಿರುವ ಈ ಸ್ತ್ರೀಲಂಪಟರಾದ ಯಕ್ಷರ ಅಜ್ಞಾನ ಜನಿತವಾದ ಮದವನ್ನು ನಾನು ನಾಶಮಾಡಿಬಿಡುತ್ತೇನೆ. ॥ ೧೯ ॥ ಇವರು ಲೋಕಪಾಲ ಕುಬೇರನ ಪುತ್ರರಾಗಿದ್ದರೂ ಮದೋನ್ಮತ್ತರಾಗಿ ಬುದ್ಧಿಗೆಟ್ಟಿರುವರು. ತಾವು ಮತ್ತೊಬ್ಬರ ಮುಂದೆ ನಗ್ನರಾಗಿದ್ದೇವೆಂಬ ಅರಿವೂ ಇವರಿಗಿಲ್ಲವಲ್ಲ! ॥ ೨೦ ॥ ಆದುದರಿಂದ ಇವರಿಬ್ಬರೂ ಈಗ ವೃಕ್ಷಯೋನಿಯನ್ನು ಹೊಂದಲು ಯೋಗ್ಯರಾಗಿದ್ದಾರೆ. ಹೀಗಾದರೆ ಇವರಿಗೆ ಇಂತಹ ಅಭಿಮಾನವು ಉಂಟಾಗಲಾರದು. ವೃಕ್ಷಯೋನಿಯಲ್ಲಿದ್ದರೂ ಇವರಿಗೆ ನನ್ನ ಅನುಗ್ರಹದಿಂದ ಭಗವಂತನ ಸ್ಮರಣೆಯಿರುತ್ತದೆ. ಮತ್ತೆ ನನ್ನ ಅನುಗ್ರಹದಿಂದ ದೇವತೆಗಳ ನೂರು ವರ್ಷಗಳು ಕಳೆದ ಬಳಿಕ ಇವರಿಗೆ ಭಗವಾನ್ ಶ್ರೀಕೃಷ್ಣನ ಸಾನ್ನಿಧ್ಯವು ಪ್ರಾಪ್ತವಾಗಿ, ಭಗವಂತನ ಚರಣಗಳಲ್ಲಿ ಪರಮಭಕ್ತಿಯುಳ್ಳವರಾಗಿ ಮತ್ತೆ ತಮ್ಮ ಲೋಕಗಳಿಗೆ ಹೊರಟು ಹೋಗುವರು. ॥ ೨೧-೨೨ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ರಾಜೇಂದ್ರನೇ! ದೇವರ್ಷಿ ನಾರದರು ಹೀಗೆ ಹೇಳಿ ಭಗವಾನ್ ನರ-ನಾರಾಯಣ ಆಶ್ರಮಕ್ಕೆ ಹೊರಟು ಹೋದರು. ನಾರದರು ಹೇಳಿದಂತೆ ನಳಕೂಬರ-ಮಣಿಗ್ರೀವ ಇವರಿಬ್ಬರೂ ಒಡನೆಯೇ ಅರ್ಜುನ ವೃಕ್ಷಗಳಾಗಿ ಯಮಳಾರ್ಜುನ ವೃಕ್ಷಗಳೆಂದು ಪ್ರಸಿದ್ಧರಾದರು. ॥ ೨೩ ॥ ಭಗವಾನ್ ಶ್ರೀಕೃಷ್ಣನು ಭಾಗವತೋತ್ತಮರಾದ ನಾರದಮುನಿಗಳ ಮಾತನ್ನು ಸತ್ಯವಾಗಿಸಲು ಆ ಒರಳುಕಲ್ಲನ್ನು ನಿಧಾನವಾಗಿ ಎಳೆದುಕೊಂಡೇ ಯಮಳಾರ್ಜುನ ವೃಕ್ಷಗಳ ಬಳಿಗೆ ಸಾರಿದನು. ॥ ೨೪ ॥ ಭಗವಂತನು ಯೋಚಿಸಿದನು - ದೇವರ್ಷಿಗಳಾದ ನಾರದರು ನನಗೆ ಅತ್ಯಂತ ಪ್ರಿಯರು. ಇವರಿಬ್ಬರೂ ಕೂಡ ನನ್ನ ಭಕ್ತನಾದ ಕುಬೇರನ ಮಕ್ಕಳಾಗಿದ್ದಾರೆ. ಆದುದರಿಂದ ಮಹಾತ್ಮರಾದ ನಾರದರು ಹೇಳಿರುವಂತೆಯೇ ಈ ಇಬ್ಬರನ್ನೂ ನಾನು ಉದ್ಧರಿಸುತ್ತೇನೆ. ॥ ೨೫ ॥ ಹೀಗೆ ಅಂದುಕೊಂಡು ಭಗವಾನ್ ಶ್ರೀಕೃಷ್ಣನು ಎರಡೂ ಮರಗಳ ನಡುವೆ ನುಗ್ಗಿದನು. ಅವನಾದರೋ ಆ ಕಡೆ ದಾಟಿದನು, ಆದರೆ ಒರಳುಕಲ್ಲು ಅಡ್ಡಲಾಗಿ ಸಿಕ್ಕಿಹಾಕಿ ಕೊಂಡಿತು. ॥ ೨೬ ॥ ದಾಮೋದರ ಭಗವಾನ್ ಶ್ರೀಕೃಷ್ಣನ ಸೊಂಟಕ್ಕೆ ಹಗ್ಗ ಕಟ್ಟಲ್ಪಟ್ಟಿತ್ತು. ಅವನು ತನ್ನ ಹಿಂದೆ ಉರುಳಿ ಬರುತ್ತಿದ್ದ ಒರಳಕಲ್ಲನ್ನು ಸ್ವಲ್ಪ ಜೋರಾಗಿ ಎಳೆದನು. ಆಗಲೇ ವೃಕ್ಷಗಳಲ್ಲಿದ್ದ ದೊಡ್ಡ-ದೊಡ್ಡ ರೆಂಬೆಗಳು, ಚಿಕ್ಕ ರೆಂಬೆಗಳೂ, ಎಲೆಗಳೂ, ಚಿಗುರುಗಳೂ ಕಂಪಿಸಿದವು ಮತ್ತು ಆ ಮಹಾವೃಕ್ಷಗಳು ಬುಡಸಮೇತವಾಗಿ ಸಿಡಿಲಿನಂತೆ ಶಬ್ದಮಾಡುತ್ತಾ ಕೆಳಕ್ಕೆ ಉರುಳಿದವು. ॥ ೨೭ ॥

ತತ್ರ ಶ್ರಿಯಾ ಪರಮಯಾ ಕಕುಭಃ ಸ್ಫುರಂತೌ
ಸಿದ್ಧಾವುಪೇತ್ಯ ಕುಜಯೋರಿವ ಜಾತವೇದಾಃ ।
ಕೃಷ್ಣಂ ಪ್ರಣಮ್ಯ ಶಿರಸಾಖಿಲಲೋಕನಾಥಂ
ಬದ್ಧಾಂಜಲೀ ವಿರಜಸಾವಿದಮೂಚತುಃ ಸ್ಮ ॥ ೨೮ ॥

ಕೃಷ್ಣ ಕೃಷ್ಣ ಮಹಾಯೋಗಿನ್ಸ್ತ್ವಮಾದ್ಯಃ ಪುರುಷಃ ಪರಃ ।
ವ್ಯಕ್ತಾವ್ಯಕ್ತಮಿದಂ ವಿಶ್ವಂ ರೂಪಂ ತೇ ಬ್ರಾಹ್ಮಣಾ ವಿದುಃ
॥ ೨೯ ॥

ತ್ವಮೇಕಃ ಸರ್ವಭೂತಾನಾಂ ದೇಹಾಸ್ವಾತ್ಮೇಂದ್ರಿಯೇಶ್ವರಃ ।
ತ್ವಮೇವ ಕಾಲೋ ಭಗವಾನ್ವಿಷ್ಣುರವ್ಯಯ ಈಶ್ವರಃ
॥ ೩೦ ॥

ತ್ವಂ ಮಹಾನ್ಪ್ರಕೃತಿಃ ಸೂಕ್ಷ್ಮಾ ರಜಃಸತ್ತ್ವತಮೋಮಯೀ ।
ತ್ವಮೇವ ಪುರುಷೋಽಧ್ಯಕ್ಷಃ ಸರ್ವಕ್ಷೇತ್ರ ವಿಕಾರವಿತ್
॥ ೩೧ ॥

ಗೃಹ್ಯಮಾಣೈಸ್ತ್ವಮಗ್ರಾಹ್ಯೋ ವಿಕಾರೈಃ ಪ್ರಾಕೃತೈರ್ಗುಣೈಃ ।
ಕೋ ನ್ವಿಹಾರ್ಹತಿ ವಿಜ್ಞಾತುಂ ಪ್ರಾಕ್ಸಿದ್ಧಂ ಗುಣಸಂವೃತಃ
॥ ೩೨ ॥

ತಸ್ಮೈ ತುಭ್ಯಂ ಭಗವತೇ ವಾಸುದೇವಾಯ ವೇಧಸೇ ।
ಆತ್ಮದ್ಯೋತಗುಣೈಶ್ಛನ್ನಮಹಿಮ್ನೇ ಬ್ರಹ್ಮಣೇ ನಮಃ
॥ ೩೩ ॥

ಯಸ್ಯಾವತಾರಾ ಜ್ಞಾಯಂತೇ ಶರೀರೇಷ್ವಶರೀರಿಣಃ ।
ತೈಸ್ತೈರತುಲ್ಯಾತಿಶಯೈರ್ವೀರ್ಯೈರ್ದೇಹಿಷ್ವಸಂಗತೈಃ
॥ ೩೪ ॥

ಸ ಭವಾನ್ಸರ್ವಲೋಕಸ್ಯ ಭವಾಯ ವಿಭವಾಯ ಚ ।
ಅವತೀರ್ಣೋಽಂಶಭಾಗೇನ ಸಾಂಪ್ರತಂ ಪತಿರಾಶಿಷಾಮ್
॥ ೩೫ ॥

ನಮಃ ಪರಮಕಲ್ಯಾಣ ನಮಃ ಪರಮಮಂಗಲ ।
ವಾಸುದೇವಾಯ ಶಾಂತಾಯ ಯದೂನಾಂ ಪತಯೇ ನಮಃ
॥ ೩೬ ॥

ಅನುಜಾನೀಹಿ ನೌ ಭೂಮಂಸ್ತವಾನುಚರಕಿಂಕರೌ ।
ದರ್ಶನಂ ನೌ ಭಗವತ ಋಷೇರಾಸೀದನುಗ್ರಹಾತ್
॥ ೩೭ ॥

ಆ ಎರಡೂ ಅರ್ಜುನವೃಕ್ಷಗಳಿಂದ ಅಗ್ನಿಯಂತೆ ತೇಜಸ್ವಿಗಳಾದ ಇಬ್ಬರು ಸಿದ್ಧಪುರುಷರು ಹೊರಬಂದರು. ಅವರ ದಿವ್ಯ ಪ್ರಭೆಯಿಂದಾಗಿ ದಿಕ್ಕುಗಳು ಬೆಳಗಿದವು. ಅವರು ಅಖಿಲಲೋಕ ನಾಥನಾದ ಪರಾತ್ಪರನಾದ ಶ್ರೀಕೃಷ್ಣನ ಬಳಿಗೆ ಬಂದು ಅವನ ಚರಣಗಳಲ್ಲಿ ತಲೆಯನ್ನಿಟ್ಟು ನಮಸ್ಕರಿಸಿ, ಕೈಗಳನ್ನು ಜೋಡಿಸಿಕೊಂಡು ಶುದ್ಧಹೃದಯದಿಂದ ಬಾಲಕೃಷ್ಣನನ್ನು ಸ್ತುತಿಸತೊಡಗಿದರು. ॥ ೨೮ ॥

ಓ ಸಚ್ಚಿದಾನಂದ ಸ್ವರೂಪಿಯೇ ! ಸಮಸ್ತರನ್ನು ತನ್ನತ್ತ ಆಕರ್ಷಿಸುವ ಯೋಗೇಶ್ವರನಾದ ಕೃಷ್ಣನೇ ! ನೀನು ಪ್ರಕೃತಿಗೆ ಅತೀತನಾಗಿ ಸ್ವಯಂ ಪುರುಷೋತ್ತಮನಾಗಿರುವೆ. ಈ ವ್ಯಕ್ತ ಮತ್ತು ಅವ್ಯಕ್ತ ಸಂಪೂರ್ಣ ಜಗತ್ತು ನಿನ್ನದೇ ಸ್ವರೂಪವಾಗಿದೆ ಎಂದು ವೇದಜ್ಞರಾದ ಬ್ರಾಹ್ಮಣರು ತಿಳಿದಿರುತ್ತಾರೆ. ॥ ೨೯ ॥ ನೀನೇ ಸಮಸ್ತ ಪ್ರಾಣಿಗಳ ಶರೀರ, ಪ್ರಾಣ, ಅಂತಃಕರಣ ಮತ್ತು ಇಂದ್ರಿಯಗಳ ಸ್ವಾಮಿಯಾಗಿರುವೆ. ನೀನೇ ಸರ್ವಶಕ್ತನಾದ ಕಾಲಸ್ವರೂಪನೂ, ಸರ್ವವ್ಯಾಪಕನೂ, ಅವಿನಾಶಿಯೂ, ಈಶ್ವರನೂ ಆಗಿರುವೆ.॥೩೦॥ ನೀನೇ ಮಹತ್ತ್ವವೂ, ಸತ್ತ್ವ-ರಜಸ್ತಮೋ ಗುಣಮಯವಾದ ಅತ್ಯಂತ ಸೂಕ್ಷ್ಮ ಪ್ರಕೃತಿಯೂ ಆಗಿರುವೆ. ನೀನೇ ಸಮಸ್ತ ಸ್ಥೂಲ ಮತ್ತು ಸೂಕ್ಷ್ಮ ಶರೀರಗಳ ಕರ್ಮ, ಭಾವ, ಧರ್ಮ ಮತ್ತು ಸತ್ತೆಯನ್ನು ತಿಳಿಯುವ ಎಲ್ಲರ ಸಾಕ್ಷಿಯಾದ ಪರಮಾತ್ಮನಾಗಿರುವೆ. ॥ ೩೧ ॥ ವೃತ್ತಿಗಳಿಂದ ಗ್ರಹಿಸಲ್ಪಡುವ ಪ್ರಕೃತಿಯ ಗುಣಗಳಿಂದ ಮತ್ತು ವಿಕಾರಗಳಿಂದ ನೀನು ಗ್ರಹಿಸಲ್ಪಡತಕ್ಕವನಲ್ಲ. ಸ್ಥೂಲ ಮತ್ತು ಸೂಕ್ಷ್ಮ ಶರೀರಗಳ ಆವರಣಗಳಿಂದ ಮುಚ್ಚಲ್ಪಟ್ಟ ಯಾವನು ತಾನೇ ನಿನ್ನನ್ನು ತಿಳಿಯಬಲ್ಲನು ? ಏಕೆಂದರೆ, ನೀನಾದರೋ ಆ ಶರೀರಗಳು ಉಂಟಾಗುವ ಮೊದಲೇ ಸ್ವಪ್ರಕಾಶನಾಗಿ ಸಿದ್ಧನಾಗಿರುವೆ. ॥ ೩೨ ॥ ಸಮಸ್ತ ಪ್ರಪಂಚದ ಸೃಷ್ಟಿಕರ್ತನಾದ ಭಗವಾನ್ ವಾಸುದೇವನಿಗೆ ನಾವು ನಮಸ್ಕರಿಸುತ್ತೇವೆ. ಪ್ರಭೋ ! ನಿನ್ನ ಮೂಲಕ ಪ್ರಕಾಶಿತವಾಗುವ ಗುಣಗಳಿಂದಲೇ ನೀನು ನಿನ್ನ ಮಹಿಮೆಯನ್ನು ಅಡಗಿಸಿಟ್ಟಿರುವೆ. ಪರಬ್ರಹ್ಮ ಸ್ವರೂಪನಾದ ಶ್ರೀಕೃಷ್ಣನೇ! ನಾವು ನಿನಗೆ ನಮಸ್ಕರಿಸುತ್ತಿದ್ದೇವೆ. ॥ ೩೩ ॥ ನೀನು ಪ್ರಾಕೃತ ಶರೀರದಿಂದ ರಹಿತನಾಗಿರುವೆ. ಹೀಗಿದ್ದರೂ ನೀನು ಸಾಧಾರಣವಾಗಿ ಶರೀರಧಾರಿಗಳಿಗೆ ಶಕ್ಯವಲ್ಲದ ಪರಾಕ್ರಮಗಳನ್ನು ಪ್ರಕಟಪಡಿಸುವೆ. ಅದರಿಂದ ಹೆಚ್ಚೇನು ಅದಕ್ಕೆ ಸಮಾನವಾಗಿಯೂ ಯಾರೂ ಮಾಡಲಾಗದಿದ್ದಾಗ ಅವುಗಳ ಮೂಲಕ ಆ ಶರೀರಗಳಲ್ಲಿ ನಿನ್ನ ಅವತಾರಗಳ ಅರಿವು ಉಂಟಾಗುತ್ತದೆ. ॥ ೩೪ ॥ ಪ್ರಭೋ ! ನೀನೇ ಸಮಸ್ತ ಲೋಕಗಳ ಅಭ್ಯುದಯ ಮತ್ತು ನಿಃಶ್ರೇಯಸ್ಸಿಗಾಗಿ ಈಗ ನಿನ್ನ ಸಮಸ್ತ ಶಕ್ತಿಗಳಿಂದ ಅವತರಿಸಿರುವೆ. ನೀನು ಸಮಸ್ತ ಅಭಿಲಾಷೆಗಳನ್ನು ಪೂರ್ಣಗೊಳಿಸುವವನಾಗಿರುವೆ. ॥ ೩೫ ॥ ಪರಮ ಕಲ್ಯಾಣ ಸ್ವರೂಪನೇ ! ದಿವ್ಯ ಮಂಗಳ ವಿಗ್ರಹನೇ ! ಮಂಗಳ ಸ್ವರೂಪನೇ ! ನಿನಗೆ ನಮಸ್ಕರಿಸುತ್ತೇವೆ. ಶಾಂತಾತ್ಮನೇ ! ಯದುಪತಿಯೇ ! ನಿನಗೆ ನಮಸ್ಕರಿಸುತ್ತೇವೆ. ॥ ೩೬ ॥ ಅನಂತನೇ ! ನಾವು ನಿನ್ನ ದಾಸಾನುದಾಸರಾಗಿದ್ದೇವೆ. ನೀನು ನಮ್ಮನ್ನು ಸ್ವೀಕರಿಸು. ಮಹರ್ಷಿಗಳಾದ ನಾರದಮುನಿಗಳ ಪರಮಾನುಗ್ರಹದಿಂದಲೇ ಅಪರಾಧಿಗಳಾಗಿದ್ದ ನಮಗೆ ನಿನ್ನ ದಿವ್ಯದರ್ಶನ ದೊರೆಯಿತು. ॥ ೩೭ ॥

ವಾಣೀ ಗುಣಾನುಕಥನೇ ಶ್ರವಣೌ ಕಥಾಯಾಂ
ಹಸ್ತೌ ಚ ಕರ್ಮಸು ಮನಸ್ತವ ಪಾದಯೋರ್ನಃ ।
ಸ್ಮೃತ್ಯಾಂ ಶಿರಸ್ತವ ನಿವಾಸಜಗತ್ಪ್ರಣಾಮೇ
ದೃಷ್ಟಿಃ ಸತಾಂ ದರ್ಶನೇಽಸ್ತು ಭವತ್ತನೂನಾಮ್ ॥ ೩೮ ॥

ಪ್ರಭೋ! ನಮ್ಮ ವಾಣಿಯು ನಿನ್ನ ಮಂಗಳ ಗುಣಗಳನ್ನು ವರ್ಣಿಸುತ್ತಿರಲಿ. ನಮ್ಮ ಕಿವಿಗಳು ನಿನ್ನ ರಸವತ್ತಾದ ಕಥಾ ಶ್ರವಣದಲ್ಲಿ ತೊಡಗಿರಲಿ. ನಮ್ಮ ಕೈಗಳು ನಿನ್ನ ಸೇವೆಯಲ್ಲಿ ಮತ್ತು ಮನಸ್ಸು ನಿನ್ನ ಚರಣಕಮಲಗಳ ಸ್ಮರಣೆಯಲ್ಲಿ ತೊಡಗಿರಲಿ. ಈ ಸಮಸ್ತ ಜಗತ್ತು ನಿನ್ನ ನಿವಾಸ ಸ್ಥಾನವಾಗಿದೆ. ಎಲ್ಲರೆದುರು ನಮ್ಮ ಶಿರಸ್ಸು ಬಾಗಿರಲಿ. ಸಂತರು ನಿನ್ನ ಪ್ರತ್ಯಕ್ಷ ಶರೀರವಾಗಿದ್ದಾರೆ. ನಮ್ಮ ಕಣ್ಣುಗಳು ಅವರನ್ನು ದರ್ಶಿಸುತ್ತಿರಲಿ. ॥ ೩೮ ॥

ಶ್ರೀಶುಕ ಉವಾಚ

ಇತ್ಥಂ ಸಂಕೀರ್ತಿತಸ್ತಾಭ್ಯಾಂ ಭಗವಾನ್ಗೋಕುಲೇಶ್ವರಃ ।
ದಾಮ್ನಾ ಚೋಲೂಖಲೇ ಬದ್ಧಃ ಪ್ರಹಸನ್ನಾಹ ಗುಹ್ಯಕೌ ॥ ೩೯ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ನಳಕೂಬರ-ಮಣಿಗ್ರೀವರು ಹೀಗೆ ಸ್ತೋತ್ರ ಮಾಡಲು, ಸೌಂದರ್ಯನಿಧಿಯೂ, ಮಾಧುರ್ಯನಿಧಿಯೂ, ಗೋಕುಲೇಶ್ವರನೂ ಆದ ಶ್ರೀಕೃಷ್ಣನು ಹಗ್ಗದಿಂದ ಒರಳಿಗೆ ಕಟ್ಟಿಹಾಕಲ್ಪಟ್ಟಂತೆ ನಸುನಗುತ್ತಾ ಅವರಲ್ಲಿ ಇಂತೆಂದನು. ॥ ೩೯ ॥

ಶ್ರೀಭಗವಾನುವಾಚ

ಜ್ಞಾತಂ ಮಮ ಪುರೈವೈತದ್‌ಋಷಿಣಾ ಕರುಣಾತ್ಮನಾ ।
ಯಚ್ಛ್ರೀಮದಾಂಧಯೋರ್ವಾಗ್ಭಿರ್ವಿಭ್ರಂಶೋಽನುಗ್ರಹಃ ಕೃತಃ ॥ ೪೦ ॥

ಸಾಧೂನಾಂ ಸಮಚಿತ್ತಾನಾಂ ಸುತರಾಂ ಮತ್ಕೃತಾತ್ಮನಾಮ್ ।
ದರ್ಶನಾನ್ನೋ ಭವೇದ್ಬಂಧಃ ಪುಂಸೋಽಕ್ಷ್ಣೋಃ ಸವಿತುರ್ಯಥಾ ॥ ೪೧ ॥

**ಶ್ರೀಭಗವಂತನು ಹೇಳಿದನು** - ಗುಹ್ಯಕರೇ! ನೀವು ಧನ ಮದದಿಂದ ಕುರುಡರಾಗಿ ಬಿಟ್ಟಿದ್ದಿರಿ. ಪರಮ ಕಾರುಣಿಕರಾದ ನಾರದಮಹರ್ಷಿಗಳು ನಿಮಗೆ ಶಾಪವನ್ನು ಕೊಟ್ಟು ನಿಮ್ಮ ಐಶ್ವರ್ಯವನ್ನು ವಿನಾಶಗೊಳಿಸಿದ್ದರು ಹಾಗೂ ನನ್ನ ಸಾನ್ನಿಧ್ಯವು ಸಿಕ್ಕಿ ಶಾಪ ಮುಕ್ತರಾಗುವಂತೆ ಅನುಗ್ರಹಿಸಿದ್ದರು ಎಂಬುದು ನಾನು ಮೊದಲಿನಿಂದಲೇ ತಿಳಿದಿದ್ದೆ. ॥ ೪೦ ॥ ಯಾರ ಬುದ್ಧಿಯು ಸಮದರ್ಶಿಯಾಗಿದೆಯೋ, ಯಾರ ಹೃದಯ ಪೂರ್ಣವಾಗಿ ನನಗೆ ಸಮರ್ಪಿತವಾಗಿದೆಯೋ ಅಂತಹ ಸತ್ಪುರುಷರ ದರ್ಶನ ಮಾತ್ರದಿಂದಲೇ - ಸೂರ್ಯನುದಯಿಸಿದೊಡನೆ ಮನುಷ್ಯರ ಕಣ್ಣುಗಳಿಂದ ಕತ್ತಲೆಯು ದೂರವಾಗುವಂತೆಯೇ - ಸಮಸ್ತವಾದ ಬಂಧನಗಳು ದೂರವಾಗುತ್ತವೆ. ॥ ೪೧ ॥ ಆದ್ದರಿಂದ ನಳಕೂಬರ-ಮಣಿಗ್ರೀವರೇ! ನೀವು ನನ್ನಲ್ಲಿ ಪರಾಯಣರಾಗಿ ನಿಮ್ಮ ನಿಮ್ಮ ಮನೆಗಳಿಗೆ ಹೋಗಿರಿ. ನಿಮ್ಮುಗಳಿಗೆ ಇಷ್ಟವಾದ ಸಂಸಾರ ಚಕ್ರದಿಂದ ಬಿಡುಗಡೆಗೊಳಿಸುವಂತಹ ಅನನ್ಯ ಭಕ್ತಿಭಾವವು ಪ್ರಾಪ್ತವಾಗಿದೆ. ॥ ೪೨ ॥

ತದ್ಗಚ್ಛತಂ ಮತ್ಪರಮೌ ನಲಕೂಬರಸಾದನಮ್ ।
ಸಂಜಾತೋ ಮಯಿ ಭಾವೋ ವಾಮೀಪ್ಸಿತಃ ಪರಮೋಽಭವಃ ॥ ೪೨ ॥

ಶ್ರೀಶುಕ ಉವಾಚ

ಇತ್ಯುಕ್ತೌ ತೌ ಪರಿಕ್ರಮ್ಯ ಪ್ರಣಮ್ಯ ಚ ಪುನಃ ಪುನಃ ।
ಬದ್ಧೋಲೂಖಲಮಾಮಂತ್ರ್ಯ ಜಗ್ಮತುರ್ದಿಶಮುತ್ತರಾಮ್ ॥ ೪೩ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಭಗವಂತನು ಹೀಗೆ ಹೇಳಿದಾಗ ಅವರಿಬ್ಬರೂ ಕೃಷ್ಣನಿಗೆ ಪ್ರದಕ್ಷಿಣೆ ಬಂದು ಪದೇ-ಪದೇ ನಮಸ್ಕಾರ ಮಾಡಿದರು. ಇದಾದ ಬಳಿಕ ಕಟ್ಟಲ್ಪಟ್ಟ ಸರ್ವೇಶ್ವರನ ಅಪ್ಪಣೆಯನ್ನು ಪಡೆದು ಅವರು ಉತ್ತರ ದಿಕ್ಕಿನ ಕಡೆ ಪ್ರಯಾಣ ಮಾಡಿದರು. ॥ ೪೩ ॥

*ಹತ್ತನೆಯ ಅಧ್ಯಾಯವು ಮುಗಿಯಿತು. ॥ ೧೦ ॥*

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ ನಾರದಶಾಪೋ ನಾಮ ದಶಮೋಽಧ್ಯಾಯಃ ॥ ೧೦ ॥**

# ಹನ್ನೊಂದನೆಯ ಅಧ್ಯಾಯ

## ಗೋಕುಲದಿಂದ ವೃಂದಾವನಕ್ಕೆ ಹೋದುದು ಹಾಗೂ ವತ್ಸಾಸುರ ಮತ್ತು ಬಕಾಸುರರ ಉದ್ಧಾರ

*ಶ್ರೀಶುಕ ಉವಾಚ*

ಗೋಪಾ ನಂದಾದಯಃ ಶ್ರುತ್ವಾದ್ರುಮಯೋಃ ಪತತೋ ರವಮ್ ।
ತತ್ರಾಜಗ್ಮುಃ ಕುರುಶ್ರೇಷ್ಠ ನಿರ್ಘಾತಭಯಶಂಕಿತಾಃ ॥ ೧ ॥

ಭೂಮ್ಯಾಂ ನಿಪತಿತೌ ತತ್ರ ದದೃಶುರ್ಯಮಲಾರ್ಜುನೌ ।
ಬಭ್ರಮುಸ್ತದವಿಜ್ಞಾಯ ಲಕ್ಷ್ಯಂ ಪತನಕಾರಣಮ್ ॥ ೨ ॥

ಉಲೂಖಲಂ ವಿಕರ್ಷಂತಂ ದಾಮ್ನಾ ಬದ್ಧಂ ಚ ಬಾಲಕಮ್ ।
ಕಸ್ಯೇದಂ ಕುತ ಆಶ್ಚರ್ಯಮುತ್ಪಾತ ಇತಿ ಕಾತರಾಃ ॥ ೩ ॥

ಬಾಲಾ ಊಚುರನೇನೇತಿ ತಿರ್ಯಗ್ಗತಮುಲೂಖಲಮ್ ।
ವಿಕರ್ಷತಾ ಮಧ್ಯಗೇನ ಪುರುಷಾವಪ್ಯಚಕ್ಷ್ಮಹಿ ॥ ೪ ॥

ನ ತೇ ತದುಕ್ತಂ ಜಗೃಹುರ್ನ ಘಟೇತೇತಿ ತಸ್ಯ ತತ್ ।
ಬಾಲಸ್ಯೋತ್ಪಾಟನಂ ತರ್ವೋಃ ಕೇಚಿತ್ಸಂದಿಗ್ಧಚೇತಸಃ ॥ ೫ ॥

ಉಲೂಖಲಂ ವಿಕರ್ಷಂತಂ ದಾಮ್ನಾ ಬದ್ಧಂ ಸ್ವಮಾತ್ಮಜಮ್ ।
ವಿಲೋಕ್ಯ ನಂದಃ ಪ್ರಹಸದ್ವದನೋ ವಿಮುಮೋಚ ಹ ॥ ೬ ॥

ಗೋಪೀಭಿಃ ಸ್ತೋಭಿತೋಽನೃತ್ಯದ್ಭಗವಾನ್ಬಾಲವತ್ಕ್ವಚಿತ್ ।
ಉದ್ಗಾಯತಿ ಕ್ವಚಿನ್ಮುಗ್ಧಸ್ತದ್ವಶೋ ದಾರುಯಂತ್ರವತ್ ॥ ೭ ॥

ಬಿಭರ್ತಿ ಕ್ವಚಿದಾಜ್ಞಪ್ತಃ ಪೀಠಕೋನ್ಮಾನಪಾದುಕಮ್ ।
ಬಾಹುಕ್ಷೇಪಂ ಚ ಕುರುತೇ ಸ್ವಾನಾಂ ಚ ಪ್ರೀತಿಮಾವಹನ್ ॥ ೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಕುರುಶ್ರೇಷ್ಠನೇ! ಅರ್ಜುನ ವೃಕ್ಷಗಳು ಬಿದ್ದಾಗ ಉಂಟಾದ ಘೋರ ಶಬ್ದವನ್ನು ಗೋಕುಲದ ನಂದನೇ ಮೊದಲಾದ ಗೋಪಾಲಕರೂ ಕೇಳಿಸಿಕೊಂಡು, ಸಿಡಿಲೇನಾದರೂ ಬಡಿಯಿತೋ ಎಂಬ ಸಂದೇಹದಿಂದ ಅವರೆಲ್ಲರೂ ಆ ವೃಕ್ಷಗಳ ಬಳಿಗೆ ಬಂದರು. ॥ ೧ ॥ ಎರಡೂ ವೃಕ್ಷಗಳು ಬುಡಮೇಲಾಗಿ ಉರುಳಿ ಬಿದ್ದಿರುವುದನ್ನು ಅವರೆಲ್ಲರೂ ಕಂಡರು. ಆ ವೃಕ್ಷಗಳ ಮಧ್ಯಭಾಗದಿಂದ ಸೊಂಟಕ್ಕೆ ಕಟ್ಟಿದ ಒರಳು ಕಲ್ಲನ್ನು ಕೃಷ್ಣನು ಎಳೆದುಕೊಂಡು ದಾಟಿ ಹೋಗಿರುವುದನ್ನು ನೋಡಿದರು. ಆದರೆ ವೃಕ್ಷಗಳು ಬಿದ್ದ ಕಾರಣವನ್ನು ಅವರು ತಿಳಿಯದೇ ಹೋದರು. ಈ ವೃಕ್ಷಗಳನ್ನು ಉರುಳಿಸಿದವರು ಯಾರು? ಹೇಗೆ ಉರುಳಿದುವು? ಇಂತಹ ಆಶ್ಚರ್ಯಕರವಾದ ಘಟನೆ ಹೇಗೆ ನಡೆಯಿತು? ಎಂದು ಯೋಚಿಸಿ ಗಾಬರಿಗೊಂಡರು. ಅವರ ಬುದ್ಧಿಯು ಭ್ರಮಿಸಿತು. ॥ ೨-೩ ॥

ಅಲ್ಲಿಯೇ ಆಡುತ್ತಿದ್ದ ಕೆಲವು ಬಾಲಕರು ನಂದಾದಿಗಳಿಗೆ ಹೇಳಿದರು – ಅಯ್ಯಾ! ಇದಾದರೋ ಇದೇ ಮುದ್ದು ಕೃಷ್ಣನ ಕೆಲಸವಾಗಿದೆ. ಇವನು ಎರಡೂ ವೃಕ್ಷಗಳ ನಡುವಿನಿಂದ ದಾಟಿ ಹೋಗುವಾಗ ಒರಳು ಅಡ್ಡಲಾಗಿ ಸಿಕ್ಕಿಹಾಕಿಕೊಂಡಿತು. ಇವನು ಅದನ್ನು ಸ್ವಲ್ಪ ಎಳೆದಾಗ ಈ ಮರಗಳು ಉರುಳಿ ಬಿದ್ದವು. ನಾವಾದರೋ ಇವುಗಳಿಂದ ಹೊರಟ ಇಬ್ಬರು ದಿವ್ಯ ಪುರುಷರನ್ನೂ ನೋಡಿದೆವು. ॥ ೪ ॥ ಆದರೆ ಗೋಪಾಲಕರು ಈ ಬಾಲಕರ ಮಾತುಗಳನ್ನು ಒಪ್ಪಿಕೊಳ್ಳಲಿಲ್ಲ. 'ಒಂದು ಪುಟ್ಟ ಬಾಲಕನು ಇಷ್ಟು ದೊಡ್ಡದಾದ ಮರಗಳನ್ನು ಕಿತ್ತು ಹಾಕುವುದು ಇದು ಎಂದಿಗೂ ಸಂಭವವಿಲ್ಲ' ಎಂದು ಆಡಿಕೊಂಡರು. ಕೆಲವರ ಮನಸ್ಸಿನಲ್ಲಿ ಶ್ರೀಕೃಷ್ಣನ ಮೊದಲಿನ ಲೀಲೆಗಳನ್ನು ನೆನೆದು ಇರಬಹುದೆಂದು ಸಂದೇಹಿಸಿದರು. ॥ ೫ ॥ ನಂದಗೋಪನು ನೋಡುತ್ತಾನೆ – ತನ್ನ ಪ್ರಾಣಪ್ರಿಯನಾದ ಕಂದಮ್ಮನು ಹಗ್ಗದಿಂದ ಕಟ್ಟಲ್ಪಟ್ಟು ಒರಳನ್ನು ಎಳೆದುಕೊಂಡು ಹೋಗುತ್ತಿರುವನು. ಅವನು ನಗುತ್ತಾ ಲಗುಬಗೆಯಿಂದ ಹೋಗಿ ಹಗ್ಗವನ್ನು ಬಿಡಿಸಿದನು. ॥ ೬ ॥

ಸರ್ವಶಕ್ತನಾದ ಭಗವಂತನು ಕೆಲವೊಮ್ಮೆ ಗೋಪಿಯರು ಪುಸಲಾಯಿಸಿದಾಗ ಸಾಧಾರಣ ಬಾಲಕರಂತೆ ಕುಣಿಯುತ್ತಿದ್ದನು. ಕೆಲವೊಮ್ಮೆ ಮುಗ್ಧಬಾಲಕನಂತೆ ಹಾಡತೊಡಗುವನು. ಅವನು ಅವರ ಕೈಗೊಂಬೆಯಾಗಿ ಪೂರ್ಣವಾಗಿ ಅವರಿಗೆ ಅಧೀನನಾಗಿ ಬಿಟ್ಟಿದ್ದನು. ॥ ೭ ॥ ಕೆಲವೊಮ್ಮೆ ಅವರ ಆಜ್ಞೆಯಂತೆ ಮಣೆಗಳನ್ನು, ಪಾತ್ರೆಗಳನ್ನೂ ಪಾದುಕೆಗಳನ್ನೂ ಹೊತ್ತು ತರುತ್ತಿದ್ದನು. ಕೆಲವೊಮ್ಮೆ ತನ್ನ ಪ್ರೇಮೀ ಭಕ್ತರಿಗೆ (ಗೋಪಿಯರನ್ನು) ಸಂತೋಷವನ್ನು ಉಂಟುಮಾಡಲಿಕ್ಕಾಗಿ ಪೈಲ್ವಾನರಂತೆ ಭುಜಗಳನ್ನು ತಟ್ಟಿಕೊಳ್ಳುತ್ತಾ ಮೇಲೆತ್ತಿ ಹಿಡಿಯುವನು. ॥ ೮ ॥

ದರ್ಶಯಂಸ್ತದ್ವಿದಾಂ ಲೋಕ ಆತ್ಮನೋ ಭೃತ್ಯವಶ್ಯತಾಮ್ ।
ವ್ರಜಸ್ಯೋವಾಹ ವೈ ಹರ್ಷಂ ಭಗವಾನ್ಬಾಲಚೇಷ್ಟಿತೈಃ ॥ ೯ ॥

ಹೀಗೆ ಸರ್ವಶಕ್ತಿಮಂತನಾದ ಭಗವಂತನು ತನ್ನ ಬಾಲಲೀಲೆಗಳಿಂದ ವ್ರಜವಾಸಿಗಳನ್ನು ಸಂತೋಷಪಡಿಸುತ್ತಾ, ಭಗವಂತನೆಂಬ ರಹಸ್ಯವನ್ನು ತಿಳಿದವರಿಗೆ ತಾನು ಭಕ್ತಪರಾಧೀನನೆಂಬುದನ್ನು ಪ್ರಕಟಪಡಿಸುತ್ತಿದ್ದನು. ॥ ೯ ॥

ಕ್ರೀಣೀಹಿ ಭೋಃ ಫಲಾನೀತಿ ಶ್ರುತ್ವಾ ಸತ್ವರಮಚ್ಯುತಃ ।
ಫಲಾರ್ಥೀ ಧಾನ್ಯಮಾದಾಯ ಯಯೌ ಸರ್ವಫಲಪ್ರದಃ ॥ ೧೦ ॥

ಒಂದು ದಿನ ಹಣ್ಣುಮಾರುವವಳೊಬ್ಬಳು ಬಂದು 'ಹಣ್ಣು ಬಂದಿದೆ! ಹಣ್ಣು ತೆಗೆದುಕೊಳ್ಳಿ' ಎಂದು ಕೂಗಿಕೊಂಡಳು. ಇದನ್ನು ಕೇಳುತ್ತಲೇ ಸಮಸ್ತ ಕರ್ಮ ಮತ್ತು ಉಪಾಸನೆಗಳ ಫಲವನ್ನು ನೀಡುವಂತಹ ಭಗವಂತನಾದ ಅಚ್ಯುತನು ಹಣ್ಣುಗಳನ್ನು ಕೊಂಡುಕೊಳ್ಳಲು ತನ್ನ ಪುಟ್ಟದಾದ ಬೊಗಸೆಯಲ್ಲಿ ಧಾನ್ಯವನ್ನು ಎತ್ತಿಕೊಂಡು ಓಡಿ ಬಂದನು. ॥ ೧೦ ॥

ಫಲವಿಕ್ರಯಿಣೀ ತಸ್ಯ ಚ್ಯುತಧಾನ್ಯಂ ಕರದ್ವಯಮ್ ।
ಫಲೈರಪೂರಯದ್ರತ್ನೈಃ ಫಲಭಾಂಡಮಪೂರಿ ಚ ॥ ೧೧ ॥

ಅವನ ಬೊಗಸೆಯಿಂದ ಧಾನ್ಯವಾದರೋ ದಾರಿಯಲ್ಲೇ ಚೆಲ್ಲಿ ಹೋಗಿತ್ತು. ಆದರೆ ಹಣ್ಣು ಮಾರುವವಳು ಅವನ ಎರಡೂ ಕೈತುಂಬಾ ಹಣ್ಣುಗಳನ್ನು ಕೊಟ್ಟಳು. ಇತ್ತ ಭಗವಂತನೂ ಕೂಡ ಆಕೆಯ ಹಣ್ಣುಗಳನ್ನು ತುಂಬುವ ಬುಟ್ಟಿಯನ್ನು ನವರತ್ನಗಳಿಂದ ತುಂಬಿಬಿಟ್ಟನು. ॥ ೧೧ ॥

ಸರಿತ್ತೀರಗತಂ ಕೃಷ್ಣಂ ಭಗ್ನಾರ್ಜುನಮಥಾಹ್ವಯತ್ ।
ರಾಮಂ ಚ ರೋಹಿಣೀ ದೇವೀ ಕ್ರೀಡಂತಂ ಬಾಲಕೈರ್ಭೃಶಮ್ ॥ ೧೨ ॥

ಅನಂತರ ಒಂದು ದಿನ ಯಮಳಾರ್ಜುನ ವೃಕ್ಷವನ್ನು ಮುರಿದಿರುವ ಶ್ರೀಕೃಷ್ಣ ಮತ್ತು ಬಲರಾಮರು ಗೊಲ್ಲ ಬಾಲಕರೊಂದಿಗೆ ಆಡುತ್ತಾ-ಆಡುತ್ತಾ ಯಮುನಾ ನದಿಯ ತೀರಕ್ಕೆ ಹೋದರು ಹಾಗೂ ಆಟದಲ್ಲಿ ಮೈಮರೆತರು. ಆಗ ರೋಹಿಣಿದೇವಿಯು ಅವರಿಬ್ಬರನ್ನೂ ಕರೆಯುತ್ತಾ ಓ ಕೃಷ್ಣಾ! ಓ ಬಲರಾಮಾ! ಬೇಗನೇ ಬನ್ನಿ, ಇನ್ನು ಆಟ ಸಾಕು. ॥ ೧೨ ॥

ನೋಪೇಯಾತಾಂ ಯದಾಽಽಹೂತೌ ಕ್ರೀಡಾಸಂಗೇನ ಪುತ್ರಕೌ ।
ಯಶೋದಾಂ ಪ್ರೇಷಯಾಮಾಸ ರೋಹಿಣೀ ಪುತ್ರವತ್ಸಲಾಮ್ ॥ ೧೩ ॥

ಆದರೆ ರೋಹಿಣಿಯು ಎಷ್ಟು ಕರೆದರೂ ಬರಲಿಲ್ಲ, ಕಾರಣ ಅವರಿಬ್ಬರೂ ಆಟದಲ್ಲಿ ತನ್ಮಯರಾಗಿದ್ದರು. ನಾನಾ ರೀತಿಯಿಂದ ಕರೆದಾಗಲೂ ಬಾಲಕರು ಬಾರದಿದ್ದಾಗ ರೋಹಿಣಿಯು ಪುತ್ರ ವತ್ಸಲೆಯಾದ ಯಶೋದಾದೇವಿಯನ್ನು ಮಕ್ಕಳನ್ನು ಕರೆತರಲು ಕಳಿಸಿದಳು. ॥ ೧೩ ॥

ಕ್ರೀಡಂತಂ ಸಾ ಸುತಂ ಬಾಲೈರತಿವೇಲಂ ಸಹಾಗ್ರಜಮ್ ।
ಯಶೋದಾಜೋಹವೀತ್ಕೃಷ್ಣಂ ಪುತ್ರಸ್ನೇಹಸ್ನುತಸ್ತನೀ ॥ ೧೪ ॥

ಶ್ರೀಕೃಷ್ಣ- ಬಲರಾಮರು ಗೋಪಾಲರೊಡನೆ ಎಷ್ಟೋ ಹೊತ್ತಿನಿಂದ ಆಟವಾಡುತ್ತಿದ್ದರು. ಯಶೋದೆಯು ಹೋಗಿ ಅವರನ್ನು ಕರೆದಳು. ಆಗ ಪುತ್ರನಲ್ಲಿದ್ದ ಅತಿಶಯವಾದ ಪ್ರೀತಿಯಿಂದಾಗಿ ಆಕೆಯ ಸ್ತನಗಳಿಂದ ಹಾಲು ಒಸರುತ್ತಿತ್ತು. ॥ ೧೪ ॥

ಕೃಷ್ಣ ಕೃಷ್ಣಾರವಿಂದಾಕ್ಷ ತಾತ ಏಹಿ ಸ್ತನಂ ಪಿಬ ।
ಅಲಂ ವಿಹಾರೈಃ ಕ್ಷುತ್ಕ್ಷಾಂತಃ ಕ್ರೀಡಾಶ್ರಾಂತೋಽಸಿ ಪುತ್ರಕ ॥ ೧೫ ॥

ಯಶೋದೆಯು ಕೃಷ್ಣನನ್ನು ಗಟ್ಟಿಯಾಗಿ ಕೂಗುತ್ತಾ – ಓ ಕೃಷ್ಣಾ! ನನ್ನ ಮುದ್ದು ಕಂದಮ್ಮ! ಮೋಹನಕೃಷ್ಣ! ಅರವಿಂದಾಕ್ಷನೇ! ಮಗು! ಚಿನ್ನ! ಬೇಗ ಬಾರೋ! ಸ್ತನ್ಯಪಾನ ಮಾಡು. ಇನ್ನಾದರೂ ನಿನ್ನ ಆಟಗಳನ್ನು ಸಾಕುಮಾಡು, ನೋಡಿಲ್ಲಿ! ಆಟವಾಡಿ ದಣಿದಿರಬಹುದು. ಬೇಗ ಬಾರೋ! ॥ ೧೫ ॥

ಹೇ ರಾಮಾಗಚ್ಛ ತಾತಾಶು ಸಾನುಜಃ ಕುಲನಂದನ ।
ಪ್ರಾತರೇವ ಕೃತಾಹಾರಸ್ತದ್ಭವಾನ್ಭೋಕ್ತುಮರ್ಹತಿ ॥ ೧೬ ॥

ಮುದ್ದುಕಂದ ರಾಮಾ! ನೀನೂ ಬೇಗ ಬಾ. ಯದುಕುಲಕ್ಕೆ ಆನಂದವನ್ನುಂಟು ಮಾಡುವವನೇ! ತಮ್ಮನನ್ನು ಕರೆದುಕೊಂಡು ಬೇಗನೇ ಬಂದುಬಿಡು. ಇಂದು ನೀವು ಬೆಳಿಗ್ಗೆ ಬೇಗ ಊಟಮಾಡಿದ್ದೀರಿ. ಈಗ ನಿಮಗೆ ಹಸಿವಾಗಿರಬಹುದು. ಏನಾದರೂ ತಿಂದುಕೊಳ್ಳಿ. ॥ ೧೬ ॥

ಪ್ರತೀಕ್ಷತೇ ತ್ವಾಂ ದಾಶಾರ್ಹ ಭೋಕ್ಷ್ಯಮಾಣೋ ವ್ರಜಾಧಿಪಃ ।
ಏಹ್ಯಾವಯೋಃ ಪ್ರಿಯಂ ಧೇಹಿ ಸ್ವಗೃಹಾನ್ಯಾತ ಬಾಲಕಾಃ ॥ ೧೭ ॥

ದಾಶಾರ್ಹಕುಲತಿಲಕನೇ! ವ್ರಜರಾಜರಾದ ನಂದಗೋಪರು ಊಟಮಾಡಲು ನಿಮಗಾಗಿ ಕಾಯುತ್ತಿದ್ದಾರೆ. ಬೇಗನೇ ಬಂದು ನಮ್ಮಿಬ್ಬರನ್ನೂ ಸಂತೋಷಪಡಿಸಿರಿ. ಗೋಪಬಾಲಕರೇ! ನೀವೂ ನಿಮ್ಮ-ನಿಮ್ಮ ಮನೆಗಳಿಗೆ ಹೋಗಿರಿ. ॥ ೧೭ ॥

ಧೂಲಿಧೂಸರಿತಾಂಗಸ್ತ್ವಂ ಪುತ್ರ ಮಜ್ಜನಮಾವಹ ।
ಜನ್ಮರ್ಕ್ಷಮದ್ಯ ಭವತೋ ವಿಪ್ರೇಭ್ಯೋ ದೇಹಿ ಗಾಃ ಶುಚಿಃ
॥ ೧೮ ॥

ಪಶ್ಯ ಪಶ್ಯ ವಯಸ್ಯಾಂಸ್ತೇ ಮಾತೃಮೃಷ್ಟಾನ್ಸ್ವಲಂಕೃತಾನ್ ।
ತ್ವಂ ಚ ಸ್ನಾತಃ ಕೃತಾಹಾರೋ ವಿಹರಸ್ವ ಸ್ವಲಂಕೃತಃ
॥ ೧೯ ॥

ಇತ್ಥಂ ಯಶೋದಾ ತಮಶೇಷಶೇಖರಂ
ಮತ್ವಾ ಸುತಂ ಸ್ನೇಹನಿಬದ್ಧಧೀರ್ನೃಪ ।
ಹಸ್ತೇ ಗೃಹೀತ್ವಾ ಸಹರಾಮಮಚ್ಯುತಂ
ನೀತ್ವಾ ಸ್ವವಾಟಂ ಕೃತವತ್ಯಥೋದಯಮ್ ॥ ೨೦ ॥

ಗೋಪವೃದ್ಧಾ ಮಹೋತ್ಪಾತಾನನುಭೂಯ ಬೃಹದ್ವನೇ ।
ನಂದಾದಯಃ ಸಮಾಗಮ್ಯ ವ್ರಜಕಾರ್ಯಮಮಂತ್ರಯನ್
॥ ೨೧ ॥

ತತ್ರೋಪನಂದನಾಮಾಽಽಹ ಗೋಪೋ ಜ್ಞಾನವಯೋಽಧಿಕಃ ।
ದೇಶಕಾಲಾರ್ಥತತ್ತ್ವಜ್ಞಃ ಪ್ರಿಯಕೃದ್ರಾಮಕೃಷ್ಣಯೋಃ
॥ ೨೨ ॥

ಉತ್ಥಾತವ್ಯಮಿತೋಽಸ್ಮಾಭಿರ್ಗೋಕುಲಸ್ಯ ಹಿತೈಷಿಭಿಃ ।
ಆಯಾಂತ್ಯತ್ರ ಮಹೋತ್ಪಾತಾ ಬಾಲಾನಾಂ ನಾಶಹೇತವಃ
॥ ೨೩ ॥

ಮುಕ್ತಃ ಕಥಂಚಿದ್ರಾಕ್ಷಸ್ಯಾ ಬಾಲಘ್ನ್ಯಾ ಬಾಲಕೋ ಹ್ಯಸೌ ।
ಹರೇರನುಗ್ರಹಾನ್ನೂನಮನಶ್ಚೋಪರಿ ನಾಪತತ್
॥ ೨೪ ॥

ಚಕ್ರವಾತೇನ ನೀತೋಽಯಂ ದೈತ್ಯೇನ ವಿಪದಂ ವಿಯತ್ ।
ಶಿಲಾಯಾಂ ಪತಿತಸ್ತತ್ರ ಪರಿತ್ರಾತಃ ಸುರೇಶ್ವರೈಃ
॥ ೨೫ ॥

ಯನ್ನ ಮ್ರಿಯೇತ ದ್ರುಮಯೋರಂತರಂ ಪ್ರಾಪ್ಯ ಬಾಲಕಃ ।
ಅಸಾವನ್ಯತಮೋ ವಾಪಿ ತದಪ್ಯಚ್ಯುತರಕ್ಷಣಮ್
॥ ೨೬ ॥

ಮಗೂ ! ನೋಡಿರಲ್ಲ, ನಿನ್ನ ಮೈಗೆ ಧೂಳೆಲ್ಲ ಮೆತ್ತಿಕೊಂಡಿದೆ. ಬಾ, ಬೇಗನೇ ಸ್ನಾನಮಾಡಿಕೋ. ಇಂದು ನಿನ್ನ ಜನ್ಮ ನಕ್ಷತ್ರವಾಗಿದೆ. ಶುಚಿರ್ಭೂತನಾಗಿ ಬ್ರಾಹ್ಮಣರಿಗೆ ಗೋದಾನವನ್ನು ಮಾಡು. ॥ ೧೮ ॥ ಅದೋ ನಿನ್ನ ಜೊತೆಯವರನ್ನು ನೋಡು. ಅವರೆಲ್ಲರನ್ನು ಅವರ ತಾಯಂದಿರು ಸ್ನಾನಮಾಡಿಸಿ ಒಳ್ಳೆಯ ಅಂದವಾದ ಉಡಿಗೆ ತೊಡಿಗೆಗಳಿಂದ ಶೃಂಗರಿಸಿರುವರು. ಈಗ ನೀನೂ ಸ್ನಾನಮಾಡಿಸಿಕೊಂಡು, ಒಳ್ಳೆಯ ಬಟ್ಟೆಗಳನ್ನು ಧರಿಸಿಕೊಂಡು, ಉಂಡು-ತಿಂದು ಮತ್ತೆ ಆಡುವೆಯಂತೆ. ॥ ೧೯ ॥ ಪರೀಕ್ಷಿತನೇ ! ಯಶೋದೆಯ ಮನ-ಪ್ರಾಣಗಳು ಪುತ್ರಪ್ರೇಮದಿಂದ ಬಂಧಿಸಲ್ಪಟ್ಟಿದ್ದವು. ಅವಳು ಚರಾಚರ ಜಗತ್ತಿನ ಶಿರೋಮಣಿ ಭಗವಂತನನ್ನು ತನ್ನ ಪುತ್ರನೆಂದೇ ತಿಳಿಯುತ್ತಿದ್ದಳು. ಹೀಗೆ ಕರೆದು ಒಂದು ಕೈಯಿಂದ ಬಲರಾಮನನ್ನು, ಇನ್ನೊಂದು ಕೈಯಿಂದ ಕೃಷ್ಣನನ್ನೂ ಹಿಡಿದುಕೊಂಡು ಮನೆಗೆ ನಡೆದಳು. ಬಳಿಕ ಅವರಿಗೆ ಸ್ನಾನಾದಿಗಳನ್ನು ಮಾಡಿಸಿ, ಜನ್ಮೋತ್ಸವಕ್ಕೆ ಸಂಬಂಧಪಟ್ಟ ಮಂಗಳ ಕಾರ್ಯಗಳನ್ನು ಅತ್ಯಂತ ಪ್ರೀತಿಯಿಂದ ನೆರವೇರಿಸಿದಳು. ॥ ೨೦ ॥

ಗೋಕುಲದಲ್ಲಿ ಒಂದಿಲ್ಲೊಂದು ಉತ್ಪಾತಗಳು ನಡೆಯುತ್ತಿರುವುದನ್ನು ನಂದಗೋಪನೇ ಮೊದಲಾದ ವೃದ್ಧರಾದಗೋಪರು ಗಮನಿಸಿದಾಗ, ಅವರೆಲ್ಲರೂ ಸೇರಿ - 'ಈಗ ವ್ರಜವಾಸಿಗಳು ಏನು ಮಾಡಬೇಕು ?' ಎಂದು ಈ ವಿಷಯದ ಕುರಿತು ಯೋಚಿಸ ತೊಡಗಿದರು. ॥ ೨೧ ॥ ಅವರಲ್ಲಿ ಉಪನಂದನೆಂಬ ವಯೋವೃದ್ಧನೂ, ಜ್ಞಾನವೃದ್ಧನೂ ಆದ ಓರ್ವ ಗೋಪನಿದ್ದನು. ಯಾವ ಸಮಯದಲ್ಲಿ ಯಾರೊಂದಿಗೆ ಹೇಗೆ ವ್ಯವಹರಿಸಬೇಕೆಂಬ ಅರಿವು ಅವನಿಗೆ ಚೆನ್ನಾಗಿತ್ತು. ಜೊತೆಗೆ - 'ಬಲರಾಮ-ಕೃಷ್ಣರು ಸುಖವಾಗಿ ಇರಬೇಕು, ಅವರಿಗೆ ಯಾವುದೇ ಆಪತ್ತು ಬರಬಾರದೆಂದು ಬಯಸುತ್ತಿದ್ದನು. ಅವನೆಂದನು - ॥ ೨೨ ॥ ಬಂಧುಗಳೆ ! ನಿಮಗೆ ತಿಳಿದಿರುವಂತೆ ಬಾಲಕರ ವಿನಾಶಕ್ಕೆ ಕಾರಣವಾದ ಉತ್ಪಾತಗಳು ಇಲ್ಲಿ ಆಗಿಂದಾಗ್ಗೆ ನಡೆಯುತ್ತಲೇ ಇವೆ. ಆದುದರಿಂದ ಗೋಕುಲಕ್ಕೂ, ಗೋಪಾಲರಿಗೂ ಹಿತವನ್ನು ಬಯಸುವೆಯಾದರೆ ನಾವು ಇಲ್ಲಿಂದ ಬೇರೆಲ್ಲಿಗಾದರೂ ಹೋಗಬೇಕು. ॥ ೨೩ ॥ ಈ ನಮ್ಮ ನಂದಗೋಪನ ಮಗನಾದ ಶ್ರೀಕೃಷ್ಣನು ಬಾಲಹಂತಕಳಾದ ಪೂತನಾ ರಾಕ್ಷಸಿಯಿಂದ ದೈವವಶಾತ್ ಉಳಿದುಕೊಂಡನು. ಹರಿಯ ಅನುಗ್ರಹದಿಂದಲೇ ಸಾಮಗ್ರಿಗಳು ತುಂಬಿದ್ದ ಗಾಡಿಯು ತಲೆಕೆಳಗಾಗಿ ಬಿದ್ದರೂ ಈ ಬಾಲಕೃಷ್ಣನ ಮೇಲೆ ಬೀಳಲಿಲ್ಲ.॥ ೨೪ ॥ ಸುಂಟರಗಾಳಿಯಾಗಿ ಬಂದ ತೃಣಾವರ್ತನು ಈ ಮುದ್ದು ಕಂದನನ್ನು ಅಂತರಿಕ್ಷಕ್ಕೆ ಹಾರಿಸಿಕೊಂಡು ಹೋಗಿ ಭಾರೀ ವಿಪತ್ತನ್ನೇ ತಂದೊಡ್ಡಿದನು. ಆದರೆ ಆಗಸದಿಂದ ದೈತ್ಯನೊಂದಿಗೆ ಬಂಡೆಯ ಮೇಲೆ ಬಿದ್ದಾಗಲೂ ಸುರೇಶ್ವರನ ಪರಮಾನುಗ್ರಹದಿಂದ ಬಾಲಕನು ಬದುಕುಳಿದನು. ॥ ೨೫ ॥ ಜೋಡೀ ಅತ್ತಿಮರಗಳು ಉರುಳಿದಾಗ ಅವುಗಳ ಮಧ್ಯದಲ್ಲಿಯೇ ಇದ್ದರೂ ಇವನು ಹಾಗೂ ಇತರ ಬಾಲಕರು ಸಾಯಲಿಲ್ಲ, ಆಗಲೂ ಭಗವಾನ್ ಅಚ್ಯುತನೇ ಇವನನ್ನು ರಕ್ಷಿಸಿದನೆಂದೇ ತಿಳಿಯಬೇಕು. ॥ ೨೬ ॥

**ಯಾವದೌತ್ಪಾತಿಕೋಽರಿಷ್ಟೋ ವ್ರಜಂ ನಾಭಿಭವೇದಿತಃ ।**
**ತಾವದ್ಬಾಲಾನುಪಾದಾಯ ಯಾಸ್ಯಾಮೋಽನ್ಯತ್ರ ಸಾನುಗಾಃ ॥ ೨೭ ॥**

**ವನಂ ವೃಂದಾವನಂ ನಾಮ ಪಶವ್ಯಂ ನವಕಾನನಮ್ ।**
**ಗೋಪಗೋಪೀಗವಾಂ ಸೇವ್ಯಂ ಪುಣ್ಯಾದ್ರಿತೃಣವೀರುಧಮ್ ॥ ೨೮ ॥**

**ತತ್ತತ್ರಾದ್ಯೈವ ಯಾಸ್ಯಾಮಃ ಶಕಟಾನ್ಯುಂಕ್ತ ಮಾ ಚಿರಮ್ ।**
**ಗೋಧನಾನ್ಯಗ್ರತೋ ಯಾಂತು ಭವತಾಂ ಯದಿ ರೋಚತೇ ॥ ೨೯ ॥**

**ತಚ್ಛ್ರುತ್ವೈಕಧಿಯೋ ಗೋಪಾಃ ಸಾಧು ಸಾಧ್ವಿತಿ ವಾದಿನಃ ।**
**ವ್ರಜಾನ್ಸ್ವಾನ್ಸ್ವಾನ್ ಸಮಾಯುಜ್ಯ ಯಯೂ ರೂಢಪರಿಚ್ಛದಾಃ ॥ ೩೦ ॥**

**ವೃದ್ಧಾನ್ಬಾಲಾನ್ ಸ್ತ್ರಿಯೋ ರಾಜನ್ಸರ್ವೋಪಕರಣಾನಿ ಚ ।**
**ಅನಸ್ಸ್ವಾರೋಪ್ಯ ಗೋಪಾಲಾ ಯತ್ತಾ ಆತ್ತಶರಾಸನಾಃ ॥ ೩೧ ॥**

**ಗೋಧನಾನಿ ಪುರಸ್ಕೃತ್ಯ ಶೃಂಗಾಣ್ಯಾಪೂರ್ಯ ಸರ್ವತಃ ।**
**ತೂರ್ಯಘೋಷೇಣ ಮಹತಾ ಯಯುಃ ಸಹಪುರೋಹಿತಾಃ ॥ ೩೨ ॥**

**ಗೋಪ್ಯೋ ರೂಢರಥಾ ನೂತ್ನಕುಚಕುಂಕುಮಕಾಂತಯಃ ।**
**ಕೃಷ್ಣಲೀಲಾ ಜಗುಃ ಪ್ರೀತಾ ನಿಷ್ಕಕಂಠ್ಯಃ ಸುವಾಸಸಃ ॥ ೩೩ ॥**

**ತಥಾ ಯಶೋದಾರೋಹಿಣ್ಯಾವೇಕಂ ಶಕಟಮಾಸ್ಥಿತೇ ।**
**ರೇಜತುಃ ಕೃಷ್ಣರಾಮಾಭ್ಯಾಂ ತತ್ಕಥಾಶ್ರವಣೋತ್ಸುಕೇ ॥ ೩೪ ॥**

**ವೃಂದಾವನಂ ಸಂಪ್ರವಿಶ್ಯ ಸರ್ವಕಾಲಸುಖಾವಹಮ್ ।**
**ತತ್ರ ಚಕ್ರುರ್ವ್ರಜಾವಾಸಂ ಶಕಟೈರರ್ಧಚಂದ್ರವತ್ ॥ ೩೫ ॥**

ಅದಕ್ಕಾಗಿ ಯಾವುದೇ ದೊಡ್ಡ ಅನಿಷ್ಟವು ನಮಗೆ ಮತ್ತು ನಮ್ಮ ಈ ವ್ರಜಕ್ಕೆ ಸಂಭವಿಸಿ ನಾಶವಾಗುವ ಮೊದಲೇ ನಾವುಗಳು ನಮ್ಮ ಮಕ್ಕಳನ್ನು ಕರಕೊಂಡು, ಅನುಯಾಯಿಗಳೊಂದಿಗೆ ಬೇರೆಲ್ಲಿಗಾದರೂ ಹೊರಟು ಹೋಗಬೇಕು. ॥ ೨೭ ॥ ನನಗೆ ತಿಳಿದಿರುವಂತೆ ಇಲ್ಲಿ ಸಮೀಪವೇ ವೃಂದಾವನ ಎಂಬ ಹಚ್ಚ ಹಸಿರಾದ ಹುಲ್ಲಿನಿಂದಲೂ, ಲತಾ-ವೃಕ್ಷಗಳಿಂದಲೂ ಕೂಡಿದ ನಿರಂತರ ನಿತ್ಯ-ನೂತನವಾದ ಒಂದು ಕಾಡು ಇದೆ. ಅಲ್ಲೊಂದು ಪವಿತ್ರವಾದ, ದೊಡ್ಡ ಪರ್ವತವೊಂದೂ ಇರುವುದು. ನಮ್ಮ ಪಶುಗಳಿಗಂತೂ ಬಹಳ ಹಿತಕರವಾಗಿದೆ. ಗೋಪ-ಗೋಪಿಯರಿಗೆ ಮತ್ತು ಹಸುಗಳಿಗೆ ಅದು ಕೇವಲ ಅನುಕೂಲದಾಯಕವಷ್ಟೇ ಅಲ್ಲ ಸೇವಿಸಲು ಯೋಗ್ಯವಾದ ಸ್ಥಾನವಾಗಿದೆ. ॥ ೨೮ ॥ ನಾನು ಹೇಳಿದುದು ನಿಮ್ಮೆಲ್ಲರಿಗೆ ಸರಿಯೆಂದು ಕಂಡರೆ ಇಂದೇ ನಾವೆಲ್ಲ ಅಲ್ಲಿಗೆ ಹೊರಟುಬಿಡೋಣ. ತಡಮಾಡದೆ ನಮ್ಮ ಸಂಪತ್ತಾದ ಹಸುಗಳು ಮುಂದಾಗಿ ಹೋಗಲಿ. ಬಂಡಿಗಳನ್ನು ಹೂಡಿ ಬೇಗನೆ ಹೊರಡಿರಿ. ॥ ೨೯ ॥

ಪರೀಕ್ಷಿತನೇ ! ಉಪನಂದನ ಮಾತನ್ನು ಕೇಳುತ್ತಲೇ ಗೋಪಾಲಕರೆಲ್ಲರೂ ಒಂದೇ ಮನಸ್ಸಿನಿಂದ ಒಳ್ಳೆಯದು ತುಂಬಾ ಒಳ್ಳೆಯದು ನೀನು ಹೇಳಿರುವುದು ಸರಿಯಾಗಿದೆ ಎಂದು ದನಿಗೂಡಿಸಿದರು. ಈ ವಿಷಯದಲ್ಲಿ ಯಾರಿಗೂ ಮತಭೇದವಿರಲಿಲ್ಲ. ಎಲ್ಲರೂ ತಮ್ಮ-ತಮ್ಮ ಹಸುಗಳನ್ನು ಒಂದುಗೂಡಿಸಿ ಮುಂದಿಟ್ಟುಕೊಂಡು ಮನೆಯ ಸಾಮಗ್ರಿಗಳನ್ನು ಬಂಡಿಗಳ ಮೇಲೆ ಹೇರಿ ವೃಂದಾವನದ ಕಡೆಗೆ ಹೊರಟರು. ॥ ೩೦ ॥ ಪರೀಕ್ಷಿದ್ರಾಜನೇ ! ಗೋಪಾಲಕರು ಮುದುಕರನ್ನೂ, ಮಕ್ಕಳನ್ನೂ, ಹೆಂಗಸರನ್ನೂ ಗಾಡಿಗಳ ಮೇಲೆ ಕುಳ್ಳಿರಿಸಿಕೊಂಡು ಹಲವಾರು ಬಂಡಿಗಳಲ್ಲಿ ಸಾಮಗ್ರಿಗಳನ್ನು ತುಂಬಿಕೊಂಡು ಧನುರ್ಬಾಣಗಳನ್ನು ಧರಿಸಿಕೊಂಡು ಆ ಗಾಡಿಗಳ ಹಿಂದೆ-ಹಿಂದೆಯೇ ಜಾಗರೂಕತೆಯಿಂದ ಹೋಗುತ್ತಿದ್ದರು. ॥ ೩೧ ॥ ಅವರು ಹಸು-ಕರುಗಳನ್ನು ಮುಂದೆ ಬಿಟ್ಟುಕೊಂಡು ಹಿಂದಿನಿಂದ ಬಾರಿ-ಬಾರಿಗೂ ಕೊಂಬು-ಕಹಳೆಗಳನ್ನು ಜೋರಾಗಿ ಊದುತ್ತಾ, ಪುರೋಹಿತರೊಡನೆ ಗೋಪಾಲಕರು ನಡೆದುಕೊಂಡು ಹೋಗುತ್ತಿದ್ದರು. ॥ ೩೨ ॥ ಗೋಪಿಯರು ಸುಂದರವಾದ ವಸ್ತ್ರಗಳನ್ನು ವಿವಿಧವಾದ ಚಿನ್ನದ ಒಡವೆಗಳನ್ನು ಸಿಂಗರಿಸಿಕೊಂಡು ರಥಗಳಲ್ಲಿ ಕುಳಿತುಕೊಂಡು ಸಾಗುವಾಗ ಭಗವಾನ್ ಶ್ರೀಕೃಷ್ಣನ ಬಾಲ ಲೀಲೆಗಳನ್ನು ಆನಂದವಾಗಿ ಹಾಡುತ್ತಿದ್ದರು. ॥ ೩೩ ॥ ಯಶೋದಾದೇವಿಯೂ, ರೋಹಿಣೀ ಇವರೂ ಅಂದವಾಗಿ ಅಲಂಕರಿಸಿಕೊಂಡು ತಮ್ಮ-ತಮ್ಮ ಕಂದಮ್ಮಗಳಾದ ಬಲರಾಮ, ಶ್ರೀಕೃಷ್ಣರನ್ನು ಎತ್ತಿಕೊಂಡು ಒಂದೇ ಗಾಡಿಯಲ್ಲಿ ಕುಳಿತುಕೊಂಡು ಹೋಗುತ್ತಿದ್ದರು. ಗೊಲ್ಲತಿಯರು ಹಾಡುತ್ತಿದ್ದ ಶ್ರೀಕೃಷ್ಣನ ಪರವಾದ ಗೀತೆಗಳನ್ನು ವಿಶೇಷವಾದ ಉತ್ಸಾಹದಿಂದ ಕೇಳುತ್ತಿದ್ದರು. ॥ ೩೪ ॥ ವೃಂದಾವನವು ಅತ್ಯಂತ ಸುಂದರವಾದ ವನ. ಎಲ್ಲ ಋತುಗಳಲ್ಲೂ ಅಲ್ಲಿ ಸುಖವೇ ಸುಖವು ತುಂಬಿತ್ತು. ವೃಂದಾವನವನ್ನು ಪ್ರವೇಶಿಸಿ ಗೋಪಾಲಕರು ತಮ್ಮ ಚಕ್ಕಡಿಗಳನ್ನು ಅರ್ಧಚಂದ್ರಾಕಾರ ಮಂಡಲವಾಗಿಸಿ ನಿಲ್ಲಿಸಿಕೊಂಡು, ತಮ್ಮ ಹಸು-ಕರುಗಳಿಗೆ ಯೋಗ್ಯವಾದ ಸ್ಥಳವನ್ನು ಕಲ್ಪಿಸಿಕೊಂಡರು. ॥ ೩೫ ॥

ವೃಂದಾವನಂ ಗೋವರ್ಧನಂ ಯಮುನಾಪುಲಿನಾನಿ ಚ ।
ವೀಕ್ಷ್ಯಾಸೀದುತ್ತಮಾ ಪ್ರೀತೀ ರಾಮಮಾಧವಯೋರ್ನೃಪ
॥ ೩೬ ॥

ಏವಂ ವ್ರಜೌಕಸಾಂ ಪ್ರೀತಿಂ ಯಚ್ಛಂತೌ ಬಾಲಚೇಷ್ಟಿತೈಃ ।
ಕಲವಾಕ್ಯೈಃ ಸ್ವಕಾಲೇನ ವತ್ಸಪಾಲೌ ಬಭೂವತುಃ
॥ ೩೭ ॥

ಅವಿದೂರೇ ವ್ರಜಭುವಃ ಸಹ ಗೋಪಾಲದಾರಕೈಃ ।
ಚಾರಯಾಮಾಸತುರ್ವತ್ಸಾನ್ನಾನಾಕ್ರೀಡಾಪರಿಚ್ಛದೌ
॥ ೩೮ ॥

ಕ್ವಚಿದ್ವಾದಯತೋ ವೇಣುಂ ಕ್ಷೇಪಣೈಃ ಕ್ಷಿಪತಃ ಕ್ವಚಿತ್ ।
ಕ್ವಚಿತ್ಪಾದೈಃ ಕಿಂಕಿಣೀಭಿಃ ಕ್ವಚಿತ್ಕೃತ್ರಿಮಗೋವೃಷೈಃ
॥ ೩೯ ॥

ವೃಷಾಯಮಾಣೌ ನರ್ದಂತೌ ಯುಯುಧಾತೇ ಪರಸ್ಪರಮ್ ।
ಅನುಕೃತ್ಯ ರುತೈರ್ಜಂತೂಂಶ್ಚೇರತುಃ ಪ್ರಾಕೃತೌ ಯಥಾ
॥ ೪೦ ॥

ಕದಾಚಿದ್ಯಮುನಾತೀರೇ ವತ್ಸಾಂಶ್ಚಾರಯತೋಃ ಸ್ವಕೈಃ ।
ವಯಸ್ಯೈಃ ಕೃಷ್ಣಬಲಯೋರ್ಜಿಘಾಂಸುರ್ದೈತ್ಯ ಆಗಮತ್
॥ ೪೧ ॥

ತಂ ವತ್ಸರೂಪಿಣಂ ವೀಕ್ಷ್ಯ ವತ್ಸಯೂಥಗತಂ ಹರಿಃ ।
ದರ್ಶಯನ್ಬಲದೇವಾಯ ಶನೈರ್ಮುಗ್ಧ ಇವಾಸದತ್
॥ ೪೨ ॥

ಗೃಹೀತ್ವಾ ಪರಪಾದಾಭ್ಯಾಂ ಸಹಲಾಂಗೂಲಮಚ್ಯುತಃ ।
ಭ್ರಾಮಯಿತ್ವಾ ಕಪಿತ್ಥಾಗ್ರೇ ಪ್ರಾಹಿಣೋದ್ಗತಜೀವಿತಮ್ ।
ಸ ಕಪಿತ್ಥೈರ್ಮಹಾಕಾಯಃ ಪಾತ್ಯಮಾನೈಃ ಪಪಾತ ಹ
॥ ೪೩ ॥

ತಂ ವೀಕ್ಷ್ಯ ವಿಸ್ಮಿತಾ ಬಾಲಾಃ ಶಶಂಸುಃ ಸಾಧು ಸಾಧ್ವಿತಿ ।
ದೇವಾಶ್ಚ ಪರಿಸಂತುಷ್ಟಾ ಬಭೂವುಃ ಪುಷ್ಪವರ್ಷಿಣಃ
॥ ೪೪ ॥

ಪರೀಕ್ಷಿತನೇ ! ವೃಂದಾವನದ ಹಚ್ಚ ಹಸಿರು ವನವನ್ನೂ, ಅತ್ಯಂತ ಮನೋಹರ ಗೋವರ್ಧನ ಪರ್ವತವನ್ನೂ, ಯಮುನಾ ನದಿಯ ತೀರದಲ್ಲಿರುವ ಸುಂದರವಾದ ಮರಳರಾಶಿಗಳನ್ನು ನೋಡಿ ಭಗವಾನ್ ಶ್ರೀಕೃಷ್ಣ ಮತ್ತು ಬಲರಾಮರು ಆನಂದದಿಂದ ಉಬ್ಬಿಹೋದರು. ॥ ೩೬॥

ರಾಮ-ಕೃಷ್ಣರಿಬ್ಬರೂ ತಮ್ಮ ತೊದಲು ಮಾತುಗಳಿಂದ ಹಾಗೂ ಅತ್ಯಂತ ಮಧುರ ಬಾಲಲೀಲೆಗಳಿಂದ ಗೋಕುಲದಂತೆ ವೃಂದಾವನದಲ್ಲಿಯೂ ಗೋಪ-ಗೋಪಿಯರಿಗೆ ಆನಂದವನ್ನು ಉಂಟುಮಾಡುತ್ತಿದ್ದರು. ಕೆಲವೇ ದಿನಗಳಲ್ಲಿ ಅವರೂ ಕರುಗಳನ್ನು ಮೇಯಿಸಲು ತೊಡಗಿದರು. ॥ ೩೭ ॥ ಇತರ ಗೊಲ್ಲಬಾಲಕರೊಂದಿಗೆ ಆಟವಾಡಲು ಬಹಳಷ್ಟು ಸಾಮಗ್ರಿಗಳನ್ನು ಎತ್ತಿಕೊಂಡು ಹೊರಟು, ಹಸುಗಳ ಕೊಟ್ಟಿಗೆಗಳ ಬಳಿಯಲ್ಲೇ ತಮ್ಮ ಕರುಗಳನ್ನು ಮೇಯಿಸುತ್ತಾ ಆಟವಾಡುತ್ತಿದ್ದರು. ಕೆಲವು ವೇಳೆ ರಾಮ-ಕೃಷ್ಣರು ಕೊಳಲನ್ನು ನುಡಿಸುತ್ತಿದ್ದರೆ, ಕೆಲವು ವೇಳೆ ಕವಣೆಗಳಿಂದ ಕಲ್ಲುಗಳನ್ನು ಬೀರುತ್ತಿದ್ದರು. ಕೆಲವೊಮ್ಮೆ ಕಾಲುಗಳಿಗೆ ಗೆಜ್ಜೆಗಳನ್ನು ಕಟ್ಟಿಕೊಂಡು ಕುಣಿಯುತ್ತಿದ್ದರೆ, ಕೆಲವೊಮ್ಮೆ ತಾವೇ ಹಸು ಎತ್ತುಗಳಾಗಿ ಆಟವಾಡುತ್ತಿದ್ದರು. ॥ ೩೯ ॥ ಕೆಲವೊಮ್ಮೆ ಆಟದಲ್ಲಿ ಹೋರಿಗಳಂತೆ ಗುಟುರು ಹಾಕುತ್ತಾ ಪರಸ್ಪರ ಕಾದಾಡುತ್ತಿದ್ದರು. ಕೆಲವೊಮ್ಮೆ ನವಿಲು, ಕೋಗಿಲೆ, ಕೋತಿ, ನರಿ, ನಾಯಿ ಮುಂತಾದ ಪಶು-ಪಕ್ಷಿಗಳ ಧ್ವನಿಗಳನ್ನು ಅಣಕವಾಡುತ್ತಿದ್ದರು. ಹೀಗೆ ಸರ್ವಶಕ್ತನಾದ ಭಗವಂತನು ಸಾಧಾರಣ ಬಾಲಕರಂತೆ ಆಟವಾಡುತ್ತಿದ್ದನು. ॥ ೪೦ ॥

ಹೀಗೆ ಇರುತ್ತಿರಲಾಗಿ ಒಂದು ದಿನ ರಾಮ-ಕೃಷ್ಣರು ತಮ್ಮ ಪ್ರಿಯ ಗೆಳೆಯರೊಂದಿಗೆ ಯಮುನಾತೀರದಲ್ಲಿ ಕರುಗಳನ್ನು ಮೇಯಿಸುತ್ತಿದ್ದಾಗ ಇವರನ್ನು ಸಂಹರಿಸುವ ದುರುದ್ದೇಶದಿಂದ ವತ್ಸಾಸುರನೆಂಬ ದೈತ್ಯನೊಬ್ಬನು ಅಲ್ಲಿಗೆ ಬಂದನು. ॥ ೪೧ ॥ ಅವನು ಕರುವಿನ ರೂಪವನ್ನು ಧರಿಸಿ ಕರುಗಳ ಗುಂಪಿನಲ್ಲಿಯೇ ಸೇರಿಕೊಂಡಿರುವುದನ್ನು ಕಂಡ ಭಗವಂತನು ಕಣ್ಸನ್ನೆಯಿಂದ ಬಲರಾಮನಿಗೆ ತೋರಿಸುತ್ತಾ, ಮೆಲ್ಲ-ಮೆಲ್ಲನೆ ಆ ವತ್ಸಾಸುರನ ಬಳಿಗೆ ಹೋದನು. ಆಗ ದೈತ್ಯನನ್ನು ಗುರುತಿಸದೆ ಆ ಸುಂದರ ಕರುವಿನಲ್ಲಿ ಮುಗ್ಧನಾದವನಂತೆ ಕೃಷ್ಣನು ತೋರಿಸಿಕೊಂಡನು. ॥ ೪೨ ॥ ಭಗವಾನ್ ಶ್ರೀಕೃಷ್ಣನು ಕರುವಾಗಿದ್ದ ಆ ಅಸುರನನ್ನು ಬಾಲದೊಂದಿಗೆ ಹಿಂದಿನ ಕಾಲುಗಳನ್ನು ಹಿಡಿದುಕೊಂಡು ಗರಗರನೆ ತಿರುಗಿಸುತ್ತಾ ಬೇಲದ ಮರಕ್ಕೆ ಅಪ್ಪಳಿಸಿದನು. ಇದರಿಂದ ಆ ದೈತ್ಯನು ಗತಪ್ರಾಣನಾಗಿ ಅನೇಕ ಮರಗಳನ್ನು ಉರುಳಿಸುತ್ತಾ ನೆಲದ ಮೇಲೆ ಸತ್ತುಬಿದ್ದನು. ॥ ೪೩ ॥ ಇದನ್ನು ನೋಡಿದ ಗೊಲ್ಲಬಾಲಕರಿಗೆ ಆಶ್ಚರ್ಯದ ಸೀಮೆಯೇ ಉಳಿಯಲಿಲ್ಲ. ಅವರು ಕೃಷ್ಣ! ಭಲೇ-ಭಲೆ ಎಂದು ಕೂಗುತ್ತಾ ಪ್ರಿಯ ಕೃಷ್ಣನನ್ನು ಹೊಗಳತೊಡಗಿದರು. ದೇವತೆಗಳೂ ಕೂಡ ಅತೀವ ಆನಂದದಿಂದ ಹೂಮಳೆಗರೆದರು. ॥ ೪೪ ॥

ತೌ ವತ್ಸಪಾಲಕೌ ಭೂತ್ವಾ ಸರ್ವಲೋಕೈಕಪಾಲಕೌ ।
ಸಪ್ರಾತರಾಶೋ ಗೋವತ್ಸಾಂಶ್ಚಾರಯಂತೌ ವಿಚೇರತುಃ
॥ ೪೫ ॥

ಸ್ವಂ ಸ್ವಂ ವತ್ಸಕುಲಂ ಸರ್ವೇ ಪಾಯಯಿಷ್ಯಂತ ಏಕದಾ ।
ಗತ್ವಾಜಲಾಶಯಾಭ್ಯಾಶಂ ಪಾಯಯಿತ್ವಾಪಪುರ್ಜಲಮ್
॥ ೪೬ ॥

ತೇ ತತ್ರ ದದೃಶುರ್ಬಾಲಾ ಮಹಾಸತ್ತ್ವಮವಸ್ಥಿತಮ್ ।
ತತ್ರಸುರ್ವಜ್ರನಿರ್ಭಿನ್ನಂ ಗಿರೇಃ ಶೃಂಗಮಿವ ಚ್ಯುತಮ್
॥ ೪೭ ॥

ಸ ವೈ ಬಕೋ ನಾಮ ಮಹಾನಸುರೋ ಬಕರೂಪಧೃಕ್ ।
ಆಗತ್ಯ ಸಹಸಾ ಕೃಷ್ಣಂ ತೀಕ್ಷ್ಣತುಂಡೋಽಗ್ರಸದ್ಬಲೀ
॥ ೪೮ ॥

ಕೃಷ್ಣಂ ಮಹಾಬಕಗ್ರಸ್ತಂ ದೃಷ್ಟ್ವಾ ರಾಮಾದಯೋಽರ್ಭಕಾಃ ।
ಬಭೂವುರಿಂದ್ರಿಯಾಣೀವ ವಿನಾ ಪ್ರಾಣಂ ವಿಚೇತಸಃ
॥ ೪೯ ॥

ತಂ ತಾಲುಮೂಲಂ ಪ್ರದಹಂತಮಗ್ನಿವದ್
ಗೋಪಾಲಸೂನುಂ ಪಿತರಂ ಜಗದ್ಗುರೋಃ ।
ಚಚ್ಛರ್ದ ಸದ್ಯೋಽತಿರುಷಾಕ್ಷತಂ ಬಕ-
ಸ್ತುಂಡೇನ ಹಂತುಂ ಪುನರಭ್ಯಪದ್ಯತ ॥ ೫೦ ॥

ತಮಾಪತಂತಂ ಸ ನಿಗೃಹ್ಯ ತುಂಡಯೋ-
ರ್ದೋರ್ಭ್ಯಾಂ ಬಕಂ ಕಂಸಸಖಂ ಸತಾಂ ಪತಿಃ ।
ಪಶ್ಯತ್ಸು ಬಾಲೇಷು ದದಾರ ಲೀಲಯಾ
ಮುದಾವಹೋ ವೀರಣವದ್ ದಿವೌಕಸಾಮ್ ॥ ೫೧ ॥

ತದಾ ಬಕಾರಿಂ ಸುರಲೋಕವಾಸಿನಃ
ಸಮಾಕಿರನ್ನಂದನಮಲ್ಲಿಕಾದಿಭಿಃ ।
ಸಮೀಡಿರೇ ಚಾನಕಶಂಖಸಂಸ್ತವೈ-
ಸ್ತದ್ವೀಕ್ಷ್ಯ ಗೋಪಾಲಸುತಾ ವಿಸಿಸ್ಮಿರೇ ॥ ೫೨ ॥

ಪರೀಕ್ಷಿತನೇ! ಸಮಸ್ತ ಲೋಕಗಳಿಗೆ ರಕ್ಷಕರಾದ ರಾಮ-ಕೃಷ್ಣರು ವತ್ಸಪಾಲಕರಾಗಿ ಬೆಳಿಗ್ಗೆ ಬೇಗನೇ ಎದ್ದು ಊಟದ ಬುತ್ತಿಯನ್ನು ಕಟ್ಟಿಕೊಂಡು ಕರುಗಳನ್ನು ಮೇಯಿಸುತ್ತಾ ಒಂದು ಕಾಡಿನಿಂದ ಇನ್ನೊಂದು ಕಾಡಿಗೆ ಹೋಗುತ್ತಾ ಸಂಚರಿಸುತ್ತಿದ್ದರು. ॥ ೪೫ ॥ ಹೀಗಿರುತ್ತಾ ಒಂದು ದಿನ ಎಲ್ಲ ಗೊಲ್ಲ ಬಾಲಕರು ತಮ್ಮ ಕರುಗಳ ಗುಂಪುಗಳಿಗೆ ನೀರು ಕುಡಿಸಲು ಜಲಾಶಯದ ತಟಕ್ಕೆ ಕೊಂಡು ಹೋದರು. ಅವರು ಮೊದಲಿಗೆ ಕರುಗಳಿಗೆ ನೀರು ಕುಡಿಸಿ, ತಾವೂ ನೀರು ಕುಡಿದರು. ॥ ೪೬ ॥ ಅಲ್ಲೇ ಒಂದು ಭಾರೀ ದೊಡ್ಡ ಪ್ರಾಣಿಯು ಕುಳಿತಿರುವುದನ್ನು ಗೊಲ್ಲರು ನೋಡಿದರು. ಇಂದ್ರನ ವಜ್ರದಿಂದ ತುಂಡಾದ ಯಾವುದೋ ಬೆಟ್ಟವೇ ಇಲ್ಲಿ ಬಿದ್ದಿದೆಯೋ ಎಂದು ಅನಿಸುತ್ತಿತ್ತು. ॥ ೪೭ ॥ ಗೊಲ್ಲಬಾಲಕರು ಅದನ್ನು ನೋಡಿ ಹೆದರಿ ಹೋದರು. ಅವನು ಬಕನೆಂಬ ಓರ್ವ ಮಹಾ ಅಸುರನಾಗಿದ್ದನು. ಅವನು ಬಕಪಕ್ಷಿಯ ರೂಪವನ್ನು ಧರಿಸಿ ಅಲ್ಲಿಗೆ ಬಂದಿದ್ದನು. ಅದಕ್ಕೆ ಅತೀತೀಕ್ಷ್ಣವಾದ ಕೊಕ್ಕು ಇತ್ತು. ಶ್ರೀಕೃಷ್ಣನನ್ನು ಕಾಣುತ್ತಲೇ ಬಲಿಷ್ಠನಾಗಿದ್ದ ಆ ಅಸುರನು (ಬಕಪಕ್ಷಿಯು) ಚೂಪಾದ ಕೊಕ್ಕಿನಿಂದ ಕೃಷ್ಣನನ್ನು ನುಂಗಿಯೇ ಬಿಟ್ಟನು. ॥ ೪೮ ॥ ಆ ಮಹಾಬಕಪಕ್ಷಿಯು ಶ್ರೀಕೃಷ್ಣನನ್ನು ನುಂಗಿದುದನ್ನು ಕಂಡಾಗ ಬಲರಾಮನೇ ಮುಂತಾದ ಗೋಪಬಾಲಕರು ಪ್ರಾಣಗಳು ಹಾರಿ ಹೋದಾಗ ಉಂಟಾಗುವ ಇಂದ್ರಿಯಗಳ ಸ್ಥಿತಿಯಂತೆ ನಿಶ್ಚೇಷ್ಟಿತರಾದರು. ॥ ೪೯ ॥ ಪರೀಕ್ಷಿತನೇ! ಶ್ರೀಕೃಷ್ಣನು ಲೋಕಪಿತಾಮಹನಾದ ಬ್ರಹ್ಮನಿಗೂ ತಂದೆಯು. ಅವನು ಲೀಲೆಯಿಂದಲೇ ಗೋಪ ಬಾಲಕನಾಗಿದ್ದನು. ಅವನು ಆ ಬಕಾಸುರನ ದವಡೆಯನ್ನು ಸೇರಿದಾಗ ಒಳಗಿನಿಂದಲೇ ಬೆಂಕಿಯಂತೆ ಸುಡಲಾರಂಭಿಸಿದನು. ಆದ್ದರಿಂದ ಆ ದೈತ್ಯನು ಕೃಷ್ಣನಿಗೆ ಯಾವ ಏಟೂ ಕೊಡಲಾರದೆ ಕೂಡಲೇ ಅವನನ್ನು ಉಗುಳಬೇಕಾಯಿತು. ಮತ್ತೆ ಅತ್ಯಂತ ಕ್ರುದ್ಧನಾದ ಆ ದಾನವನು ತನ್ನ ಹರಿತವಾದ ಕೊಕ್ಕಿನಿಂದಲೇ ಕೃಷ್ಣನನ್ನು ಘಾತಿಸಲು ಮುನ್ನುಗ್ಗಿದನು. ॥ ೫೦ ॥ ಭಕ್ತವತ್ಸಲನಾದ ಭಗವಾನ್ ಶ್ರೀಕೃಷ್ಣನು ತನ್ನ ಮೇಲೆ ರಭಸದಿಂದ ಬೀಳುತ್ತಿದ್ದ ಕಂಸನ ಮಿತ್ರನಾದ ಬಕಾಸುರನ ಕೊಕ್ಕನ್ನು ಎರಡೂ ಕೈಗಳಿಂದ ಬಲವಾಗಿ ಹಿಡಿದುಕೊಂಡು, ಗೋಪಬಾಲಕರು ನೋಡುತ್ತಿರುವಂತೆ ನೊಜೆ ಹುಲ್ಲನ್ನು ಅತಿಸುಲಭವಾಗಿ ಸೀಳಿಹಾಕುವಂತೆ ಲೀಲಾಜಾಲವಾಗಿ ಆ ಅಸುರನನ್ನು ಸೀಳಿ ಹಾಕಿದನು. ಇದರಿಂದ ದೇವತೆಗಳಿಗೆ ಬಹಳ ಆನಂದವಾಯಿತು. ॥ ೫೧ ॥ ಸಮಸ್ತ ದೇವತೆಗಳು ಭಗವಾನ್ ಶ್ರೀಕೃಷ್ಣನ ಮೇಲೆ ನಂದನವನದಲ್ಲಿ ಸಿಕ್ಕುವ ಮಲ್ಲಿಗೆ, ಜಾಜಿ, ಪುನ್ನಾಗ, ಪಾರಿಜಾತ ಮುಂತಾದ ಹೂವುಗಳ ಮಳೆಗರೆದರು. ವಿಜಯಸೂಚಕವಾದ ಭೇರಿ-ಮೃದಂಗ, ಶಂಖ ಮೊದಲಾದ ವಾದ್ಯಗಳನ್ನು ಮೊಳಗಿಸಿ, ಸ್ತೋತ್ರಗಳ ಮೂಲಕ ಅವನನ್ನು ಕೊಂಡಾಡತೊಡಗಿದರು. ಇದೆಲ್ಲವನ್ನೂ ನೋಡಿದ ಗೊಲ್ಲಬಾಲಕರೆಲ್ಲರೂ ಆಶ್ಚರ್ಯಚಕಿತರಾದರು. ॥ ೫೨ ॥ ಶ್ರೀಕೃಷ್ಣನು ಬಕಪಕ್ಷಿಯ ಬಾಯಿಂದ ಹೊರಟು ತಮ್ಮ ಬಳಿಗೆ ಬಂದುದನ್ನು ನೋಡಿದಾಗ ಬಲರಾಮನೇ ಮುಂತಾದ ಗೋಪಬಾಲಕರು ಪ್ರಾಣಸಂಚಾರವಾದಾಗ ಇಂದ್ರಿಯಗಳು ಸಚೇತನವಾಗುವಂತೆ ಆನಂದತುಂದಿಲರಾದರು. ಎಲ್ಲರೂ ಭಗವಂತನನ್ನು ಪ್ರತ್ಯೇಕ

ಮುಕ್ತಂ ಬಕಾಸ್ಯಾದುಪಲಭ್ಯ ಬಾಲಕಾ
ರಾಮಾದಯಃ ಪ್ರಾಣಮಿವೈಂದ್ರಿಯೋ ಗಣಃ ।
ಸ್ಥಾನಾಗತಂ ತಂ ಪರಿರಭ್ಯ ನಿರ್ವೃತಾಃ
ಪ್ರಣೀಯ ವತ್ಸಾನ್ವ್ರಜಮೇತ್ಯ ತಜ್ಜಗುಃ ॥ ೫೩ ॥

ಪ್ರತ್ಯೇಕವಾಗಿ ಬಾಚಿತಬ್ಬಿಕೊಂಡರು. ಇದಾದ ಬಳಿಕ ತಮ್ಮ-ತಮ್ಮ ಕರುಗಳನ್ನು ಅಟ್ಟಿಕೊಂಡು ಎಲ್ಲರೂ ವ್ರಜಕ್ಕೆ ಬಂದು, ಅಲ್ಲಿ ಅವರೆಲ್ಲರೂ ಮನೆಯ ಜನರಿಗೆ ಎಲ್ಲ ವೃತ್ತಾಂತವನ್ನು ಅರುಹಿದರು. ॥ ೫೩ ॥

ಶ್ರುತ್ವಾ ತದ್ವಿಸ್ಮಿತಾ ಗೋಪಾ ಗೋಪ್ಯಶ್ಚಾತಿಪ್ರಿಯಾದೃತಾಃ ।
ಪ್ರೇತ್ಯಾಗತಮಿವೌತ್ಸುಕ್ಯಾದೈಕ್ಷಂತ ತೃಷಿತೇಕ್ಷಣಾಃ ॥ ೫೪ ॥

ಪರೀಕ್ಷಿತನೆ! ಬಕಾಸುರನ ವಧೆಯ ಘಟನೆಯನ್ನು ಕೇಳಿ ಎಲ್ಲ ಗೋಪ-ಗೋಪಿಯರು ಆಶ್ಚರ್ಯಚಕಿತರಾದರು. ಮುದ್ದುಕೃಷ್ಣನು ಸಾಕ್ಷಾತ್ ಮೃತ್ಯುವಿನ ಮುಖದಿಂದ ಬದುಕಿ ಬಂದಂತೆ ಅವರಿಗನ್ನಿಸಿತು. ಅವರೆಲ್ಲರೂ ಪ್ರೇಮಾದರಗಳಿಂದಲೂ, ಉತ್ಸುಕತೆಯಿಂದಲೂ ಶ್ರೀಕೃಷ್ಣನನ್ನು ನೋಡತೊಡಗಿದರು. ಅವರಿಗೆ ಆ ಸುಂದರಮೂರ್ತಿಯನ್ನು ಎಷ್ಟು ನೋಡಿದರೂ ತೃಪ್ತಿಯೇ ಆಗುತ್ತಿರಲಿಲ್ಲ. ॥ ೫೪ ॥ ಅವರು ತಮ್ಮ-ತಮ್ಮಲ್ಲೆ ಹೀಗೆ ಮಾತನಾಡಿಕೊಂಡರು ಅಬ್ಬಾ! ಎಂತಹ ಆಶ್ಚರ್ಯದ ಮಾತಿದು? ಈ ಮುದ್ದು ಬಾಲಕನು ಹಲವು ಬಾರಿ ಮೃತ್ಯುಮುಖನಾಗಿದ್ದನು. ಆದರೆ ಇವನಿಗೆ ಅನಿಷ್ಟವನ್ನು ಬಗೆದವರಿಗೇ ಕೇಡಾಯಿತು. ಏಕೆಂದರೆ, ಅವರು ಮೊದಲಿನಿಂದಲೇ ಇತರರಿಗೆ ಅನಿಷ್ಟವನ್ನು ಮಾಡಿದ್ದರು. ॥ ೫೫ ॥ ಇದೆಲ್ಲವೂ ನಡೆದರೂ ಕೂಡ ಆ ಭಯಂಕರ ಅಸುರರು ಇವನನ್ನು ಏನೂ ಮಾಡಲಾರದೆ ಹೋದರು. ಇವನನ್ನು ಕೊಲ್ಲಲೆಂದು ಬರುತ್ತಾರೆ, ಆದರೆ ಬೆಂಕಿಯಿಂದ ಆಕರ್ಷಿತವಾದ ಪತಂಗಗಳು ಬಂದು ಬೆಂಕಿಯಲ್ಲಿ ಬಿದ್ದು ಸಾಯುವಂತೆ ಎಲ್ಲರೂ ಸತ್ತುಹೋಗುತ್ತಾರೆ. ॥ ೫೬ ॥ ಬ್ರಹ್ಮವೇತ್ತರಾದ ಮಹಾತ್ಮರ ವಚನಗಳು ಎಂದೂ ಸುಳ್ಳಾಗುವುದಿಲ್ಲವೆಂಬುದು ದಿಟವೇ ಆಗಿದೆ. ನೋಡಿ! ಮಹಾತ್ಮರಾದ ಗರ್ಗಾಚಾರ್ಯರು ಹೇಳಿದ ಎಲ್ಲ ಮಾತುಗಳೂ ಹಾಗೆಯೇ ನಡೆಯುತ್ತಿವೆಯಲ್ಲ! ॥ ೫೭ ॥ ನಂದಗೋಪನು ಮತ್ತು ಇತರ ಗೋಪರು ಹೀಗೆ ಅತೀವ ಆನಂದದಿಂದ ರಾಮ-ಕೃಷ್ಣರ ವಿಷಯವಾಗಿ ಮಾತನಾಡಿಕೊಳ್ಳುವರು. ಅವರೆಲ್ಲರೂ ಸಂಸಾರದ ದುಃಖ-ಸಂಕಟಗಳು ಅರಿವಿಗೆ ಬಾರದಂತೆ ಭಗವದ್ವಿಷಯದಲ್ಲಿ ತನ್ಮಯರಾಗಿರುತ್ತಿದ್ದರು. ॥ ೫೮ ॥ ಹೀಗೆ ಕೃಷ್ಣ-ಬಲರಾಮರು ಗೊಲ್ಲಬಾಲಕರೊಂದಿಗೆ ಕೆಲವೊಮ್ಮೆ ಕಣ್ಣುಮುಚ್ಚಾಲೆಯಾಡುತ್ತಿದ್ದರೆ, ಕೆಲವೊಮ್ಮೆ ಮರಳಲ್ಲಿ ಸೇತುವೆ ಕಟ್ಟುತ್ತಿದ್ದರು. ಕೆಲವೊಮ್ಮೆ ಮರಕೋತಿ ಆಟವಾಡುತ್ತಿದ್ದರೆ, ಕೆಲವೊಮ್ಮೆ ವಿಚಿತ್ರವಾದ ಆಟಗಳನ್ನಾಡುತ್ತಿದ್ದರು. ಹೀಗೆ ಕುಣಿಯುತ್ತಾ, ಹಾಡುತ್ತಾ, ಆಡುತ್ತಾ ಅವರಿಬ್ಬರೂ ತಮ್ಮ ಬಾಲ್ಯವನ್ನು ವೃಂದಾವನದಲ್ಲಿ ಕಳೆದರು. ॥ ೫೯ ॥

ಅಹೋ ಬತಾಸ್ಯ ಬಾಲಸ್ಯ ಬಹವೋ ಮೃತ್ಯವೋಽಭವನ್ ।
ಅಪ್ಯಾಸೀದ್ವಿಪ್ರಿಯಂ ತೇಷಾಂ ಕೃತಂ ಪೂರ್ವಂ ಯತೋ ಭಯಮ್ ॥ ೫೫ ॥

ಅಥಾಪ್ಯಭಿಭವಂತ್ಯೇನಂ ನೈವ ತೇ ಘೋರದರ್ಶನಾಃ ।
ಜಿಘಾಂಸಯೈನಮಾಸಾದ್ಯ ನಶ್ಯಂತ್ಯಗ್ನೌ ಪತಂಗವತ್ ॥ ೫೬ ॥

ಅಹೋ ಬ್ರಹ್ಮವಿದಾಂ ವಾಚೋ ನಾಸತ್ಯಾಃ ಸಂತಿ ಕರ್ಹಿಚಿತ್ ।
ಗರ್ಗೋ ಯದಾಹ ಭಗವಾನನ್ವಭಾವಿ ತಥೈವ ತತ್ ॥ ೫೭ ॥

ಇತಿ ನಂದಾದಯೋ ಗೋಪಾಃ ಕೃಷ್ಣರಾಮಕಥಾಂ ಮುದಾ ।
ಕುರ್ವಂತೋ ರಮಮಾಣಾಶ್ಚ ನಾವಿಂದನ್ಭವವೇದನಾಮ್ ॥ ೫೮ ॥

ಏವಂ ವಿಹಾರೈಃ ಕೌಮಾರೈಃ ಕೌಮಾರಂ ಜಹತುರ್ವ್ರಜೇ ।
ನಿಲಾಯನೈಃ ಸೇತುಬಂಧೈರ್ಮರ್ಕಟೋತ್ಪ್ಲವನಾದಿಭಿಃ ॥ ೫೯ ॥

ಹನ್ನೊಂದನೆಯ ಅಧ್ಯಾಯವು ಮುಗಿಯಿತು. ॥ ೧೧ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ವತ್ಸ-ಬಕವಧೋ ನಾಮೈಕಾದಶೋಽಧ್ಯಾಯಃ ॥ ೧೧ ॥

# ಹನ್ನೆರಡನೆಯ ಅಧ್ಯಾಯ

## ಅಘಾಸುರನ ಉದ್ಧಾರ

ಶ್ರೀಶುಕ ಉವಾಚ

ಕ್ವಚಿದ್ವನಾಶಾಯ ಮನೋ ದಧದ್ವ್ರಜಾತ್-
ಪ್ರಾತಃ ಸಮುತ್ಥಾಯ ವಯಸ್ಯವತ್ಸಪಾನ್ ।
ಪ್ರಬೋಧಯನ್ ಶೃಂಗರವೇಣ ಚಾರುಣಾ
ವಿನಿರ್ಗತೋ ವತ್ಸಪುರಃಸರೋ ಹರಿಃ ॥ ೧ ॥

ತೇನೈವ ಸಾಕಂ ಪೃಥುಕಾಃ ಸಹಸ್ರಶಃ
ಸ್ನಿಗ್ಧಾಃ ಸುಶಿಗ್ವೇತ್ರವಿಷಾಣವೇಣವಃ ।
ಸ್ವಾನ್ಸ್ವಾನ್ಸಹಸ್ರೋಪರಿಸಂಖ್ಯಯಾನ್ವಿತಾ-
ನ್ವತ್ಸಾನ್ಪುರಸ್ಕೃತ್ಯ ವಿನಿರ್ಯಯುರ್ಮುದಾ ॥ ೨ ॥

ಕೃಷ್ಣವತ್ಸೈರಸಂಖ್ಯಾತೈರ್ಯೂಥೀಕೃತ್ಯ ಸ್ವವತ್ಸಕಾನ್ ।
ಚಾರಯಂತೋಽರ್ಭಲೀಲಾಭಿರ್ವಿಜಹ್ರುಸ್ತತ್ರ ತತ್ರ ಹ ॥ ೩ ॥

ಫಲಪ್ರವಾಲಸ್ತಬಕಸುಮನಃಪಿಚ್ಛಧಾತುಭಿಃ ।
ಕಾಚಗುಂಜಾಮಣಿಸ್ವರ್ಣಭೂಷಿತಾ ಅಪ್ಯಭೂಷಯನ್ ॥ ೪ ॥

ಮುಷ್ಣಂತೋಽನ್ಯೋನ್ಯಶಿಕ್ಯಾದೀನ್ ಜ್ಞಾತಾನಾರಾಚ್ಚ ಚಿಕ್ಷಿಪುಃ ।
ತತ್ರತ್ಯಾಶ್ಚ ಪುನರ್ದೂರಾದ್ಧಸಂತಶ್ಚ ಪುನರ್ದದುಃ ॥ ೫ ॥

ಯದಿ ದೂರಂ ಗತಃ ಕೃಷ್ಣೋ ವನಶೋಭೇಕ್ಷಣಾಯ ತಮ್ ।
ಅಹಂ ಪೂರ್ವಮಹಂ ಪೂರ್ವಮಿತಿ ಸಂಸ್ಪೃಶ್ಯ ರೇಮಿರೇ ॥ ೬ ॥

ಕೇಚಿದ್ವೇಣೂನ್ವಾದಯಂತೋ ಧ್ಮಾಂತಃ ಶೃಂಗಾಣಿ ಕೇಚನ ।
ಕೇಚಿದ್ಭೃಂಗೈಃ ಪ್ರಗಾಯಂತಃ ಕೂಜಂತಃ ಕೋಕಿಲೈಃ ಪರೇ ॥ ೭ ॥

ವಿಚ್ಛಾಯಾಭಿಃ ಪ್ರಧಾವಂತೋ ಗಚ್ಛಂತಃ ಸಾಧು ಹಂಸಕೈಃ ।
ಬಕೈರುಪವಿಶಂತಶ್ಚ ನೃತ್ಯಂತಶ್ಚ ಕಲಾಪಿಭಿಃ ॥ ೮ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** – ಎಲೈ ಪರೀಕ್ಷಿತನೇ! ಒಂದು ದಿನ ಶ್ರೀಹರಿಗೆ ವನಭೋಜನವನ್ನು ಮಾಡಲು ಮನಸ್ಸು ಆಯಿತು. ಅವನು ಬೆಳಗಾದೊಡನೆಯೇ ಎದ್ದು ಸುಮಧುರವಾಗಿ ಕೊಂಬನ್ನು ಊದಿ ಗೋಪಬಾಲಕರನ್ನೂ ಎಚ್ಚರಗೊಳಿಸಿ, ಕರುಗಳನ್ನು ಮುಂದೆ ಮಾಡಿಕೊಂಡು ಬಾಲಗೋಪಾಲನು ಗೊಲ್ಲರ ಹಳ್ಳಿಯಿಂದ ಹೊರಟನು. ॥ ೧ ॥ ಶ್ರೀಕೃಷ್ಣನೊಂದಿಗೆ ಅವನ ಸ್ನೇಹಪರರಾದ ಸಾವಿರಾರು ಗೊಲ್ಲಬಾಲಕರು ಕರುಗಳ ಮಂದೆಯನ್ನು ಮುಂದೆಮಾಡಿ ಕೊಂಡು ಆನಂದಭರಿತರಾಗಿ ಸುಂದರವಾದ ನೆಲವು, ಕೋಲು, ಕೊಂಬು, ಕೊಳಲು ಇವುಗಳನ್ನು ಎತ್ತಿಕೊಂಡು ತಮ್ಮ-ತಮ್ಮ ಮನೆಗಳಿಂದ ಹೊರಟರು. ॥ ೨ ॥ ಅವರು ಶ್ರೀಕೃಷ್ಣನ ಅಸಂಖ್ಯ ಕರುಗಳೊಂದಿಗೆ ತಮ್ಮ-ತಮ್ಮ ಕರುಗಳನ್ನು ಒಂದಾಗಿಸಿ ಬಿಟ್ಟರು. ಅಲ್ಲಲ್ಲಿಯೇ ನಿಂತು ಬಾಲಯೋಗ್ಯವಾದ ಆಟಗಳನ್ನಾಡುತ್ತಾ ಸಂಚರಿಸತೊಡಗಿದರು. ॥ ೩ ॥ ಗೋಪಬಾಲಕರೆಲ್ಲರೂ ಗಾಜಿನ ಮಣಿಗಳಿಂದಲೂ, ಚಿನ್ನದ ವಂಕಿಗಳಿಂದಲೂ, ಗುಲುಗುಂಜಿಯ ಸರಗಳಿಂದಲೂ ಸಿಂಗರಿಸಿಕೊಂಡಿದ್ದರೂ ಅವರು ವೃಂದಾವನದ ಕಾಡಿಗೆ ಬರುತ್ತಲೇ ಕೆಂಪು, ಹಳದಿ, ಹಸಿರು ಹಣ್ಣುಗಳಿಂದಲೂ, ಚಿಗುರುಗಳಿಂದಲೂ, ಹೂವುಗಳಿಂದಲೂ ನವಿಲು ಗರಿಗಳಿಂದಲೂ, ಗೈರಿಕಾದಿ ಧಾತುಗಳಿಂದಲೂ ಇನ್ನೂ ಹೆಚ್ಚಾಗಿ ಸಿಂಗರಿಸಿಕೊಂಡು ಕುಣಿದಾಡಿದರು. ॥ ೪ ॥ ಕೆಲವರು ಯಾರದೋ ಬುತ್ತಿಯನ್ನು ಹಾರಿಸಿದರೆ, ಇನ್ನೊಬ್ಬನು ಬೆತ್ತವನ್ನು ಕದಿಯುತ್ತಿದ್ದನು. ಮತ್ತೊಬ್ಬನು ಕೊಳಲನ್ನು, ಕಳಕೊಂಡವನಿಗೆ ಕದ್ದವನು ಯಾರೆಂದು ತಿಳಿದು ಪಡೆಯಲು ಬಂದಾಗ ಇನ್ನೊಬ್ಬನ ಬಳಿಗೆ ಎಸೆದುಬಿಡುತ್ತಿದ್ದರು. ಇನ್ನೊಬ್ಬನು ಮತ್ತೊಬ್ಬನ ಬಳಿಗೆ ಹೀಗೆ ಎಸೆಯುತ್ತಾ ಕೊನೆಗೆ ಅವನಿಗೆ ಮರಳಿಸಿ ಕೇಕೆ ಹಾಕಿ ನಗುತ್ತಿದ್ದರು. ॥ ೫ ॥ ಶ್ಯಾಮಸುಂದರ ಶ್ರೀಕೃಷ್ಣನು ವನದಶೋಭೆಯನ್ನು ನೋಡುತ್ತಾ ದೂರ ಹೋಗಿಬಿಟ್ಟರೆ, ನಾನು ಮೊದಲು ಹೋಗಿ ಮುಟ್ಟುವೆನು, ನಾನು ಮೊದಲು ಎಂಬ ಸ್ಪರ್ಧೆಯಿಂದ ಎಲ್ಲರೂ ಓಡಿ ಹೋಗಿ ಅವನನ್ನು ಮುಟ್ಟಿ-ಮುಟ್ಟಿ ಸಂತೋಷಪಡುತ್ತಿದ್ದರು. ॥ ೬ ॥ ಕೆಲವರು ಕೊಳಲನ್ನು ಊದುತ್ತಿದ್ದರೆ, ಕೆಲವರು ಕೊಂಬನ್ನು ಊದುತ್ತಿದ್ದರು. ಕೆಲ-ಕೆಲವರು ದುಂಬಿಗಳೊಡನೆ ತಾವೂ ಧ್ವನಿ ಮಾಡುತ್ತಿದ್ದರೆ, ಕೆಲವರು ಕೋಗಿಲೆಯ ಧ್ವನಿಯೊಂದಿಗೆ ತಮ್ಮ ಧ್ವನಿಯನ್ನು ಸೇರಿಸಿ ಅದರಂತೆ ಕೂಗುತ್ತಿದ್ದರು. ॥ ೭ ॥ ಒಂದು ಕಡೆ ಕೆಲವು ಗೊಲ್ಲಬಾಲಕರು ಆಕಾಶದಲ್ಲಿ ಹಾರುತ್ತಿದ್ದ ಪಕ್ಷಿಗಳ ನೆರಳಿನೊಂದಿಗೆ ಓಡತೊಡಗಿದರೆ, ಮತ್ತೊಂದೆಡೆಯಲ್ಲಿ ಕೆಲವರು ಹಂಸದ ನಡೆಯನ್ನು ಅಣಕ ಮಾಡುತ್ತಿದ್ದರು. ಕೆಲವರು ಬಕಪಕ್ಷಿಗಳ ಬಳಿಯಲ್ಲಿ ಕುಳಿತು, ಅವುಗಳಂತೆ ಕಣ್ಣು ಮುಚ್ಚಿಕೊಳ್ಳುತ್ತಿದ್ದರು. ಕೆಲವರು ನವಿಲುಗಳ ಕುಣಿತನ್ನು ನೋಡಿ ತಾವೂ ಅವುಗಳಂತೆ ಕುಣಿಯುತ್ತಿದ್ದರು. ॥ ೮ ॥

ವಿಕರ್ಷಂತಃ ಕೀಶಬಾಲಾನಾರೋಹಂತಶ್ಚ ತೈರ್ದ್ರುಮಾನ್ ।
ವಿಕುರ್ವಂತಶ್ಚ ತೈಃ ಸಾಕಂ ಪ್ಲವಂತಶ್ಚ ಪಲಾಶಿಷು ॥ ೯ ॥

ಕೆಲವರು ಕೋತಿಗಳ ಬಾಲಗಳನ್ನು ಹಿಡಿದು ಎಳೆಯುತ್ತಿದ್ದರೆ, ಇತರರು ಅವುಗಳೊಂದಿಗೆ ಈ ಮರದಿಂದ ಆ ಮರದ ಮೇಲೆ ಹತ್ತುತ್ತಿದ್ದರು. ಕೆಲವರು ಅವುಗಳ ಜೊತೆಯಲ್ಲೇ ಕುಳಿತು ಅವುಗಳಂತೇ ಚೇಷ್ಟೆ ಮಾಡುತ್ತಿದ್ದರೆ, ಕೆಲವರು ಅವುಗಳಂತೆ ಒಂದು ಕೊಂಬೆಯಿಂದ ಇನ್ನೊಂದು ಕೊಂಬೆಗೆ ನೆಗೆಯುತ್ತಿದ್ದರು. ॥ ೯ ॥

ಸಾಕಂ ಭೇಕೈರ್ವಿಲಂಘಂತಃ ಸರಿತ್ಸ್ರವಸಂಪ್ಲುತಾಃ ।
ವಿಹಸಂತಃ ಪ್ರತಿಚ್ಛಾಯಾಃ ಶಪಂತಶ್ಚ ಪ್ರತಿಸ್ವನಾನ್ ॥ ೧೦ ॥

ಕೆಲವರು ನದಿಯ ನೀರಿನಲ್ಲಿಳಿದು ತೊಳಚಾಡುತ್ತಾ ಆಟವಾಡುತ್ತಿದ್ದರು. ಕೆಲವರು ಕಪ್ಪೆಗಳೊಂದಿಗೆ ತಾವು ಪಟಗುಟ್ಟುತ್ತಾ ಕುಪ್ಪಳಿಸುತ್ತಿದ್ದರು. ಕೆಲವರು ನೀರಿನಲ್ಲೇ ತಮ್ಮ ಪ್ರತಿಬಿಂಬವನ್ನು ನೋಡಿ ಹಾಸ್ಯವಾಡುತ್ತಿದ್ದರು. ಬೇರೆ ಕೆಲವರು ತಮ್ಮ ಪ್ರತಿಧ್ವನಿಯನ್ನೇ ಕೇಳಿಸಿಕೊಂಡು ನಾನಾ ರೀತಿಯಿಂದ ಮಾತನಾಡುತ್ತಾ ಆನಂದಿಸುತ್ತಿದ್ದರು. ॥ ೧೦ ॥

ಇತ್ಥಂ ಸತಾಂ ಬ್ರಹ್ಮಸುಖಾನುಭೂತ್ಯಾ
ದಾಸ್ಯಂ ಗತಾನಾಂ ಪರದೈವತೇನ ।
ಮಾಯಾಶ್ರಿತಾನಾಂ ನರದಾರಕೇಣ
ಸಾಕಂ ವಿಜಹ್ರುಃ ಕೃತಪುಣ್ಯಪುಂಜಾಃ ॥ ೧೧ ॥

ಪರೀಕ್ಷಿತನೇ ! ಹೀಗೆ ಸತ್ಪುರುಷರಿಗೆ (ಜ್ಞಾನಿಗಳಿಗೆ) ಬ್ರಹ್ಮ ಆನಂದಾನುಭವರೂಪನಾಗಿದ್ದ, ದಾಸ್ಯಭಾವದಿಂದ ಆರಾಧಿಸುವ ಭಕ್ತರಿಗೆ ಪರದೇವತೆಯಾಗಿದ್ದ ಮಾಯಾಮೋಹಿತ ವಿಷಯಾಂಧರಿಗೆ ಸಾಧಾರಣ ಮಾನವ ಬಾಲಕನಾಗಿದ್ದ ಭಗವಾನ್ ಶ್ರೀಕೃಷ್ಣನೊಡನೆ ಅತ್ಯಂತ ಪುಣ್ಯಶಾಲಿಗಳಾದ ಗೊಲ್ಲ ಬಾಲಕರು ನಾನಾ ವಿಧವಾದ ಆಟ-ಪಾಟಗಳನ್ನು ಆಡುತ್ತಿದ್ದರು. ॥ ೧೧ ॥

ಯತ್ಪಾದಪಾಂಸುರ್ಬಹುಜನ್ಮಕೃಚ್ಛ್ರತೋ
ಧೃತಾತ್ಮಭಿರ್ಯೋಗಿಭಿರಪ್ಯಲಭ್ಯಃ ।
ಸ ಏವ ಯದ್ದೃಗ್ವಿಷಯಃ ಸ್ವಯಂ ಸ್ಥಿತಃ
ಕಿಂ ವರ್ಣ್ಯತೇ ದಿಷ್ಟಮತೋ ವ್ರಜೌಕಸಾಮ್ ॥ ೧೨ ॥

ಭಗವಂತನಾದ ಶ್ರೀಕೃಷ್ಣನ ಪಾದಧೂಳಿಯು ಸಾಮಾನ್ಯವಾದುದಲ್ಲ. ಹಲವಾರು ಜನ್ಮಗಳು ಬಹಳ ಕಷ್ಟಪಟ್ಟು ತಪಸ್ಸು ಮಾಡಿದ ಜಿತೇಂದ್ರಿಯರಾದ ಮಹಾಯೋಗಿಗಳಿಗೂ ಅದು ಅಲಭ್ಯವಾದುದು. ಹೀಗಿರುವಾಗ ಅಂತಹ ಭಗವಂತನು ವ್ರಜವಾಸಿಗಳಾದ ಗೋಪಾಲಕರ ಸಮಕ್ಷಮದಲ್ಲಿ ಇದ್ದು ಅವರೊಡನೆ ಆಟವಾಡುತ್ತಿದ್ದನೆಂದರೆ ಅವರ ಪರಮ ಸೌಭಾಗ್ಯವನ್ನು ಏನೆಂದು ವರ್ಣಿಸೋಣ ! ॥ ೧೨ ॥

ಅಥಾಘನಾಮಾಭ್ಯಪತನ್ಮಹಾಸುರ-
ಸ್ತೇಷಾಂ ಸುಖಕ್ರೀಡನವೀಕ್ಷಣಾಕ್ಷಮಃ ।
ನಿತ್ಯಂ ಯದಂತರ್ನಿಜಜೀವಿತೇಪ್ಸುಭಿಃ
ಪೀತಾಮೃತೈರಪ್ಯಮರೈಃ ಪ್ರತೀಕ್ಷ್ಯತೇ ॥ ೧೩ ॥

ಪರೀಕ್ಷಿತರಾಜನೇ ! ಆ ಸಮಯಕ್ಕೆ ಸರಿಯಾಗಿ ಅಘಾಸುರ ನೆಂಬ ರಾಕ್ಷಸನು ಅಲ್ಲಿಗೆ ಬಂದನು. ಗೋಪಬಾಲಕರು ಶ್ರೀಕೃಷ್ಣ ನೊಡನೆ ಆಟವಾಡುತ್ತಾ ಸಂತೋಷವಾಗಿರುವುದನ್ನು ಅವನಿಂದ ನೋಡಲಾಗಲಿಲ್ಲ. ಅವನು ಮಹಾಕ್ರೂರಿಯಾಗಿದ್ದನು. ಅಮೃತಪಾನ ಮಾಡಿ ಅಮರರಾದ ದೇವತೆಗಳೂ ಕೂಡ ಅವನ ಸಾವನ್ನು ಅನುದಿನವೂ ಪ್ರತೀಕ್ಷಿಸುತ್ತಲೇ ಇದ್ದರು. ॥ ೧೩ ॥

ದೃಷ್ಟ್ವಾರ್ಭಕಾನ್ಕೃಷ್ಣಮುಖಾನಘಾಸುರಃ
ಕಂಸಾನುಶಿಷ್ಟಃ ಸ ಬಕೀಬಕಾನುಜಃ ।
ಅಯಂ ತು ಮೇ ಸೋದರನಾಶಕೃತ್ತಯೋ-
ರ್ದ್ವಯೋರ್ಮಮೈನಂ ಸಬಲಂ ಹನಿಷ್ಯೇ ॥ ೧೪ ॥

ಅಘಾಸುರನು ಪೂತನೆಯ ಮತ್ತು ಬಕಾಸುರನ ತಮ್ಮನಾಗಿದ್ದು, ಕಂಸನಿಂದ ಕಳುಹಲ್ಪಟ್ಟವನಾಗಿದ್ದನು. ಶ್ರೀಕೃಷ್ಣನನ್ನು ಗೋಪ ಬಾಲಕರ ಸಹಿತ ವಾಗಿ ಸಂಹರಿಸಿ, ಈ ಮೂಲಕ ಕಂಸರಾಜನ ಆಶಯವನ್ನು ಈಡೇರಿಸಿಕೊಡಲು ನಿಶ್ಚಯಿಸಿದನು. ॥ ೧೪ ॥ ಶ್ರೀಕೃಷ್ಣಪ್ರಮುಖರಾದ ಈ ಗೋಪಬಾಲಕರೆಲ್ಲರನ್ನು ಸಂಹರಿಸಿ ನನ್ನ ಅಕ್ಕನಿಗೂ, ಅಣ್ಣನಿಗೂ ಜಲತರ್ಪಣವನ್ನು ಕೊಡುತ್ತೇನೆ. ಕೃಷ್ಣಾದಿಗಳು ಅವಸಾನ ಹೊಂದಿದೊಡನೆ ವ್ರಜವಾಸಿಗಳೆಲ್ಲರೂ ತಮಗೆ ತಾವೇ ಸತ್ತು ಹೋಗುತ್ತಾರೆ. ಅವರನ್ನು ಸಂಹರಿಸುವ ಶ್ರಮವೇನೂ ಆಗಲಾರದು. ಏಕೆಂದರೆ, ಸಂತಾನವೆಂಬುದೇ ಪ್ರಾಣಿಗಳ ಪ್ರಾಣವಾಗಿದೆ. ಪ್ರಾಣಸ್ವರೂಪವಾದ ಸಂತಾನವೇ ವಿನಾಶ ಹೊಂದಿದ ಬಳಿಕ ಕೇವಲ ದೇಹವು ಹೇಗೆ ತಾನೇ ಉಳಿದೀತು ? ಆದುದರಿಂದ ಈ ಮಕ್ಕಳ ವಿನಾಶದಿಂದ ವ್ರಜವಾಸಿಗಳೆಲ್ಲರೂ ತಾನಾಗಿ ಸತ್ತು ಹೋಗುವರು. ॥ ೧೫ ॥

ಏತೇ ಯದಾ ಮತ್ಸುಹೃದೋಸ್ತಿಲಾಪಃ
ಕೃತಾಸ್ತದಾ ನಷ್ಟಸಮಾ ವ್ರಜೌಕಸಃ ।
ಪ್ರಾಣೇ ಗತೇ ವರ್ಷ್ಮಸು ಕಾ ನು ಚಿಂತಾ
ಪ್ರಜಾಸವಃ ಪ್ರಾಣಭೃತೋ ಹಿ ಯೇ ತೇ ॥ ೧೫ ॥

ಇತಿ ವ್ಯವಸ್ಯಾಜಗರಂ ಬೃಹದ್ವಪುಃ
ಸ ಯೋಜನಾಯಾಮಮಹಾದ್ರಿಪೀವರಮ್ ।
ಧೃತ್ವಾದ್ಭುತಂ ವ್ಯಾತ್ತಗುಹಾನನಂ ತದಾ
ಪಥಿ ವ್ಯಶೇತ ಗ್ರಸನಾಶಯಾ ಖಲಃ ॥ ೧೬ ॥

ಧರಾಧರೋಷ್ಠೋ ಜಲದೋತ್ತರೋಷ್ಠೋ
ದರ್ಯಾನನಾಂತೋ ಗಿರಿಶೃಂಗದಂಷ್ಟ್ರಃ ।
ಧ್ವಾಂತಾಂತರಾಸ್ಯೋ ವಿತತಾಧ್ವಜಿಹ್ವಃ
ಪರುಷಾನಿಲಶ್ವಾಸದವೇಕ್ಷಣೋಷ್ಣಃ ॥ ೧೭ ॥

ದೃಷ್ಟ್ವಾ ತಂ ತಾದೃಶಂ ಸರ್ವೇ ಮತ್ವಾ ವೃಂದಾವನಶ್ರಿಯಮ್ ।
ವ್ಯಾತ್ತಾಜಗರತುಂಡೇನ ಹ್ಯುತ್ಪ್ರೇಕ್ಷಂತೇ ಸ್ಮ ಲೀಲಯಾ
॥ ೧೮ ॥

ಅಹೋ ಮಿತ್ರಾಣಿ ಗದತ ಸತ್ತ್ವಕೂಟಂ ಪುರಃಸ್ಥಿತಮ್ ।
ಅಸ್ಮತ್ಸಂಗ್ರಸನವ್ಯಾತ್ತವ್ಯಾಲತುಂಡಾಯತೇ ನ ವಾ
॥ ೧೯ ॥

ಸತ್ಯಮರ್ಕಕರಾರಕ್ತಮುತ್ತರಾಹನುವದ್ಘನಮ್ ।
ಅಧರಾಹನುವದ್ರೋಧಸ್ತತ್ಪ್ರತಿಚ್ಛಾಯಯಾರುಣಮ್
॥ ೨೦ ॥

ಪ್ರತಿಸ್ಪರ್ಧೇತೇ ಸೃಕ್ಕಿಭ್ಯಾಂ ಸವ್ಯಾಸವ್ಯೇ ನಗೋದರೇ ।
ತುಂಗಶೃಂಗಾಲಯೋಽಪ್ಯೇತಾಸ್ತದ್ದಂಷ್ಟ್ರಾಭಿಶ್ಚ ಪಶ್ಯತ
॥ ೨೧ ॥

ಆಸ್ತೃತಾಯಾಮಮಾರ್ಗೋಽಯಂ ರಸನಾಂ ಪ್ರತಿಗರ್ಜತಿ ।
ಏಷಾಮಂತರ್ಗತಂ ಧ್ವಾಂತಮೇತದಪ್ಯಂತರಾನನಮ್
॥ ೨೨ ॥

ದಾವೋಷ್ಣಖರವಾತೋಽಯಂ ಶ್ವಾಸವದ್ಭಾತಿ ಪಶ್ಯತ ।
ತದ್ದಗ್ಧಸತ್ತ್ವದುರ್ಗಂಧೋಽಪ್ಯಂತರಾಮಿಷಗಂಧವತ್
॥ ೨೩ ॥

ಹೀಗೆ ನಿಶ್ಚಯಿಸಿ ಆ ದುಷ್ಟ ಅಘಾಸುರನು ಹೆಬ್ಬಾವಿನ ರೂಪವನ್ನು ಧರಿಸಿ ದಾರಿಯಲ್ಲಿ ಮಲಗಿದನು. ಆ ಹೆಬ್ಬಾವಿನ ಶರೀರವು ಒಂದು ಯೋಜನದಷ್ಟು ಉದ್ದವೂ, ಪರ್ವತದಷ್ಟು ಎತ್ತರವಾಗಿಯೂ ಮತ್ತು ದಪ್ಪವಾಗಿಯೂ ಅದ್ಭುತವಾಗಿಯೂ ಇತ್ತು. ಕೃಷ್ಣನ ಸಹಿತ ಗೋಪಬಾಲಕರೆಲ್ಲರನ್ನು ನುಂಗಿಹಾಕುವುದೇ ಅವನ ಆಶಯವಾಗಿತ್ತು. ಆದುದರಿಂದ ಅಘಾಸುರನು ತನ್ನ ಬಾಯನ್ನು ದೊಡ್ಡದಾದ ಗುಹೆಯಂತೆ ತೆರೆದುಕೊಂಡು ಬಿದ್ದಿದ್ದನು. ॥ ೧೬ ॥ ಅವನ ಕೆಳದುಟಿಯು ಭೂಮಿಗೆ ತಾಗಿದ್ದರೆ, ಮೇಲ್ದುಟಿಯು ಆಕಾಶಕ್ಕೆ ಮುಟ್ಟಿತ್ತು. ದವಡೆಗಳು ಗವಿಗಳಂತಿದ್ದು, ಕೋರೆದಾಡೆಗಳು ಪರ್ವತದ ಶಿಖರಗಳಂತಿದ್ದವು. ಬಾಯೊಳಗೆ ಗಾಢಾಂಧಕಾರವು ಕವಿದಿತ್ತು. ನೀಳವಾದ ನಾಲಿಗೆಯು ಒಂದು ಅಗಲವಾದ ಕೆಂಪಾದ ರಾಜಬೀದಿಯಂತೆ ಕಂಗೊಳಿಸುತ್ತಿತ್ತು. ಸುಂಟರಗಾಳಿಯಂತೆ ಅದರ ಶ್ವಾಸ-ನಿಃಶ್ವಾಸವಿತ್ತು. ಅದರ ಕಣ್ಣುಗಳು ದಾವಾಗ್ನಿಯಂತೆ ಪ್ರಜ್ವಲಿಸುತ್ತಿತ್ತು. ॥ ೧೭ ॥

ಅಘಾಸುರನ ಇಂತಹ ಪರಮಾದ್ಭುತವಾದ ರೂಪವನ್ನು ನೋಡಿ ಇದೂ ಒಂದು ವೃಂದಾವನದ ಶೋಭೆಯನ್ನು ಹೆಚ್ಚಿಸುವ ವಸ್ತುವೆಂದು ಬಾಲಕರು ಭಾವಿಸಿದರು. ಅವರು ಅದನ್ನು ಕುತೂಹಲದಿಂದ ಆಟವಾಡುತ್ತಾ ಪರೀಕ್ಷಿಸತೊಡಗಿದರು. ಒಬ್ಬನು ಉತ್ಪ್ರೇಕ್ಷೆಮಾಡುತ್ತಾ ಹೇಳಿದನು – ಅಗಲವಾಗಿ ಬಾಯ್ತೆರೆದು ಕೊಂಡಿರುವ ಇದು ಹೆಬ್ಬಾವು ಇರಬಹುದು. ॥ ೧೮ ॥ ಮತ್ತೊಬ್ಬ ಹೇಳಿದನು – ಮಿತ್ರರೇ ! ಇದೊಂದು ಮಹಾಪ್ರಾಣಿಯೇ ಆಗಿರಬಹುದು. ನಮ್ಮನ್ನೆಲ್ಲ ನುಂಗಿಹಾಕಲು ಹೆಬ್ಬಾವಿನಂತೆ ವೇಷಧರಿಸಿ ಬಾಯ್ತೆರೆದುಕೊಂಡು ಮಲಗಿದಂತಿದೆಯಲ್ಲ! ಎಚ್ಚರಿಕೆಯಿಂದ ಇರಿ. ॥ ೧೯ ॥ ಇನ್ನೊಬ್ಬ ಬಾಲಕನು ಹೇಳುತ್ತಾನೆ – ಮೇಲ್ಭಾಗದಲ್ಲಿ ನೋಡಿರಿ. ಸೂರ್ಯನ ಕಿರಣಗಳು ಬಿದ್ದು ಎಣ್ಣೆಗೆಂಪಾಗಿ ಕಾಣುತ್ತಿರುವ ಮೋಡಗಳೇ – ಹೌದು-ಹೌದು ! ನೋಡಿರಲ್ಲ! ಈ ಮಹಾಪ್ರಾಣಿಯು ಮುಖದ ಎರಡು ಭಾಗಗಳೂ ಗವಿಯಂತೆ ಕಾಣುತ್ತಿವೆ. ಈ ಎತ್ತರವಾದ ಪರ್ವತ ಶಿಖರಗಳಾದರೋ ಅದರ ಕೋರೆದಾಡೆಗಳಂತೆ ಕಂಡುಬರುತ್ತಿವೆಯಲ್ಲ! ॥ ೨೦-೨೧ ॥ ಇನ್ನೊಬ್ಬ ಹೇಳಿದ-ಗೆಳೆಯರೇ ! ನೋಡಿ-ನೋಡಿ ! ನೀಳವಾಗಿಯೂ, ಅಗಲವಾಗಿಯೂ ಇರುವ ಈ ಹೆದ್ದಾರಿಯು ಹೆಬ್ಬಾವಿನ ನಾಲಿಗೆಯಂತೆ ಕಾಣುತ್ತಿದೆಯಲ್ಲ! ಗಿರಿಶೃಂಗಗಳ ನಡುವೆ ಇರುವ ಅಂಧಕಾರವು ಈ ಹೆಬ್ಬಾವಿನ ಬಾಯಲ್ಲಿರುವ ಕತ್ತಲೆಯೊಡನೆ ಸೆಣಸುತ್ತಿದೆ. ॥ ೨೨ ॥ ಯಾರೋ ಇನ್ನೊಬ್ಬ ಗೋಪಬಾಲಕನು ಹೇಳಿದ – ಮಿತ್ರರೇ ! ಗಮನಿಸಿರಿ. ಇಲ್ಲೇ ಎಲ್ಲೋ ಕಾಡಿನಲ್ಲಿ ಬೆಂಕಿಬಿದ್ದಿರುವಂತೆ ಕಾಣುತ್ತದೆ. ಅದರಿಂದಲೇ ಈ ಬಿಸಿಯಾದ ಮತ್ತು ತೀಕ್ಷ್ಣವಾದ ಗಾಳಿ ಬರುತ್ತಿದೆ. ಆದರೆ ಹೆಬ್ಬಾವಿನ ನಿಃಶ್ವಾಸದೊಂದಿಗೆ ಇದು ಹೇಗೆ ಹೊಂದಿಕೊಂಡಿತು ? ಅದೇ ಬೆಂಕಿಯಲ್ಲಿ ಬೆಂದಿರುವ ಪ್ರಾಣಿಗಳ ದುರ್ಗಂಧದಂತೆ ಅಜಗರದ ಹೊಟ್ಟೆಯಲ್ಲಿ ಸತ್ತಿರುವ ಜೀವಿಗಳ ಮಾಂಸದ ದುರ್ಗಂಧವೇ ಆಗಿರಬೇಕು. ॥ ೨೩ ॥

ಅಸ್ಮಾನ್ಕಿಮತ್ರ ಗ್ರಸಿತಾ ನಿವಿಷ್ಟಾ-
ನಯಂ ತಥಾ ಚೇದ್ಬಕವದ್ವಿನಂಕ್ಷ್ಯತಿ ।
ಕ್ಷಣಾದನೇನೇತಿ ಬಕಾರ್ಯುಶನ್ಮುಖಂ
ವೀಕ್ಷ್ಯೋದ್ಧಸಂತಃ ಕರತಾಡನೈರ್ಯಯುಃ ॥ ೨೪ ॥

ಇತ್ಥಂ ಮಿಥೋಽತಥ್ಯಮತಜ್ಜ್ಞಭಾಷಿತಂ
ಶ್ರುತ್ವಾ ವಿಚಿಂತ್ಯೇತ್ಯಮೃಷಾ ಮೃಷಾಯತೇ ।
ರಕ್ಷೋ ವಿದಿತ್ವಾಖಿಲಭೂತಹೃತ್ಸ್ಥಿತಃ
ಸ್ವಾನಾಂ ನಿರೋದ್ಧುಂ ಭಗವಾನ್ಮನೋ ದಧೇ ॥ ೨೫ ॥

ತಾವತ್ಪ್ರವಿಷ್ಟಾಸ್ತ್ವಸುರೋದರಾಂತರಂ
ಪರಂ ನ ಗೀರ್ಣಾಃ ಶಿಶವಃ ಸವತ್ಸಾಃ ।
ಪ್ರತೀಕ್ಷಮಾಣೇನ ಬಕಾರಿವೇಶನಂ
ಹತಸ್ವಕಾಂತಸ್ಮರಣೇನ ರಕ್ಷಸಾ ॥ ೨೬ ॥

ತಾನ್ವೀಕ್ಷ್ಯ ಕೃಷ್ಣಃ ಸಕಲಾಭಯಪ್ರದೋ
ಹ್ಯನನ್ಯನಾಥಾನ್ಸ್ವಕರಾದವಚ್ಯುತಾನ್ ।
ದೀನಾಂಶ್ಚ ಮೃತ್ಯೋರ್ಜಠರಾಗ್ನಿಘಾಸಾನ್-
ಘೃಣಾರ್ದಿತೋ ದಿಷ್ಟಕೃತೇನ ವಿಸ್ಮಿತಃ ॥ ೨೭ ॥

ಕೃತ್ಯಂ ಕಿಮತ್ರಾಸ್ಯ ಖಲಸ್ಯ ಜೀವನಂ
ನ ವಾ ಅಮೀಷಾಂ ಚ ಸತಾಂ ವಿಹಿಂಸನಮ್ ।
ದ್ವಯಂ ಕಥಂ ಸ್ಯಾದಿತಿ ಸಂವಿಚಿಂತ್ಯ ತ-
ಜ್ಜ್ಞಾತ್ವಾವಿಶತ್ತುಂಡಮಶೇಷದೃಗ್ಘರಿಃ ॥ ೨೮ ॥

ತದಾ ಘನಚ್ಛದಾ ದೇವಾ ಭಯಾದ್ಧಾಹೇತಿ ಚುಕ್ರುಶುಃ ।
ಜಹೃಷುರ್ಯೇ ಚ ಕಂಸಾದ್ಯಾಃ ಕೌಣಪಾಸ್ತ್ವಘಬಾಂಧವಾಃ
॥ ೨೯ ॥

ಆಗ ಅವರಲ್ಲಿದ್ದ ಇನ್ನೊಬ್ಬನು ಹೇಳಿದನು – ನಾವುಗಳು ಇದರ ಬಾಯೊಳಗೆ ಪ್ರವೇಶಿಸಿದರೆ ಏನು ನಮ್ಮನ್ನು ನುಂಗಿಬಿಟ್ಟೀತೇ ? ಮತ್ತೊಬ್ಬ ಹೇಳಿದ – ಛೇ ! ಛೇ ! ಇದೇನು ನಮ್ಮನ್ನು ನುಂಗೀತು ? ಹಾಗೇನಾದರೂ ಸಾಹಸ ಮಾಡಿದರೆ ಕ್ಷಣಾರ್ಧದಲ್ಲಿ ಇವನೂ ಬಕಾಸುರನಂತೆ ನಾಶವಾಗಿ ಹೋದಾನು. ನಮ್ಮ ಮುದ್ದು ಕೃಷ್ಣನು ನಮ್ಮನ್ನು ನುಂಗಲು ಬಿಡುವನೇ ? ಹೀಗೆ ಹೇಳುತ್ತಾ ಆ ಗೊಲ್ಲಬಾಲಕರು ಕೃಷ್ಣನ ನಗುಮುಖವನ್ನು ದಿಟ್ಟಿಸಿ ನೋಡುತ್ತಾ, ಚಪ್ಪಾಳೆಗಳನ್ನು ತಟ್ಟುತ್ತಾ ನಗು–ನಗುತ್ತಾ ಹೆಬ್ಬಾವಿನ ಆ ಮುಖದಲ್ಲಿ ನುಗ್ಗಿದರು. ॥ ೨೪ ॥ ಅಜ್ಞರಾದ ಆ ಗೋಪಬಾಲಕರು ಪರಸ್ಪರವಾಗಿ ಮಾತನಾಡಿಕೊಳ್ಳುತ್ತಿದ್ದ ಉತ್ಪ್ರೇಕ್ಷೆಯ ಮಾತುಗಳನ್ನು ಶ್ರೀಕೃಷ್ಣನು ಕೇಳಿಸಿಕೊಂಡು, ಅಯ್ಯೋ ! ಇವರಿಗಾದರೋ ನಿಜವಾದ ಸರ್ಪವೂ ಕೂಡ ಸುಳ್ಳೆಂದು ಕಂಡು ಬರುತ್ತಿದೆಯಲ್ಲ ! ಎಂದು ಯೋಚಿಸಿದನು. ಪರೀಕ್ಷಿತನೇ ! ಭಗವಾನ್ ಶ್ರೀಕೃಷ್ಣನು ಇವನು ರಾಕ್ಷಸನಾಗಿದ್ದಾನೆ ಎಂದು ತಿಳಿದುಕೊಂಡನು. ಅವನಿಂದ ಏನು ತಾನೇ ಅಡಗಿರಬಲ್ಲದು ? ಅವನು ಎಲ್ಲರ ಹೃದಯದಲ್ಲಿಯೂ ವಾಸವಾಗಿದ್ದಾನೆ. ತನ್ನ ಗೆಳೆಯರಾದ ಗೊಲ್ಲಬಾಲಕರನ್ನು ಅವನ ಬಾಯೊಳಗೆ ಹೋಗುವುದನ್ನು ತಡೆಯಬೇಕೆಂದು ನಿಶ್ಚಯಿಸಿದನು. ॥ ೨೫ ॥ ಭಗವಂತನು ಹೀಗೆ ಯೋಚಿಸುವಾಗಲೇ ಎಲ್ಲ ಗೋಪಾಲಬಾಲಕರು ಕರುಗಳೊಂದಿಗೆ ಅಸುರನ ಹೊಟ್ಟೆಯೊಳಗೆ ಪ್ರವೇಶಿಸಿಯೇ ಬಿಟ್ಟರು. ಆದರೆ ಅಘಾಸುರನು ಅವರನ್ನು ಇನ್ನೂ ನುಂಗಿರಲಿಲ್ಲ, ಇದರ ಕಾರಣ – ಅಘಾಸುರನು ತನ್ನ ಅಣ್ಣ ಬಕಾಸುರ ಮತ್ತು ಅಕ್ಕ ಪೂತನೆಯನ್ನು ವಧಿಸಿದುದನ್ನು ನೆನೆದು, ಅವರನ್ನು ವಧಿಸಿದ ಶ್ರೀಕೃಷ್ಣನು ಬಾಯೊಳಗೆ ಬಂದಾಗ ಎಲ್ಲರನ್ನು ಒಂದೇ ಬಾರಿಗೆ ನುಂಗಿಬಿಡುವೆನೆಂದು ದಾರಿಕಾಯುತ್ತಿದ್ದನು. ॥ ೨೬ ॥ ಸಕಲರಿಗೂ ಅಭಯಪ್ರದನಾದ ಶ್ರೀಕೃಷ್ಣನು ಗೊಲ್ಲಬಾಲಕರಿಗೂ ಇವನೇ ಏಕಮಾತ್ರರಕ್ಷಕನಾಗಿದ್ದನು. ಆದರೂ ಅವರು ಇವನ ಕೈತಪ್ಪಿ ಹೋಗಿದ್ದರು. ಹುಲ್ಲು ಕಡ್ಡಿಯು ಕೈತಪ್ಪಿ ಅಗ್ನಿಗೆ ಬಿದ್ದು ಹೋಗುವಂತೇ ಕರುಗಳೂ, ದೀನರಾದ ಗೋಪಾಲಕರೂ ಕೃಷ್ಣನ ಕೈ ತಪ್ಪಿ ಅಘಾಸುರನ ಜಠರಾಗ್ನಿಗೆ ಬಿದ್ದುಹೋಗಿದ್ದರು. ದಯಾರ್ದ್ರ ಹೃದಯನಾದ ಶ್ರೀಕೃಷ್ಣನು ದೈವದ ಈ ವಿಚಿತ್ರವಾದ ಗತಿಯನ್ನು ನೋಡಿ ಆಚ್ಚರಿಗೊಂಡನು. ॥ ೨೭ ॥ 'ಈಗ ನಾನೇನು ಮಾಡಲಿ?' ಎಂದು ತಾನು ಮಾಡಬೇಕಾದ ಕರ್ತವ್ಯದ ಕುರಿತಾಗಿ ಯೋಚಿಸಿದನು. ಸಂತಸ್ವಭಾವದ ನನ್ನ ಗೆಳೆಯರಾದ ಗೋಪಾಲರಿಗೂ, ಕರುಗಳಿಗೂ ಯಾವುದೇ ಹಿಂಸೆಯೂ ಆಗಬಾರದು. ಈ ಎರಡನ್ನು ಹೇಗೆ ಸಾಧಿಸಲಿ ? ಪರೀಕ್ಷಿತನೇ ! ಶ್ರೀಹರಿಯು ಭೂತ ಭವಿಷ್ಯದ್ವರ್ತಮಾನಗಳನ್ನು ತಿಳಿದವನಾಗಿದ್ದನು. ಅವನಿಗೆ ಈ ಉಪಾಯವನ್ನು ತಿಳಿಯುವುದರಲ್ಲಿ ಕಷ್ಟವಾಗಿರಲಿಲ್ಲ. ಅವನು ತನ್ನ ಕರ್ತವ್ಯವನ್ನು ನಿಶ್ಚಯಿಸಿಕೊಂಡು ಹೆಬ್ಬಾವಿನ ಮುಖದಲ್ಲಿ ಪ್ರವೇಶಿಸಿಬಿಟ್ಟನು. ॥ ೨೮ ॥ ಆ ಸಮಯದಲ್ಲಿ ಮೋಡಗಳಲ್ಲಿ ಅಡಗಿದ್ದ ದೇವತೆಗಳು ಭಯಗೊಂಡು ಅಯ್ಯೋ ! ಅಯ್ಯೋ ! ಸರ್ವನಾಶವಾಯಿತೆಂದು ಕೂಗಿಕೊಂಡರು. ಅಘಾಸುರನ ಹಿತೈಷಿಗಳಾದ ಕಂಸನೇ ಮೊದಲಾದ ರಾಕ್ಷಸರು ಹಿರಿ–ಹಿರಿ ಹಿಗ್ಗಿದರು. ॥ ೨೯ ॥

ತಚ್ಛ್ರುತ್ವಾ ಭಗವಾನ್ ಕೃಷ್ಣಸ್ತ್ವವ್ಯಯಃ ಸಾರ್ಭವತ್ಸಕಮ್ ।
ಚೂರ್ಣೀಚಿಕೀರ್ಷೋರಾತ್ಮಾನಂ ತರಸಾ ವವೃಧೇ ಗಲೇ
॥ ೩೦ ॥

ತತೋಽತಿಕಾಯಸ್ಯ ನಿರುದ್ಧಮಾರ್ಗಿಣೋ
ಹ್ಯುದ್ಗೀರ್ಣದೃಷ್ಟೇರ್ಭ್ರಮತಸ್ತ್ವಿತಸ್ತತಃ ।
ಪೂರ್ಣೋಽಂತರಂಗೇ ಪವನೋ ನಿರುದ್ಧೋ
ಮೂರ್ಧನ್ವಿ ನಿಷ್ಪಾಟ್ಯ ವಿನಿರ್ಗತೋ ಬಹಿಃ ॥ ೩೧ ॥

ತೇನೈವ ಸರ್ವೇಷು ಬಹಿರ್ಗತೇಷು
ಪ್ರಾಣೇಷು ವತ್ಸಾನ್ಸುಹೃದಃ ಪರೇತಾನ್ ।
ದೃಷ್ಟ್ವಾ ಸ್ವಯೋತ್ಥಾಪ್ಯ ತದನ್ವಿತಃ ಪುನ-
ರ್ವಕ್ತ್ರಾನ್ಮುಕುಂದೋ ಭಗವಾನ್ವಿನಿರ್ಯಯೌ ॥ ೩೨ ॥

ಪೀನಾಹಿಭೋಗೋತ್ಥಿತಮದ್ಭುತಂ ಮಹ-
ಜ್ಜ್ಯೋತಿಃ ಸ್ವಧಾಮ್ನಾ ಜ್ವಲಯದ್ದಿಶೋ ದಶ ।
ಪ್ರತೀಕ್ಷ್ಯ ಖೇಽವಸ್ಥಿತಮೀಶನಿರ್ಗಮಂ
ವಿವೇಶ ತಸ್ಮಿನ್ಮಿಷತಾಂ ದಿವೌಕಸಾಮ್ ॥ ೩೩ ॥

ತತೋಽತಿಹೃಷ್ಟಾಃ ಸ್ವಕೃತೋಽಕೃತಾರ್ಹಣಂ
ಪುಷ್ಪೈಃ ಸುರಾ ಅಪ್ಸರಸಶ್ಚ ನರ್ತನೈಃ ।
ಗೀತೈಃ ಸುಗಾ ವಾದ್ಯಧರಾಶ್ಚ ವಾದ್ಯಕೈಃ
ಸ್ತವೈಶ್ಚ ವಿಪ್ರಾ ಜಯನಿಃಸ್ವನೈರ್ಗಣಾಃ ॥ ೩೪ ॥

ತದದ್ಭುತಸ್ತೋತ್ರಸುವಾದ್ಯಗೀತಿಕಾ-
ಜಯಾದಿನೈಕೋತ್ಸವಮಂಗಲಸ್ವನಾನ್ ।
ಶ್ರುತ್ವಾ ಸ್ವಧಾಮ್ನೋಽಂತ್ಯಜ ಆಗತೋಽಚಿರಾದ್
ದೃಷ್ಟ್ವಾ ಮಹೀಶಸ್ಯ ಜಗಾಮ ವಿಸ್ಮಯಮ್ ॥ ೩೫ ॥

ರಾಜನ್ನಾಜಗರಂ ಚರ್ಮ ಶುಷ್ಕಂ ವೃಂದಾವನೇಽದ್ಭುತಮ್ ।
ವ್ರಜೌಕಸಾಂ ಬಹುತಿಥಂ ಬಭೂವಾಕ್ರೀಡಗಹ್ವರಮ್
॥ ೩೬ ॥

ಅಘಾಸುರನು ಕರುಗಳನ್ನು ಮತ್ತು ಗೊಲ್ಲಬಾಲಕರನ್ನು ಭಗವಾನ್ ಶ್ರೀಕೃಷ್ಣನೊಂದಿಗೆ ಕೋರೆಹಲ್ಲುಗಳಿಂದ ಜಗಿದು ನುಂಗಿ ಜೀರ್ಣ ಮಾಡಿಕೊಳ್ಳಲು ಹವಣಿಸುತ್ತಿದ್ದನು. ಆದರೆ ಆಗಲೇ ಅವಿನಾಶೀ ಶ್ರೀಕೃಷ್ಣನು ದೇವತೆಗಳ ಕರುಣಾಕ್ರಂದನವನ್ನು ಕೇಳಿ ಅಸುರನ ಗಂಟಲೊಳಗೆ ತನ್ನ ಶರೀರವನ್ನು ವೇಗವಾಗಿ ಹಿಗ್ಗಿಸ ತೊಡಗಿದನು. ॥ ೩೦ ॥ ಅವನು ಬೆಳೆಯುತ್ತಾ-ಬೆಳೆಯುತ್ತಾ ಅವನ ಗಂಟಲು ತುಂಬಿ ಉಸಿರು ಕಟ್ಟಿಹೋಯಿತು. ಕಣ್ಣುಗಳು ತಿರುಗಿದವು. ಅವನು ವ್ಯಾಕುಲನಾಗಿ ಬಹಳವಾಗಿ ಚಡಪಡಿಸಿದನು. ಶ್ವಾಸೋಶ್ವಾಸಗಳು ನಿಂತುಹೋಗಿ ವಾಯುವು ಇಡೀ ಶರೀರದಲ್ಲಿ ತುಂಬಿ ಹೋಯಿತು. ಕೊನೆಗೆ ಪ್ರಾಣವು ಬ್ರಹ್ಮರಂಧ್ರವನ್ನು ಭೇದಿಸಿ ಹೊರಟು ಹೋಯಿತು. ॥ ೩೧ ॥ ಅದೇ ಮಾರ್ಗದಿಂದ ಅವನ ಎಲ್ಲ ಇಂದ್ರಿಯಗಳು ಪ್ರಾಣದೊಂದಿಗೆ ಶರೀರದಿಂದ ಹೊರ ಬಿದ್ದವು. ಆಗಲೇ ಭಗವಾನ್ ಮುಕುಂದನು ತನ್ನ ಅಮೃತಮಯ ದೃಷ್ಟಿಯಿಂದ ಸತ್ತು ಹೋದ ಕರುಗಳನ್ನು ಮತ್ತು ಗೋಪಬಾಲಕರನ್ನು ಬದುಕಿಸಿದನು ಹಾಗೂ ಅವರೆಲ್ಲರನ್ನು ಜೊತೆಗೆ ಕರೆದುಕೊಂಡು ಅವನು ಅಘಾಸುರನ ಬಾಯಿಯಿಂದ ಹೊರಗೆ ಬಂದನು. ॥ ೩೨ ॥ ಆ ಹೆಬ್ಬಾವಿನ ಸ್ಥೂಲ ಶರೀರದಿಂದ ಅತ್ಯಂತ ಅದ್ಭುತ ಹಾಗೂ ಮಹಾಜ್ಯೋತಿಯೊಂದು ಹೊರಟಿತು. ಆಗ ಆ ಜ್ಯೋತಿಯ ಪ್ರಕಾಶದಿಂದ ಹತ್ತು ದಿಕ್ಕುಗಳೂ ಬೆಳಗಿದವು. ಅದು ಸ್ವಲ್ಪ ಹೊತ್ತು ಆಕಾಶದಲ್ಲಿ ನೆಲೆಸಿ ಭಗವಂತನು ಹೊರಬರುವುದನ್ನು ಪ್ರತೀಕ್ಷೆ ಮಾಡುತ್ತಿತ್ತು. ಅವನು ಹೊರಗೆ ಬರುತ್ತಲೇ ಅದು ಸಕಲ ದೇವತೆಗಳು ನೋಡು-ನೋಡುತ್ತಿರುವಂತೆ ಭಗವಂತನಲ್ಲಿ ಸೇರಿ ಹೋಯಿತು. ॥ ೩೩ ॥ ಆ ಸಮಯದಲ್ಲಿ ದೇವತೆಗಳು ಹೂಮಳೆಯನ್ನು ಸುರಿಸಿ, ಅಪ್ಸರೆಯರು ನರ್ತನ ಮಾಡುತ್ತಾ, ಗಂಧರ್ವರು ಹಾಡಿ, ವಿದ್ಯಾಧರರು ವಾದ್ಯಗಳನ್ನು ನುಡಿಸಿ, ಬ್ರಾಹ್ಮಣರು ಸ್ವಸ್ತಿ ವಾಚನ ಮಾಡುತ್ತಾ , ಪಾರ್ಷದರು ಶ್ರೀಕೃಷ್ಣನಿಗೆ ಜಯವಾಗಲಿ, ಯದುಕುಮಾರನಿಗೆ ಜಯವಾಗಲೀ ಎಂದು ಜಯಘೋಷ ಮಾಡುತ್ತಾ ಆನಂದದಿಂದ ಭಗವಂತನನ್ನು ಅಭಿನಂದಿಸಿದರು. ಏಕೆಂದರೆ, ಭಗವಾನ್ ಶ್ರೀಕೃಷ್ಣನು ಅಘಾಸುರನ್ನು ಕೊಂದು ಅವರೆಲ್ಲರ ದೊಡ್ಡ ಕೆಲಸವನ್ನು ಮಾಡಿದ್ದನು. ॥ ೩೪ ॥ ಆ ಅದ್ಭುತ ಸ್ತುತಿಗಳು, ಮಂಗಳವಾದ್ಯ-ಗೀತೆಗಳು, ಜಯಕಾರ ಧ್ವನಿಗಳೂ, ಆನಂದೋತ್ಸವದ ಮಂಗಳಧ್ವನಿಗಳು ಬ್ರಹ್ಮಲೋಕಕ್ಕೆ ಮುಟ್ಟಿದವು. ಬ್ರಹ್ಮದೇವರು ಆ ಧ್ವನಿಯನ್ನು ಕೇಳಿದಾಗ ಅವರು ಶೀಘ್ರವಾಗಿ ತನ್ನ ವಾಹನವನ್ನೇರಿ ಶ್ರೀಕೃಷ್ಣನಿರುವಲ್ಲಿಗೆ ಬಂದು ಅವನ ಮಹಿಮೆಯನ್ನು ನೋಡಿ ಆಶ್ಚರ್ಯಚಕಿತರಾದರು. ॥ ೩೫ ॥ ಪರೀಕ್ಷಿತನೇ ! ವೃಂದಾವನದಲ್ಲಿ ಆ ಹೆಬ್ಬಾವಿನ ಚರ್ಮವು ಒಣಗಿಹೋದಾಗ ಅದು ವ್ರಜವಾಸಿಗಳಿಗೆ ಅನೇಕ ದಿನಗಳವರೆಗೆ ಆಟವಾಡುವ ಒಂದು ಅದ್ಭುತ ಗುಹೆಯಂತಾಗಿತ್ತು. ॥ ೩೬ ॥ ಭಗವಂತನು ಗೊಲ್ಲಬಾಲಕರನ್ನು ಮೃತ್ಯುಮುಖದಿಂದ ಬದುಕಿಸಿದ್ದು ಮತ್ತು ಅಘಾಸುರನಿಗೆ ಮೋಕ್ಷವನ್ನು ಕರುಣಿಸಿದ ಆ ಲೀಲೆಯನ್ನು ತನ್ನ ಕೌಮಾರಾವಸ್ಥೆಯಲ್ಲಿ ಅಂದರೆ ಐದನೇ ವರ್ಷದಲ್ಲಿ ನಡೆಸಿದ್ದನು. ಗೊಲ್ಲಬಾಲಕರು ಅದನ್ನು ಆಗಲೇ ನೋಡಿಯೂ ಇದ್ದರು. ಆದರೆ

ಏತತ್ಕೌಮಾರಜಂ ಕರ್ಮ ಹರೇರಾತ್ಮಾಹಿಮೋಕ್ಷಣಮ್ ।
ಮೃತ್ಯೋಃ ಪೌಗಂಡಕೇ ಬಾಲಾ ದೃಷ್ಟ್ವೋಚುರ್ವಿಸ್ಮಿತಾ ವ್ರಜೇ ॥ ೩೭ ॥

ನೈತದ್ವಿಚಿತ್ರಂ ಮನುಜಾರ್ಭಮಾಯಿನಃ
ಪರಾವರಾಣಾಂ ಪರಮಸ್ಯ ವೇಧಸಃ ।
ಅಘೋಽಪಿ ಯತ್ಸ್ಪರ್ಶನಧೌತಪಾತಕಃ
ಪ್ರಾಪಾತ್ಮಸಾಮ್ಯಂ ತ್ವಸತಾಂ ಸುದುರ್ಲಭಮ್ ॥ ೩೮ ॥

ಸಕೃದ್ಯದಂಗಪ್ರತಿಮಾಂತರಾಹಿತಾ
ಮನೋಮಯೀ ಭಾಗವತೀಂ ದದೌ ಗತಿಮ್ ।
ಸ ಏವ ನಿತ್ಯಾತ್ಮ ಸುಖಾನುಭೂತ್ಯಭಿ-
ವ್ಯುದಸ್ತಮಾಯೋಽಂತರ್ಗತೋ ಹಿ ಕಿಂ ಪುನಃ ॥ ೩೯ ॥

ಸೂತ ಉವಾಚ

ಇತ್ಥಂ ದ್ವಿಜಾ ಯಾದವದೇವದತ್ತಃ
ಶ್ರುತ್ವಾ ಸ್ವರಾತುಶ್ಚರಿತಂ ವಿಚಿತ್ರಮ್ ।
ಪಪ್ರಚ್ಛ ಭೂಯೋಽಪಿ ತದೇವ ಪುಣ್ಯಂ
ವೈಯಾಸಕಿಂ ಯನ್ನಿಗೃಹೀತಚೇತಾಃ ॥ ೪೦ ॥

ರಾಜೋವಾಚ

ಬ್ರಹ್ಮನ್ಕಾಲಾಂತರಕೃತಂ ತತ್ಕಾಲೀನಂ ಕಥಂ ಭವೇತ್ ।
ಯತ್ಕೌಮಾರೇ ಹರಿಕೃತಂ ಜಗುಃ ಪೌಗಂಡಕೇಽರ್ಭಕಾಃ ॥ ೪೧ ॥

ತದ್ಬ್ರೂಹಿ ಮೇ ಮಹಾಯೋಗಿನ್ಪರಂ ಕೌತೂಹಲಂ ಗುರೋ ।
ನೂನಮೇತದ್ಧರೇರೇವ ಮಾಯಾ ಭವತಿ ನಾನ್ಯಥಾ ॥ ೪೨ ॥

ವಯಂ ಧನ್ಯತಮಾ ಲೋಕೇ ಗುರೋಽಪಿ ಕ್ಷತ್ರಬಂಧವಃ ।
ಯತ್ಪಿಬಾಮೋ ಮುಹುಸ್ತ್ವತ್ತಃ ಪುಣ್ಯಂ ಕೃಷ್ಣಕಥಾಮೃತಮ್ ॥ ೪೩ ॥

ಪೌಗಂಡಾವಸ್ಥೆಯಲ್ಲಿ* ಅರ್ಥಾತ್ ಆರನೇ ವರ್ಷದಲ್ಲಿ ಅತ್ಯಂತ ಆಶ್ಚರ್ಯಚಕಿತರಾಗಿ ವ್ರಜದಲ್ಲಿ ಅದನ್ನು ವರ್ಣಿಸಿದರು. ॥ ೩೭॥ ಅಘಾಸುರನು ಮೂರ್ತಿವೆತ್ತ ಅಘ (ಪಾಪ)ವೇ ಆಗಿದ್ದನು. ಭಗವಂತನ ಸ್ಪರ್ಶಮಾತ್ರದಿಂದ ಅವನ ಪಾಪಗಳೆಲ್ಲವೂ ತೊಳೆದು ಹೋದುವು ಮತ್ತು ಪಾಪಿಗಳಿಗೆ ಎಂದೂ ಸಿಗಲಾರದ ಸಾರೂಪ್ಯ ಮುಕ್ತಿಯು ಅವನಿಗೆ ದೊರೆಯಿತು. ಆದರೆ ಇದೇನು ಆಶ್ಚರ್ಯದ ಮಾತಲ್ಲ. ಏಕೆಂದರೆ, ಮನುಷ್ಯಬಾಲಕನಂತೆ ಲೀಲೆಯನ್ನು ಮಾಡುವ ಅವನೇ ಪರಮಪುರುಷ ಪರಮಾತ್ಮನಾಗಿದ್ದಾನೆ. ಅವನು ವ್ಯಕ್ತ-ಅವ್ಯಕ್ತ ಮತ್ತು ಕಾರ್ಯ-ಕಾರಣರೂಪೀ ಸಮಸ್ತ ಜಗತ್ತಿನ ಏಕಮಾತ್ರ ನಿಯಾಮಕನಾಗಿದ್ದಾನೆ. ॥ ೩೮ ॥ ಭಗವಾನ್ ಶ್ರೀಕೃಷ್ಣನ ಯಾವುದೇ ಒಂದು ಅಂಗದ ಭಾವನಿರ್ಮಿತ ಪ್ರತಿಮೆಯನ್ನು ಧ್ಯಾನದ ಮೂಲಕ ಒಮ್ಮೆಯಾದರೂ ಹೃದಯದಲ್ಲಿ ನೆಲೆಸಿ ಕೊಂಡರೆ, ಅದು ಸಾಲೋಕ್ಯ, ಸಾಮೀಪ್ಯ ಮೊದಲಾದ ಗತಿಯನ್ನು ಕರುಣಿಸುತ್ತದೆ. ಅದು ಭಗವಂತನ ಅಂತರಂಗ ಭಕ್ತರಿಗೆ ಸದಾ ದೊರೆಯುತ್ತದೆ. ಭಗವಂತನು ಆತ್ಮಾನಂದದ ನಿತ್ಯ ಸಾಕ್ಷಾತ್ಕಾರ ಸ್ವರೂಪನಾಗಿದ್ದಾನೆ. ಮಾಯೆಯು ಅವನ ಬಳಿಯಲ್ಲಿ ಸುಳಿಯು ವುದಿಲ್ಲ. ಅಂತಹ ಆ ಭಗವಂತನು ಅಘಾಸುರ ಶರೀರದಲ್ಲಿ ಪ್ರವೇಶಿಸಿದನೆಂದರೆ ಅವನಿಗೆ ಸದ್ಗತಿಯಾಗುವುದರಲ್ಲಿ ಸಂದೇಹ ವಿದೆಯೇ ? ॥ ೩೯ ॥

**ಸೂತ ಪುರಾಣಿಕರು ಹೇಳುತ್ತಾರೆ** – ಶೌನಕಾದಿ ಋಷಿಗಳೇ ! ಯದುವಂಶ ಶಿರೋಮಣಿಯಾದ ಶ್ರೀಕೃಷ್ಣನೇ ಪರೀಕ್ಷಿದ್ರಾಜನಿಗೆ ಜೀವನದಾನ ಮಾಡಿದ್ದನು. ಪರೀಕ್ಷಿತನು ತನ್ನ ರಕ್ಷಕನೂ, ಜೀವದಾತನೂ ಆದ ಶ್ರೀಕೃಷ್ಣನ ಸುಮನೋಹರವಾದ ಲೀಲಾ ಪ್ರಸಂಗಗಳನ್ನು ಕೇಳಿದಾಗ ಅವನ ಚಿತ್ತವು ಆ ಅಮೃತಮಯ ಲೀಲೆಗಳಿಂದ ಮುಗ್ಧವಾಗಿ ಹೋಗಿತ್ತು. ಇನ್ನೂ ಕೇಳಬೇಕೆಂದು ಅನಿಸಿತು. ಜಿತೇಂದ್ರಿಯನಾದ ಆ ಪರೀಕ್ಷಿತನು ಶ್ರೀಶುಕಮಹಾ ಮುನಿಗಳಲ್ಲಿ ಶ್ರೀಕೃಷ್ಣನ ಪವಿತ್ರ ಲೀಲೆಗಳ ಕುರಿತು ಪುನಃ ಪ್ರಶ್ನಿಸಿದನು. ॥ ೪೦ ॥

**ಪರೀಕ್ಷಿದ್ರಾಜನು ಕೇಳಿದನು** – ಪರಮಪೂಜ್ಯರೇ ! ಭಗವಾನ್ ಶ್ರೀಕೃಷ್ಣನು ಐದನೆಯ ವರ್ಷದಲ್ಲಿ ನಡೆಸಿದ ಲೀಲೆಯನ್ನು ಅವನ ಆರನೆಯ ವರ್ಷದಲ್ಲಿ ಗೋಪಾಲಕರು ವ್ರಜದಲ್ಲಿ ಹೋಗಿ ಹೇಳಿದರೆಂದು ತಾವು ಅಪ್ಪಣೆ ಕೊಡಿಸಿದಿರಿ. ಗತಕಾಲದ ಲೀಲೆಯು ವರ್ತಮಾನದಲ್ಲಿ ನಡೆದಂತೆ ಹೇಳಲು ಹೇಗೆ ಸಾಧ್ಯ ವಾಯಿತು ? ॥ ೪೧ ॥ ಮಹಾಯೋಗಿಗಳೇ ! ಇದನ್ನು ಕೇಳಲು ನನಗೆ ಹೆಚ್ಚಿನ ಕುತೂಹಲವುಂಟಾಗಿದೆ. ದಯಮಾಡಿ ಹೇಳಿರಿ. ನಿಶ್ಚಯವಾಗಿಯೂ ಇದು ಹರಿಯ ಮಾಯೆಯೇ ಹೊರತು ಬೇರೆ ಯಾವ ರೀತಿಯಿಂದಲೂ ಹೀಗಾಗಲು ಸಾಧ್ಯವಿಲ್ಲ. ॥ ೪೨ ॥ ಗುರುಗಳೇ ! ನಾವು ಕ್ಷತ್ರಬಂಧುಗಳಾಗಿದ್ದರೂ (ಕರ್ತವ್ಯವನ್ನು ಪಾಲಿಸದೆ ನಾಮಮಾತ್ರಕ್ಕೆ ಕ್ಷತ್ರಿಯರಾಗಿದ್ದರೂ) ಧನ್ಯತಮರಾಗಿ ಇದ್ದೇವೆ. ತಮ್ಮ ಮುಖಾರವಿಂದದಿಂದ ಪುಣ್ಯತಮವಾದ ಶ್ರೀಕೃಷ್ಣ ಕಥಾಮೃತವನ್ನು ಸತತವಾಗಿ ಪಾನಮಾಡುತ್ತಿದ್ದೇವಲ್ಲವೇ ? ॥ ೪೩ ॥

* ಕೌಮಾರಃ – ಪೌಗಂಡಃ – ಕೌಮಾರಂ ಪಂಚಮಾಬ್ದಾಂತಂ ಪೌಗಂಡಂ ದಶಮಾವಧಿ । ಕೈಶೋರಮಾಪಂಚಾದಶಾದ್ಯೌವನಂ ಚ ತತಃ ಪರಮ್ ॥

*ಸೂತ ಉವಾಚ*

ಇತ್ಥಂ ಸ್ಮ ಪೃಷ್ಟಃ ಸ ತು ಬಾದರಾಯಣಿಃ
ತತ್ಸ್ಮಾರಿತಾನಂತಹೃತಾಖಿಲೇಂದ್ರಿಯಃ ।
ಕೃಚ್ಛ್ರಾತ್ಪುನರ್ಲಬ್ಧ ಬಹಿರ್ದೃಶಿಃ ಶನೈಃ
ಪ್ರತ್ಯಾಹ ತಂ ಭಾಗವತೋತ್ತಮೋತ್ತಮ ॥ ೪೪ ॥

**ಸೂತ ಪುರಾಣಿಕರು ಹೇಳುತ್ತಾರೆ** - ಪರಮಾತ್ಮನ ಪರಮ ಭಕ್ತರಲ್ಲಿ ಶ್ರೇಷ್ಠರಾದ ಶೌನಕಮುನಿವರ್ಯರೇ! ಪರೀಕ್ಷಿತನು ಹೀಗೆ ಪ್ರಶ್ನಿಸಿದಾಗ ಶ್ರೀ ಶುಕದೇವರಿಗೆ ಭಗವಂತನ ಲೀಲಾ ಪ್ರಸಂಗದ ಸ್ಮರಣೆಯುಂಟಾಗಿ ಇಂದ್ರಿಯಗಳೆಲ್ಲವೂ ಬಹಿರ್ವ್ಯಾಪಾರವನ್ನು ತೊರೆದು ಮನಸ್ಸಿನೊಡನೆ ಹೃತ್ಕಮಲದಲ್ಲಿ ಶ್ರೀಕೃಷ್ಣನ ಲೀಲಾ ಪ್ರಸಂಗದಲ್ಲಿ ಲೀನವಾಗಿಬಿಟ್ಟವು. ಹೀಗೆ ಆತ್ಮಾನಂದವನ್ನು ಅನುಭವಿಸುತ್ತಿದ್ದ ಶುಕಬ್ರಹ್ಮರು ಅತ್ಯಂತ ಕಠಿಣತೆಯಿಂದ ಬಹಿರ್ಮುಖರಾಗಿ ಪುನಃ ಭಗವಂತನ ದಿವ್ಯಲೀಲೆಗಳನ್ನು ವರ್ಣಿಸ ತೊಡಗಿದರು. ॥ ೪೪ ॥

*ಹನ್ನೆರಡನೆಯ ಅಧ್ಯಾಯವು ಮುಗಿಯಿತು. ॥ ೧೨ ॥*

**ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ ದ್ವಾದಶೋಽಧ್ಯಾಯಃ ॥ ೧೨ ॥**

# ಹದಿಮೂರನೆಯ ಅಧ್ಯಾಯ

## ಬ್ರಹ್ಮದೇವರ ಮೋಹ ಮತ್ತು ಅದರ ನಿರಸನ

*ಶ್ರೀಶುಕ ಉವಾಚ*

ಸಾಧು ಪೃಷ್ಟಂ ಮಹಾಭಾಗ ತ್ವಯಾ ಭಾಗವತೋತ್ತಮ ।
ಯನ್ನೂತನಯಸೀಶಸ್ಯ ಶೃಣ್ವನ್ನಪಿ ಕಥಾಂ ಮುಹುಃ ॥ ೧ ॥

ಸತಾಮಯಂ ಸಾರಭೃತಾಂ ನಿಸರ್ಗೋ
ಯದರ್ಥವಾಣೀಶ್ರುತಿಚೇತಸಾಮಪಿ ।
ಪ್ರತಿಕ್ಷಣಂ ನವ್ಯವದಚ್ಯುತಸ್ಯ ಯತ್
ಸ್ತ್ರಿಯಾ ವಿಟಾನಾಮಿವ ಸಾಧು ವಾರ್ತಾ ॥ ೨ ॥

ಶೃಣುಷ್ವಾವಹಿತೋ ರಾಜನ್ನಪಿ ಗುಹ್ಯಂ ವದಾಮಿ ತೇ ।
ಬ್ರೂಯುಃ ಸ್ನಿಗ್ಧಸ್ಯ ಶಿಷ್ಯಸ್ಯ ಗುರವೋ ಗುಹ್ಯಮಪ್ಯುತ ॥ ೩ ॥

ತಥಾಘವದನಾನ್ಮೃತ್ಯೋಃ ರಕ್ಷಿತ್ವಾ ವತ್ಸಪಾಲಕಾನ್ ।
ಸರಿತ್ಪುಲಿನಮಾನೀಯ ಭಗವಾನಿದಮಬ್ರವೀತ್ ॥ ೪ ॥

**ಶ್ರೀಶುಕಮಹಾಮುನಿಗಳು ಹೇಳುತ್ತಾರೆ** - ಪರೀಕ್ಷಿತನೇ! ಮಹಾಭಾಗ್ಯಶಾಲಿಯೇ! ಭಗವದ್ಭಕ್ತರಲ್ಲಿ ಶ್ರೇಷ್ಠನಾದವನೇ! ನೀನು ಒಳ್ಳೆಯ ಪ್ರಶ್ನೆಯನ್ನೇ ಕೇಳಿರುವೆ. ಶ್ರೀಕೃಷ್ಣನ ಲೀಲಾಕಥೆಗಳನ್ನು ಬಾರಿ-ಬಾರಿಗೂ ಕೇಳುತ್ತಿದ್ದರೂ, ನೀನು ಕೇಳುತ್ತಿರುವ ಪ್ರಶ್ನೆಗಳ ಮೂಲಕ ಅವನ್ನು ಇನ್ನೂ ಸರಸವಾಗಿ-ನೂತನವಾಗಿ ಕೇಳಲು ಆಶಿಸುತ್ತಿರುವೆಯಲ್ಲ! ॥ ೧ ॥ ಕಾಮುಕರಾದ ವಿಟ ಪುರುಷರಿಗೆ ಸ್ತ್ರೀಯರ ವಿಷಯಕವಾದ ಚರ್ಚೆಯಲ್ಲಿ ಹೊಸ-ಹೊಸ ರಸವು ದೊರೆಯುವಂತೆ, ಸತ್ಪುರುಷರ ವಾಣಿ, ಕಿವಿ ಮತ್ತು ಹೃದಯಗಳು ಭಗವಂತನ ಲೀಲೆಗಳನ್ನೇ ಗಾನಮಾಡುವುದು, ಶ್ರವಣಿಸುವುದು ಚಿಂತಿಸುವುದರಲ್ಲೇ ತೊಡಗಿರುತ್ತವೆ. ಅವರು ಪ್ರತಿಕ್ಷಣವು ಭಗವಂತನ ಲೀಲೆಗಳನ್ನು ಅಪೂರ್ವ ರಸಮಯ ಹಾಗೂ ನಿತ್ಯನೂತನವಾಗಿ ಅನುಭವಿಸುತ್ತ ಇರುತ್ತಾರೆ. ಇದು ಅವರ ಸ್ವಭಾವವೇ ಆಗಿದೆ. ॥ ೨ ॥ ಪರೀಕ್ಷಿತನೇ! ನೀನು ಏಕಾಗ್ರಚಿತ್ತನಾಗಿ ಕೇಳು. ಭಗವಂತನ ಈ ಲೀಲೆಯು ಅತ್ಯಂತ ರಹಸ್ಯಮಯವಾಗಿದ್ದರೂ ಕೂಡ ನಾನು ನಿನಗೆ ಹೇಳುತ್ತೇನೆ. ದಯಾಳುಗಳಾದ ಆಚಾರ್ಯರು ತಮ್ಮ ಪ್ರಿಯ ಶಿಷ್ಯನಿಗೆ ರಹಸ್ಯವಿಷಯವನ್ನಾದರೂ ಹೇಳುವಂತೆಯೇ ನಾನು ಎಲ್ಲವನ್ನು ಹೇಳುವೆನು. ॥ ೩ ॥ ಭಗವಾನ್ ಶ್ರೀಕೃಷ್ಣನು ತನ್ನ ಸಂಗಡಿಗರಾದ ಗೋಪಬಾಲಕರನ್ನು ಮೃತ್ಯುರೂಪೀ ಅಘಾಸುರನ ಮುಖದಿಂದ ರಕ್ಷಿಸಿದನೆಂಬುದನ್ನು ನಿನಗೆ ಹೇಳಿದ್ದೆನಲ್ಲವೇ! ಅನಂತರ ಶ್ರೀಕೃಷ್ಣನು ಅವರನ್ನು ಯಮುನಾ ನದಿಯ ತೀರದ ಮರಳದಿಣ್ಣೆಗೆ ಕರೆದುಕೊಂಡು ಬಂದು ತನ್ನ ಮಿತ್ರರಿಗೆ ಹೇಳಿದನು ॥ ೪ ॥

ಅಹೋಽತಿರಮ್ಯಂ ಪುಲಿನಂ ವಯಸ್ಯಾಃ
ಸ್ವಕೇಲಿಸಂಪನ್ಮೃದುಲಾಚ್ಛವಾಲುಕಮ್ ।
ಸ್ಫುಟತ್ಸರೋಗಂಧಹೃತಾಲಿಪತ್ರಿಕ-
ಧ್ವನಿ ಪ್ರತಿಧ್ವಾನಲಸದ್ದ್ರುಮಾಕುಲಮ್ ॥ ೫ ॥

ಪ್ರಿಯಮಿತ್ರರೇ! ಯಮುನೆಯ ಈ ಮರಳದಿಣ್ಣೆಯು ಅತ್ಯಂತ ರಮಣೀಯವಾಗಿದೆ. ನೋಡಿರಲ್ಲ! ಇಲ್ಲಿಯ ಮರಳು ಕೋಮಲವಾಗಿ, ಸ್ವಚ್ಛವಾಗಿದೆ. ನಮಗೆ ಆಟವಾಡಲು ಎಲ್ಲ ಆಟದ ಸಾಮಗ್ರಿಗಳು ಇಲ್ಲಿ ಸಿಗುತ್ತವೆ. ಅಲ್ಲಿ ನೋಡಿರಿ! ಒಂದು ಕಡೆ ಬಣ್ಣ-ಬಣ್ಣದ ಕಮಲಗಳು ಅರಳಿದ್ದು, ಅದರ ಸುಗಂಧಕ್ಕೆ ಆಕರ್ಷಿತವಾದ ದುಂಬಿಗಳು ಸುತ್ತಲೂ ಝೇಂಕರಿಸುತ್ತಿವೆ. ಇನ್ನೊಂದೆಡೆ ಸುಂದರವಾದ ಹಕ್ಕಿಗಳು ಮಧುರವಾಗಿ ಕಲ-ಕಲ ನಿನಾದ ಮಾಡುತ್ತಿವೆ. ಅವುಗಳ ಪ್ರತಿಧ್ವನಿಯಿಂದ ಸುಶೋಭಿತವಾದ ವೃಕ್ಷಗಳು ಈ ಸ್ಥಳದ ಶೋಭೆಯನ್ನು ಇನ್ನೂ ಹೆಚ್ಚಿಸಿವೆ. ॥ ೫ ॥

ಅತ್ರ ಭೋಕ್ತವ್ಯಮಸ್ಮಾಭಿರ್ದಿವಾ ರೂಢಂ ಕ್ಷುಧಾರ್ದಿತಾಃ ।
ವತ್ಸಾಃ ಸಮೀಪೇಽಪಃ ಪೀತ್ವಾ ಚರಂತು ಶನಕೈಸ್ತೃಣಮ್ ॥ ೬ ॥

ರಮ್ಯವಾದ ಈ ಸ್ಥಳದಲ್ಲಿ ನಾವೆಲ್ಲರೂ ಊಟಮಾಡೋಣ. ಹೊತ್ತು ಮೀರಿದ್ದು ನಾವೆಲ್ಲರೂ ಬಹಳವಾಗಿ ಹಸಿದಿದ್ದೇವೆ. ಕರುಗಳು ನೀರು ಕುಡಿದು ಇಲ್ಲಿಯೆ ಸಮೀಪದಲ್ಲೇ ಗರಿಕೆ ಹುಲ್ಲನ್ನು ಸಾವಧಾನವಾಗಿ ಮೇಯುತ್ತಿರಲಿ. ॥ ೬ ॥

ತಥೇತಿ ಪಾಯಯಿತ್ವಾರ್ಭಾ ವತ್ಸಾನಾರುಧ್ಯ ಶಾದ್ವಲೇ ।
ಮುಕ್ತ್ವಾ ಶಿಕ್ಯಾನಿ ಬುಭುಜುಃ ಸಮಂ ಭಗವತಾ ಮುದಾ ॥ ೭ ॥

ಗೋಪಬಾಲಕರೆಲ್ಲರೂ 'ಹಾಗೆಯೇ ಆಗಲೀ' ಎಂದು ಏಕಕಂಠದಿಂದ ಹೇಳುತ್ತಾ, ಕರುಗಳಿಗೆ ನೀರು ಕುಡಿಸಿ ಹಚ್ಚ ಹಸಿರಾಗಿದ್ದ ಹುಲ್ಲಿರುವಲ್ಲಿ ಮೇಯಲು ಬಿಟ್ಟರು. ತಾವು ತಂದಿದ್ದ ಬುತ್ತಿಗಳೆಲ್ಲವನ್ನು ಬಿಚ್ಚಿ ಶ್ರೀಕೃಷ್ಣನೊಡನೆ ಪರಮಾನಂದದಿಂದ ಊಟಮಾಡಲು ಪ್ರಾರಂಭಿಸಿದರು. ॥ ೭ ॥

ಕೃಷ್ಣಸ್ಯ ವಿಶ್ವಕ್ಪುರುರಾಜಿಮಂಡಲೈ-
ರಭ್ಯಾನನಾಃ ಫುಲ್ಲದೃಶೋ ವ್ರಜಾರ್ಭಕಾಃ ।
ಸಹೋಪವಿಷ್ಟಾ ವಿಪಿನೇ ವಿರೇಜು-
ಶ್ಛದಾ ಯಥಾಂಭೋರುಹಕರ್ಣಿಕಾಯಾಃ ॥ ೮ ॥

ಗೋಪಬಾಲಕರ ಮಧ್ಯದಲ್ಲಿ ಭಗವಾನ್ ಶ್ರೀಕೃಷ್ಣನು ಕುಳಿತಿದ್ದನು. ಗೋಪಬಾಲಕರು ಶ್ರೀಕೃಷ್ಣನ ಸುತ್ತಲೂ ಮಂಡಲಾಕಾರವಾಗಿ ಕುಳಿತಿದ್ದರು. ಎಲ್ಲರ ಮುಖಗಳೂ ಶ್ರೀಕೃಷ್ಣನ ಕಡೆಗೆ ಇದ್ದು, ಎಲ್ಲರ ಕಣ್ಣುಗಳು ಆನಂದದಿಂದ ವಿಕಸಿತವಾಗಿದ್ದವು. ವನ ಭೋಜನದ ಸಮಯ ಶ್ರೀಕೃಷ್ಣನೊಂದಿಗೆ ಕುಳಿತಿರುವ ಗೋಪಬಾಲಕರು ಕಮಲದ ಕರ್ಣಿಕೆಯ ಸುತ್ತಲು ಇರುವ ಎಸಳುಗಳಂತೆ ವಿರಾಜಿಸುತ್ತಿದ್ದರು. ॥ ೮ ॥

ಕೇಚಿತ್ಪುಷ್ಪೈರ್ದಲೈಃ ಕೇಚಿತ್ಪಲ್ಲವೈರಂಕುರೈಃ ಫಲೈಃ ।
ಶಿಗ್ಭಿಸ್ತ್ವಗ್ಭಿರ್ದೃಷದ್ಭಿಶ್ಚ ಬುಭುಜುಃ ಕೃತಭಾಜನಾಃ ॥ ೯ ॥

ಕೆಲವರು ಭೋಜನ ಮಾಡಲು ಅಗಲವಾದ ಹೂವುಗಳಿಂದಲೆ ತಟ್ಟೆಯನ್ನು ಮಾಡಿಕೊಂಡರೆ, ಕೆಲವರು ಎಸಳುಗಳಿಂದಲೂ, ಕೆಲವರು ಎಲೆಗಳಿಂದಲೂ, ಚಿಗುರುಗಳಿಂದಲೂ, ಹಣ್ಣುಗಳಿಂದಲೂ, ಬುತ್ತಿಯ ನೆಲವುಗಳಿಂದಲೂ, ಭೂರ್ಜಪತ್ರದಿಂದಲೂ, ಭೋಜನ ಪಾತ್ರೆಗಳನ್ನು ಮಾಡಿಕೊಂಡರು. ಕೆಲವರು ಅಗಲವಾದ ಕಲ್ಲನ್ನೇ ಭೋಜನ ಪಾತ್ರೆಯಾಗಿಸಿಕೊಂಡು ಭೋಜನ ಮಾಡ ತೊಡಗಿದರು. ॥ ೯ ॥

ಸರ್ವೇ ಮಿಥೋ ದರ್ಶಯಂತಃ ಸ್ವಸ್ವಭೋಜ್ಯರುಚಿಂ ಪೃಥಕ್ ।
ಹಸಂತೋ ಹಾಸಯಂತಶ್ಚಾಭ್ಯವಜಹ್ರುಃ ಸಹೇಶ್ವರಾಃ ॥ ೧೦ ॥

ಭಗವಾನ್ ಶ್ರೀಕೃಷ್ಣನು ಮತ್ತು ಗೋಪಬಾಲಕರೆಲ್ಲರೂ ಪರಸ್ಪರ ತಮ್ಮ-ತಮ್ಮ ಬುತ್ತಿಯ ಬೇರೆ-ಬೇರೆ ರುಚಿಗಳನ್ನು ಪ್ರದರ್ಶಿಸುತ್ತಿದ್ದರು. ಒಬ್ಬರು ಇನ್ನೊಬ್ಬರನ್ನು ನಗಿಸಿದರೆ ಕೆಲವರು ಸ್ವತಃ ನಗುತ್ತಾ-ನಗಿಸುತ್ತಾ ಆನಂದತುಂದಿಲರಾಗಿ ಶ್ರೀಕೃಷ್ಣನೊಂದಿಗೆ ಭೋಜನ ಮಾಡುತ್ತಿದ್ದರು. ॥ ೧೦ ॥

ಆ ಸಮಯದಲ್ಲಿ ಶ್ರೀಕೃಷ್ಣನ ಸ್ವರೂಪವು ಮನೋಹರವಾಗಿತ್ತು. ಅವನು ಮುರಳಿಯನ್ನು ಸೊಂಟದಲ್ಲಿ ಪೀತಾಂಬರಕ್ಕೆ ಸಿಕ್ಕಿಸಿದ್ದನು, ಕೊಂಬು ಮತ್ತು ಬೆತ್ತವನ್ನು ಎಡದ ಬಗಲಲ್ಲಿ ಒತ್ತಿಹಿಡಿದಿದ್ದನು. ಕೈಯಲ್ಲಿ ಕೆನೆ ಮೊಸರಿನ ಅನ್ನವಿತ್ತು. ಬೆರಳುಗಳಲ್ಲಿ ನಿಂಬೆ ಹಣ್ಣು-ಮಾವು ಮುಂತಾದ ಹಣ್ಣುಗಳ ಉಪ್ಪಿನಕಾಯಿಗಳನ್ನು ಜೋಡಿಸಿಕೊಂಡಿದ್ದನು. ಅವನ ಸುತ್ತಲೂ ಗೊಲ್ಲಬಾಲಕರಿದ್ದರು. ಅವರ ಮಧ್ಯದಲ್ಲಿ ಕುಳಿತ ಯಜ್ಞಭೋಕ್ತೃವಾದ ಶ್ರೀಕೃಷ್ಣನು

ಬಿಭ್ರದ್ವೇಣುಂ ಜಠರಪಟಯೋಃ ಶೃಂಗವೇತ್ರೇ ಚ ಕಕ್ಷೇ
ವಾಮೇ ಪಾಣೌ ಮಸೃಣಕವಲಂ ತತ್ಫಲಾನ್ಯಂಗುಲೀಷು ।
ತಿಷ್ಠನ್ಮಧ್ಯೇ ಸ್ವಪರಿಸುಹೃದೋ ಹಾಸಯನ್ನರ್ಮಭಿಃ ಸ್ವೈಃ
ಸ್ವರ್ಗೇ ಲೋಕೇ ಮಿಷತಿ ಬುಭುಜೇ ಯಜ್ಞಭುಗ್ಬಾಲಕೇಲಿಃ
॥ ೧೧ ॥

ವಿನೋದದ ಮಾತುಗಳನ್ನಾಡುತ್ತಾ ಅವರನ್ನು ನಗಿಸುತ್ತಾ, ತಾನೂ ನಗುತ್ತಾ ಅವರೊಡನೆ ಭೋಜನ ಮಾಡುತ್ತಿದ್ದನು. ಸ್ವರ್ಗಲೋಕದ ದೇವತೆಗಳು ಆಶ್ಚರ್ಯಚಕಿತರಾಗಿ ಭೋಜನದ ಲೀಲೆಯನ್ನು ವೀಕ್ಷಿಸುತ್ತಿದ್ದರು. ॥ ೧೧ ॥

ಭಾರತೈವಂ ವತ್ಸಪೇಷು ಭುಂಜಾನೇಷ್ವಚ್ಯುತಾತ್ಮಸು ।
ವತ್ಸಾಸ್ತ್ವಂತರ್ವನೇ ದೂರಂ ವಿವಿಶುಸ್ತೃಣಲೋಭಿತಾಃ
॥ ೧೨ ॥

ಭರತವಂಶ ಶಿರೋಮಣಿಯೇ ! ಹೀಗೆ ಶ್ರೀಕೃಷ್ಣನ ಲೀಲೆಗಳನ್ನು ನೋಡುತ್ತಾ ಭೋಜನಮಾಡುತ್ತಿದ್ದಾಗ ಗೋಪಬಾಲಕರು ಅವನಲ್ಲಿಯೇ ತನ್ಮಯರಾಗಿಬಿಟ್ಟರು. ಆ ವೇಳೆಗೆ ಮೇಯಲು ಬಿಟ್ಟಿದ್ದ ಕರುಗಳೆಲ್ಲವೂ ಹೊಸ-ಹೊಸ ಹಸಿರು ಹುಲ್ಲಿನ ಆಕರ್ಷಣೆಯಿಂದ ಬಹಳ ದೂರಕ್ಕೆ ಹೋಗಿಬಿಟ್ಟವು. ॥ ೧೨ ॥

ತಾನ್ದೃಷ್ಟ್ವಾ ಭಯಸಂತ್ರಸ್ತಾನೂಚೇ ಕೃಷ್ಣೋಽಸ್ಯ ಭೀಭಯಮ್ ।
ಮಿತ್ರಾಣ್ಯಾಶಾನ್ಮಾ ವಿರಮತೇಹಾನೇಷ್ಯೇ ವತ್ಸಕಾನಹಮ್
॥ ೧೩ ॥

ಬಾಲಕರ ಗಮನ ಕರುಗಳ ಕಡೆಗೆ ಹೋದಾಗ ಅವುಗಳನ್ನು ಕಾಣದೆ ಭಯಭ್ರಾಂತರಾದರು. ಆಗ ತನ್ನ ಭಕ್ತರ ಭಯವನ್ನು ಹೊಡೆದಟ್ಟುವ ಭಗವಾನ್ ಶ್ರೀಕೃಷ್ಣನು ಹೇಳಿದನು - 'ನನ್ನ ಪ್ರಿಯ ಮಿತ್ರರೇ! ಹೆದರಬೇಡಿರಿ. ನೀವು ಭೋಜನ ಮಾಡುವುದನ್ನು ನಿಲ್ಲಿಸಬೇಡಿ. ನಾನು ಈಗಾಗಲೇ ಕರುಗಳನ್ನು ಹೊಡೆದುಕೊಂಡು ಬರುತ್ತೇನೆ'. ॥ ೧೩ ॥

ಇತ್ಯುಕ್ತ್ವಾದ್ರಿದರೀಕುಂಜಗಹ್ವರೇಷ್ವಾತ್ಮವತ್ಸಕಾನ್ ।
ವಿಚಿನ್ವನ್ಭಗವಾನ್ಕೃಷ್ಣಃ ಸಪಾಣಿಕವಲೋ ಯಯೌ
॥ ೧೪ ॥

ಗೊಲ್ಲಬಾಲಕರಲ್ಲಿ ಹೀಗೆ ಹೇಳಿ ಭಗವಾನ್ ಶ್ರೀಕೃಷ್ಣನು ಕೈಯಲ್ಲಿ ಮೊಸರನ್ನದ ತುತ್ತನ್ನು ಎತ್ತಿಕೊಂಡೇ ಬೆಟ್ಟ-ಗುಡ್ಡಗಳಲ್ಲಿಯೂ, ಗುಹೆಗಳಲ್ಲಿಯೂ, ಪೊದರುಗಳಲ್ಲಿಯೂ ತನ್ನ ಮತ್ತು ಸಂಗಡಿಗರ ಕರುಗಳನ್ನು ಹುಡುಕತೊಡಗಿದನು. ॥ ೧೪ ॥

ಅಂಭೋಜನ್ಮಜನಿಸ್ತದಂತರಗತೋ ಮಾಯಾರ್ಭಕಸ್ಯೇಶಿತುಃ
ದ್ರಷ್ಟುಂ ಮಂಜು ಮಹಿತ್ವಮನ್ಯದಪಿ ತದ್ವತ್ಸಾನಿತೋ ವತ್ಸಪಾನ್ ।
ನೀತ್ವಾನ್ಯತ್ರ ಕುರೂದ್ವಹಾಂತರದಧಾತ್ಖೇಽವಸ್ಥಿತೋ ಯಃ ಪುರಾ
ದೃಷ್ಟ್ವಾಘಾಸುರಮೋಕ್ಷಣಂ ಪ್ರಭವತಃ ಪ್ರಾಪ್ತಃ ಪರಂ ವಿಸ್ಮಯಮ್
॥ ೧೫ ॥

ಪರೀಕ್ಷಿತನೇ! ಬ್ರಹ್ಮದೇವರು ಮೊದಲಿನಿಂದಲೇ ಆಕಾಶದಲ್ಲಿ ಉಪಸ್ಥಿರಾಗಿದ್ದು, ಪ್ರಭುವಿನ ಪ್ರಭಾವದಿಂದ ಅಘಾಸುರನ ಮೋಕ್ಷವನ್ನು ನೋಡಿ ಅವರಿಗೆ ಬಹಳ ಆಶ್ಚರ್ಯವಾಗಿತ್ತು. ಲೀಲಾಮಾನುಷ ಬಾಲಕನಾದ ಭಗವಾನ್ ಶ್ರೀಕೃಷ್ಣನ ಇತರ ಮನೋಹರವಾದ ಮಹಿಮಾಯುಕ್ತ ಲೀಲೆಯನ್ನು ನೋಡಬೇಕೆಂದು ಅವರು ಯೋಚಿಸಿದರು, ಹೀಗೆ ಆಲೋಚಿಸಿ ಮೊದಲಿಗೆ ಕರುಗಳನ್ನೂ ಹಾಗೂ ಶ್ರೀಕೃಷ್ಣನು ಹೊರಟುಹೋದ ಬಳಿಕ ಗೊಲ್ಲಬಾಲಕರನ್ನು ಬೇರೆ ಕಡೆಗೆಕೊಂಡುಹೋಗಿ ಅಡಗಿಸಿಟ್ಟು, ಸ್ವಯಂ ಅಂತರ್ಧಾನರಾದರು. ಎಷ್ಟಾದರೂ ಜಡವಾದ ಕಮಲಸಂಭವರಲ್ಲವೆ ? ॥ ೧೫ ॥

ತತೋ ವತ್ಸಾನದೃಷ್ಟ್ವೈತ್ಯ ಪುಲಿನೇಽಪಿ ಚ ವತ್ಸಪಾನ್ ।
ಉಭಾವಪಿ ವನೇ ಕೃಷ್ಣೋ ವಿಚಿಕಾಯ ಸಮಂತತಃ
॥ ೧೬ ॥

ಭಗವಾನ್ ಶ್ರೀಕೃಷ್ಣನು ಕಾಡು-ಮೇಡುಗಳಲ್ಲಿ, ಗುಹೆ-ಕಂದರಗಳಲ್ಲಿ ಹುಡುಕಿದರೂ ಕರುಗಳು ಸಿಗದಿರುವಾಗ, ಯಮುನಾ ತೀರದಲ್ಲಿದ್ದ ಗೋಪಬಾಲಕರ ಬಳಿಗೆ ಹಿಂದಿರುಗಿದನು. ಆದರೆ ಅಲ್ಲಿ ಗೋಪಬಾಲಕರೂ ಇರಲಿಲ್ಲ, ವಿಸ್ಮಿತನಾದ ಶ್ರೀಕೃಷ್ಣನು ಗೋಪಬಾಲಕರನ್ನೂ, ಕರುಗಳನ್ನೂ ಹುಡುಕಲು ಹೊರಟನು. ॥ ೧೬ ॥

ಕ್ವಾಪ್ಯದೃಷ್ಟ್ವಾಂತರ್ವಿಪಿನೇ ವತ್ಸಾನ್ಪಾಲಾಂಶ್ಚ ವಿಶ್ವವಿತ್ ।
ಸರ್ವಂ ವಿಧಿಕೃತಂ ಕೃಷ್ಣಃ ಸಹಸಾವಜಗಾಮ ಹ
॥ ೧೭ ॥

ಆದರೆ ಗೊಲ್ಲಬಾಲಕರೂ, ಕರುಗಳೂ ಅವನಿಗೆ ಸಿಗದಿರುವಾಗ, ಅವನು ಇದೆಲ್ಲವೂ ಬ್ರಹ್ಮನದೇ ಕೆಲಸ. ಅವನೇ ಇವರನ್ನು ಬಚ್ಚಿಟ್ಟಿರುವನೆಂದು ಕೂಡಲೇ ತಿಳಿದುಕೊಂಡನು. ಅವನಾದರೋ ವಿಶ್ವದ ಏಕಮಾತ್ರ ಜ್ಞಾತೃವಾಗಿದ್ದನು, ವಿಶ್ವವಿದನಾಗಿದ್ದನು. ॥ ೧೭ ॥ ವಿಶ್ವವನ್ನೇ ಸೃಷ್ಟಿಸುವ ಸಾಮರ್ಥ್ಯವನ್ನು ಹೊಂದಿದ್ದ ವಿಶ್ವಕರ್ತೃವಾದ ಶ್ರೀಕೃಷ್ಣನು ಗೋಪಬಾಲಕರ ತಾಯಂದಿರಿಗೂ, ಗೋವುಗಳಿಗೂ, ಬ್ರಹ್ಮನಿಗೂ ತನ್ನ ಲೀಲೆಯನ್ನು ತೋರಿಸಿ ಆನಂದಗೊಳಿಸಬೇಕೆಂಬ

ತತಃ ಕೃಷ್ಣೋ ಮುದಂ ಕರ್ತುಂ ತನ್ಮಾತೄಣಾಂ ಚ ಕಸ್ಯ ಚ ।
ಉಭಯಾಯಿತಮಾತ್ಮಾನಂ ಚಕ್ರೇ ವಿಶ್ವಕೃದೀಶ್ವರಃ ॥ ೧೮ ॥

ಆಶಯದಿಂದ, ಕ್ಷಣಮಾತ್ರದಲ್ಲಿ ಗೋಪಬಾಲಕರಾಗಿ, ಕರುಗಳಾಗಿ ತಾನೇ ಆಗಿಬಿಟ್ಟನು.* ॥ ೧೮ ॥ ಪರೀಕ್ಷಿತನೇ! ಆ ಬಾಲಕರು ಮತ್ತು ಕರುಗಳು ಮೊದಲು ಎಷ್ಟು ಸಂಖ್ಯೆಯಲ್ಲಿದ್ದರೋ ಈಗಲೂ ಅಷ್ಟೇ ಸಂಖ್ಯೆಯಲ್ಲಿದ್ದರು. ಗೋಪಬಾಲಕರ ಮತ್ತು ಕರುಗಳ ಶರೀರಗಳು ಎಷ್ಟು ಗಾತ್ರದಲ್ಲಿದ್ದವೋ, ಯಾವ ಬಣ್ಣದಲ್ಲಿದ್ದವೋ ಈಗಲೂ ಅದೇ ಬಣ್ಣ, ಗಾತ್ರದಿಂದ ಕಂಗೊಳಿಸುತ್ತಿದ್ದವು. ಕೋಲು, ಕೊಂಬು, ಕೊಳಲು, ತಲೆಯಲ್ಲಿ ಸಿಂಗರಿಸಿಕೊಂಡಿದ್ದ ಚಿಗುರುಗಳು, ನವಿಲುಗರಿಗಳು, ಬುತ್ತಿ, ಉಡಿಗೆ-ತೊಡಿಗೆಗಳು, ನಡೆ-ನುಡಿಗಳು, ಗುಣಗಳು, ಹೆಸರುಗಳು, ಆಕಾರಗಳು, ವಯಸ್ಸು ಎಲ್ಲವೂ ಯಥಾವತ್ತಾಗಿಯೇ ಇದ್ದವು. ಹಿಂದೆ ಆಡುತ್ತಿದ್ದ ಆಟಗಳನ್ನೇ ಆಡುತ್ತಿದ್ದ, ಅಷ್ಟೇ ರೂಪಗಳಲ್ಲಿ ಸರ್ವಸ್ವರೂಪನಾದ ಭಗವಾನ್ ಶ್ರೀಕೃಷ್ಣನು ಪ್ರಕಟನಾದನು. **'ಸರ್ವಂ ವಿಷ್ಣುಮಯಂ ಜಗತ್'** ಎಂಬ ವೇದವಾಣಿಯು ಮೂರ್ತಿಭವಿಸಿತೋ ಎಂಬಂತೆ ಪ್ರಕಟವಾಗಿತ್ತು. ॥ ೧೯ ॥ ಸರ್ವಾತ್ಮನಾದ ಭಗವಂತನೇ ಸ್ವತಃ ಕರುಗಳಾದನು, ಸ್ವತಃ ಗೋಪಬಾಲಕರಾದನು. ತನ್ನ ಆತ್ಮ ಸ್ವರೂಪವಾದ ಕರುಗಳನ್ನೂ, ಆತ್ಮಸ್ವರೂಪರಾದ ಗೊಲ್ಲಬಾಲಕರನ್ನು ಸುತ್ತುವರೆದು ತನ್ನೊಡನೆ ಅನೇಕ ರೀತಿಯ ಆಟಗಳನ್ನಾಡುತ್ತಾ ಶ್ರೀಕೃಷ್ಣನು ಗೊಲ್ಲರಹಟ್ಟಿಯನ್ನು ಪ್ರವೇಶಿಸಿದನು. ॥ ೨೦ ॥ ಪರೀಕ್ಷಿತನೇ! ಒಂದೊಂದು ಕರುವನ್ನು ಪ್ರತ್ಯೇಕ-ಪ್ರತ್ಯೇಕವಾಗಿ ಆಯಾ ಮನೆಗಳಿಗೆ ಸೇರಿಸಿದನು. ಅಂತೆಯೇ ಆತ್ಮಸ್ವರೂಪರಾದ ಗೋಪಬಾಲಕರನ್ನು ಅವರವರ ಮನೆಗೆ ಸೇರುವಂತೆ ಮಾಡಿದನು. ಎಂದಿನಂತೆ ಕೃಷ್ಣಭೂತರಾದ ಗೋಪಬಾಲಕರು ಕೊಳಲನ್ನು ಊದಿಕೊಂಡೇ ಮನೆಗೆ ಬಂದರು. ॥ ೨೧ ॥

ಯಾವದ್ವತ್ಸಪವತ್ಸಕಾಲ್ಪಕವಪುರ್ಯಾವತ್ಕರಾಂಘ್ರ್ಯಾದಿಕಂ
ಯಾವದ್ಯಷ್ಟಿವಿಷಾಣವೇಣುದಲಶಿಗ್ಯಾವದ್ವಿಭೂಷಾಂಬರಮ್ ।
ಯಾವಚ್ಛೀಲಗುಣಾಭಿಧಾಕೃತಿವಯೋ ಯಾವದ್ವಿಹಾರಾದಿಕಂ
ಸರ್ವಂ ವಿಷ್ಣುಮಯಂ ಗಿರೋಽಂಗವದಜಃ ಸರ್ವಸ್ವರೂಪೋ ಬಭೌ ॥ ೧೯ ॥

ಸ್ವಯಮಾತ್ಮಾಽಽತ್ಮಗೋವತ್ಸಾನ್ಪ್ರತಿವಾರ್ಯಾತ್ಮವತ್ಸಪೈಃ ।
ಕ್ರೀಡನ್ನಾತ್ಮವಿಹಾರೈಶ್ಚ ಸರ್ವಾತ್ಮಾ ಪ್ರಾವಿಶದ್ವ್ರಜಮ್ ॥ ೨೦ ॥

ತತ್ತದ್ವತ್ಸಾನ್ಪೃಥಙ್ನೀತ್ವಾ ತತ್ತದ್ಗೋಷ್ಠೇ ನಿವೇಶ್ಯ ಸಃ ।
ತತ್ತದಾತ್ಮಾಭವದ್ರಾಜಂಸ್ತತ್ತತ್ಸದ್ಮ ಪ್ರವಿಷ್ಟವಾನ್ ॥ ೨೧ ॥

ಕೊಳಲಿನ ಧ್ವನಿಯನ್ನು ಕೇಳುತ್ತಲೇ ಗೋಪಿಯರು ತಟ್ಟನೆ ಮೇಲೆದ್ದು, ಪರಬ್ರಹ್ಮನಾದ ಶ್ರೀಕೃಷ್ಣನ ಸ್ವರೂಪಿಗಳಾಗಿದ್ದ ಗೋಪ ಬಾಲಕರನ್ನು ತಮ್ಮ ಮಕ್ಕಳೆಂದೇ ಭಾವಿಸಿ, ತೋಳುಗಳಿಂದ ಬಾಚಿತಬ್ಬಿಕೊಂಡು ಅಮೃತಕ್ಕಿಂತಲೂ ಮಧುರವಾಗಿದ್ದ ಆಸವ ಕ್ಕಿಂತಲೂ ಹೆಚ್ಚು ಮದವನ್ನುಂಟುಮಾಡುವಂತಹ, ವಾತ್ಸಲ್ಯಪೂರ್ಣ ವಾದ ಸ್ತನ್ಯವನ್ನು ಅವರಿಗೆ ಉಣಿಸಿದರು. ॥ ೨೨ ॥ ಪರೀಕ್ಷಿತನೇ! ಈ ಪ್ರಕಾರವಾಗಿ ಪ್ರತಿದಿನವೂ ಸಾಯಂಕಾಲ ಭಗವಾನ್ ಶ್ರೀಕೃಷ್ಣನು ಆ ಗೊಲ್ಲಬಾಲಕರ ರೂಪದಲ್ಲಿ ಕಾಡಿನಿಂದ ಮರಳಿ ಬಂದು ತನ್ನ ಬಾಲಸುಲಭವಾದ ಲೀಲೆಗಳಿಂದ ತಾಯಂದಿರನ್ನು ಆನಂದಗೊಳಿಸುತ್ತಿದ್ದನು. ಆ ತಾಯಂದಿರೂ ಕೂಡ ತಮ್ಮ ಆ ಮುದ್ದುಕಂದಮ್ಮರಿಗೆ ಸ್ನಾನಮಾಡಿಸುತ್ತಿದ್ದರು. ಅವರ ಪುಟ್ಟ ಕಾಲುಗಳನ್ನು ಒತ್ತುತ್ತಿದ್ದರು. ಅವರಿಗೆ ಗಂಧವನ್ನು ಪೂಸಿ, ಅಲಂಕರಿಸುತ್ತಿದ್ದರು. ತಿಲಕವಿಟ್ಟು ರಕ್ಷೆಯನ್ನಿಡುತ್ತಿದ್ದರು. ಭೋಜನ ಮಾಡಿಸುತ್ತಿದ್ದರು. ಇವೇ ಮುಂತಾದ ಉಪಚಾರಗಳಿಂದ ಸಾಕ್ಷಾತ್ ಶ್ರೀಕೃಷ್ಣನನ್ನೇ ಲಾಲಿಸುತ್ತಿದ್ದರು. ॥ ೨೩ ॥

ತನ್ಮಾತರೋ ವೇಣುರವತ್ವರೋತ್ಥಿತಾ
ಉತ್ಥಾಪ್ಯ ದೋರ್ಭಿಃ ಪರಿರಭ್ಯ ನಿರ್ಭರಮ್ ।
ಸ್ನೇಹಸ್ನುತಸ್ತನ್ಯಪಯಃಸುಧಾಸವಂ
ಮತ್ವಾ ಪರಂ ಬ್ರಹ್ಮ ಸುತಾನಪಾಯಯನ್ ॥ ೨೨ ॥

ತೈಸ್ತೈಃ ನೃಪೋನ್ಮರ್ದನಮಜ್ಜಲೇಪನಾ-
ಲಂಕಾರರಕ್ಷಾತಿಲಕಾಶನಾದಿಭಿಃ ।
ಸಂಲಾಲಿತಃ ಸ್ವಾಚರಿತೈಃ ಪ್ರಹರ್ಷಯನ್
ಸಾಯಂ ಗತೋ ಯಾಮಯಮೇನ ಮಾಧವಃ ॥ ೨೩ ॥

* ಭಗವಂತನು ಸರ್ವಸಮರ್ಥನಾಗಿದ್ದಾನೆ. ಅವನು ಬ್ರಹ್ಮನು ಕದ್ದುಕೊಂಡುಹೋದ ಬಾಲಕರನ್ನು, ಕರುಗಳನ್ನು ತರಬಲ್ಲನಾಗಿದ್ದರೂ ಇದರಿಂದ ಬ್ರಹ್ಮನ ಮೋಹ ದೂರವಾಗುತ್ತಿರಲಿಲ್ಲ, ಅವನು ಭಗವಂತನ ಆ ದಿವ್ಯ ಮಾಯಾ ಐಶ್ವರ್ಯವನ್ನು ನೋಡದೇ ಅವನ ವಿಶ್ವಕರ್ತೃತ್ವವೆಂಬ ಅಭಿಮಾನವು ದೂರವಾಗುತ್ತಿರಲಿಲ್ಲ. ಅದಕ್ಕಾಗಿ ಭಗವಂತನು ಅದೇ ಗೊಲ್ಲಬಾಲಕರನ್ನೂ, ಕರುಗಳನ್ನೂ ತಾರದೆ ಸ್ವತಃ ಅವರಂತೆಯೇ ಅಷ್ಟೇ ಬಾಲಕರೂ, ಕರುಗಳೂ ಆಗಿಬಿಟ್ಟನು.

ಗಾವಸ್ತತೋ ಗೋಷ್ಠಮುಪೇತ್ಯ ಸತ್ವರಂ
ಹುಂಕಾರಘೋಷೈಃ ಪರಿಹೂತಸಂಗತಾನ್ ।
ಸ್ವಕಾನ್ಸ್ವಕಾನ್ವತ್ಸತರಾನಪಾಯಯನ್
ಮುಹುರ್ಲಿಹಂತ್ಯಃ ಸ್ರವದೌಧಸಂ ಪಯಃ ॥ ೨೪ ॥

ಗೋಗೋಪೀನಾಂ ಮಾತೃತಾಸ್ಮಿನ್ಸರ್ವಾ ಸ್ನೇಹರ್ಧಿಕಾಂ ವಿನಾ ।
ಪುರೋವದಾಸ್ವಪಿ ಹರೇಸ್ತೋಕತಾ ಮಾಯಯಾ ವಿನಾ
॥ ೨೫ ॥

ವ್ರಜೌಕಸಾಂ ಸ್ವತೋಕೇಷು ಸ್ನೇಹವಲ್ಲ್ಯಾಬ್ದಮನ್ವಹಮ್ ।
ಶನೈರ್ನಿಃಸೀಮ ವವೃಧೇ ಯಥಾ ಕೃಷ್ಣೇ ತ್ವಪೂರ್ವವತ್
॥ ೨೬ ॥

ಇತ್ಥಮಾತ್ಮಾಽಽತ್ಮನಾಽಽತ್ಮಾನಂ ವತ್ಸಪಾಲಮಿಷೇಣ ಸಃ ।
ಪಾಲಯನ್ವತ್ಸಪೋ ವರ್ಷಂ ಚಿಕ್ರೀಡೇ ವನಗೋಷ್ಠಯೋಃ
॥ ೨೭ ॥

ಏಕದಾ ಚಾರಯನ್ವತ್ಸಾನ್ಸರಾಮೋ ವನಮಾವಿಶತ್ ।
ಪಂಚಷಾಸು ತ್ರಿಯಾಮಾಸು ಹಾಯನಾಪೂರಣೀಷ್ವಜಃ
॥ ೨೮ ॥

ತತೋ ವಿದೂರಾಚ್ಚರತೋ ಗಾವೋ ವತ್ಸಾನುಪವ್ರಜಮ್ ।
ಗೋವರ್ಧನಾದ್ರಿಶಿರಸಿ ಚರಂತ್ಯೋ ದದೃಶುಸ್ತೃಣಮ್
॥ ೨೯ ॥

ದೃಷ್ಟ್ವಾಥ ತತ್ಸ್ನೇಹವಶೋಽಸ್ಮೃತಾತ್ಮಾ
ಸ ಗೋವ್ರಜೋಽತ್ಯಾತ್ಮಪದುರ್ಗಮಾರ್ಗಃ ।
ದ್ವಿಪಾತ್ಕಕುದ್ಗ್ರೀವ ಉದಾಸ್ಯಪುಚ್ಛೋಽ-
ಗಾದ್ಧುಂಕೃತೈರಾಸ್ರುಪಯಾ ಜವೇನ ॥ ೩೦ ॥

ಸಮೇತ್ಯ ಗಾವೋಽಧೋ ವತ್ಸಾನ್ವತ್ಸವತ್ಯೋಽಪ್ಯಪಾಯಯನ್ ।
ಗಿಲಂತ್ಯ ಇವ ಚಾಂಗಾನಿ ಲಿಹಂತ್ಯಃ ಸ್ವೌಧಸಂ ಪಯಃ
॥ ೩೧ ॥

ಗೋಪಿಯರಿಗೆ ತಾವು ಗೋಪಬಾಲಕನ ರೂಪದಲ್ಲಿರುವ ಶ್ರೀಕೃಷ್ಣನಿಗೆ ಮೊಲೆಯುಣಿಸುತ್ತಿದ್ದೇವೆಂಬುದು ತಿಳಿಯದಿದ್ದ ಮೇಲೆ ಹಸುಗಳಾದರೂ ಹೇಗೆ ತಿಳಿಯಬಲ್ಲವು? ಶ್ರೀಕೃಷ್ಣನೇ ಕರುಗಳಾಗಿ ಕೊಟ್ಟಿಗೆಗೆ ಬಂದಾಕ್ಷಣ ಆ ಹಸುಗಳು ವಾತ್ಸಲ್ಯದಿಂದ 'ಹಂಬಾ!' ಎಂದು ಕೂಗುವುವು. ಕರುಗಳು ತಾಯಂದಿರ ಬಳಿಗೆ ನಾಗಾಲೋಟದಿಂದ ಓಡಿಹೋಗುವುವು. ಹಾಗೇ ತಮ್ಮ ಬಳಿಗೆ ಓಡಿ ಬಂದಿರುವ ಕರುಗಳನ್ನು ಅಕ್ಕರೆಯಿಂದ ನೆಕ್ಕುತ್ತಾ, ಕೆಚ್ಚಲಿನಿಂದ ಒಸರುತ್ತಿರುವ ಅಮೃತೋಪಮವಾದ ಹಾಲನ್ನು ಅವುಗಳಿಗೆ ಉಣಿಸುತ್ತಿದ್ದವು. ॥ ೨೪ ॥ ಈ ಹಸುಗಳಲ್ಲಿ ಮತ್ತು ಗೋಪಿಯರಲ್ಲಿ ಮಾತೃಭಾವವೂ ಮೊದಲಿನಿಂದಲೇ ವಿಶುದ್ಧವಾಗಿತ್ತು, ಆದರೂ ಈಗ ತಮ್ಮ ಮಕ್ಕಳ, ಕರುಗಳ ಕುರಿತು ಅವರ ಸ್ನೇಹ ಖಂಡಿತವಾಗಿ ಹೆಚ್ಚಾಗಿತ್ತು. ಹೀಗೆಯೇ ಭಗವಂತನೂ ಮೊದಲಿನ ಮಕ್ಕಳಂತೆ ಪುತ್ರಭಾವವನ್ನು ತೋರುತ್ತಿದ್ದನು. ಆದರೆ ಭಗವಂತನಲ್ಲಿ ಆ ಬಾಲಕರಂತೆ 'ನಾನು ಇವರ ಮಗನಾಗಿದ್ದೇನೆ' ಎಂಬ ಮೋಹ ಭಾವವಿರಲಿಲ್ಲ. ॥ ೨೫ ॥ ತಮ್ಮ-ತಮ್ಮ ಬಾಲಕರ ಕುರಿತು ವ್ರಜವಾಸಿಗಳ ಸ್ನೇಹಲತೆಯು ಪ್ರತಿದಿನವೂ ಒಂದು ವರ್ಷದವರೆಗೆ ಬೆಳೆಯುತ್ತಲೇ ಇತ್ತು. ಮೊದಲಿಗೆ ಶ್ರೀಕೃಷ್ಣನಲ್ಲಿ ಅವರಿಗಿದ್ದ ಅಸೀಮ ಹಾಗೂ ಅಪೂರ್ವ ಪ್ರೇಮದಂತೆ ತಮ್ಮ ಈ ಬಾಲಕರ ವಿಷಯದಲ್ಲಿಯೂ ಉಂಟಾಯಿತು. ॥ ೨೬ ॥ ಹೀಗೆ ಸರ್ವಾತ್ಮನಾದ ಶ್ರೀಕೃಷ್ಣನು ಕರುಗಳು ಮತ್ತು ಗೋಪಬಾಲಕರ ನೆಪದಿಂದ ಗೋಪಾಲನಾಗಿ ತನ್ನ ಬಾಲಕರೂಪದಿಂದ ಕರುಗಳನ್ನು ಪಾಲಿಸುತ್ತಾ ಒಂದು ವರ್ಷದವರೆಗೆ ವೃಂದಾವನದಲ್ಲಿ, ಹಟ್ಟಿಗಳಲ್ಲಿ ಕ್ರೀಡಿಸುತ್ತಿದ್ದನು. ॥ ೨೭ ॥

ಒಂದು ವರ್ಷ ತುಂಬಲು ಇನ್ನೂ ಐದಾರು ದಿನಗಳಿರುವಾಗ ಒಂದು ದಿನ ಭಗವಾನ್ ಶ್ರೀಕೃಷ್ಣನು ಬಲರಾಮನೊಂದಿಗೆ ಕರುಗಳನ್ನು ಮೇಯಿಸುತ್ತಾ ಕಾಡಿಗೆ ಹೋದನು. ॥ ೨೮ ॥ ಆ ಸಮಯದಲ್ಲಿ ಹಸುಗಳು ಗೋವರ್ಧನದ ತಪ್ಪಲಿನಲ್ಲಿ ಹುಲ್ಲು ಮೇಯುತ್ತಿದ್ದವು. ಅವು ಅಲ್ಲಿಂದಲೇ ಬಹುದೂರದಲ್ಲಿ ಹಳ್ಳಿಯ ಸಮೀಪದಲ್ಲಿ ಕರುಗಳು ಹುಲ್ಲು ಮೇಯುತ್ತಿರುವುದನ್ನು ನೋಡಿದವು. ॥ ೨೯ ॥ ಕರುಗಳನ್ನು ನೋಡುತ್ತಲೇ ಹಸುಗಳಿಗೆ ತಮ್ಮ ಕರುಗಳಲ್ಲಿದ್ದ ವಾತ್ಸಲ್ಯ-ಸ್ನೇಹವು ಉಕ್ಕಿ ಹರಿಯಿತು. ಅವುಗಳಿಗೆ ಮೈಮೇಲೆ ಪ್ರಜ್ಞೆಯೇ ಉಳಿಯಲಿಲ್ಲ. ಮೇಯುವುದನ್ನು ನಿಲ್ಲಿಸಿ ಗೋಪಾಲಕರು ತಡೆಯುತ್ತಿರುವುದನ್ನು ಲೆಕ್ಕಿಸದೆ, ಹಳ್ಳ-ಕೊಳ್ಳಗಳನ್ನು ಪರಿಗಣಿಸದೆ, ಗೋಪಾಲಕರೂ ಹೋಗಲಾಗದ ಮಾರ್ಗದಿಂದ, ಕೊರಳನ್ನೂ, ಮುಖ-ಬಾಲಗಳನ್ನು ಎತ್ತಿಕೊಂಡು ಎರಡು ಕಾಲಿನ ಪ್ರಾಣಿಗಳಂತೆ ಅತ್ಯಂತ ವೇಗವಾಗಿ ಹಾಲನ್ನು ಸುರಿಸುತ್ತಾ 'ಹಂಬಾ' ಎಂದು ಕೂಗಿಕೊಳ್ಳುತ್ತಾ ಕರುಗಳಿದ್ದೆಡೆಗೆ ಬಂದು ಸೇರಿದವು. ॥ ೩೦ ॥ ಆ ಹಸುಗಳಿಗೆ ಕೆಲವು ದಿನಗಳ ಹಿಂದೆ ಹುಟ್ಟಿದ್ದ ಚಿಕ್ಕ ಕರುಗಳಿದ್ದರೂ, ಹಳ್ಳಿಯ ಸಮೀಪದಲ್ಲಿದ್ದ ದೊಡ್ಡ ಕರುಗಳನ್ನು ಅತ್ಯಂತ ವಾತ್ಸಲ್ಯದಿಂದ ನೆಕ್ಕುತ್ತಾ ಅವುಗಳಿಗೆ ಹಾಲುಣಿಸತೊಡಗಿದವು. ಅವುಗಳನ್ನು ನೆಕ್ಕುತ್ತಿರುವುದನ್ನು ನೋಡಿದರೆ ಪ್ರೀತಿಯಿಂದ ಅವನ್ನು ನುಂಗಿಬಿಡುತ್ತವೆಯೋ ಎಂಬಂತೆ ಕಾಣುತ್ತಿದ್ದುವು. ॥ ೩೧ ॥

ಗೋಪಾಸ್ತದ್ರೋಧನಾಯಾಸಮೌಘ್ಯಲಜ್ಜೋರುಮನ್ಯುನಾ ।
ದುರ್ಗಾಧ್ವಕೃಚ್ಛ್ರತೋಽಭ್ಯೇತ್ಯ ಗೋವತ್ಸೈರ್ದದೃಶುಃ ಸುತಾನ್
॥ ೩೨ ॥

ಗೋಪಾಲಕರು ಅವನ್ನು ತಡೆಯಲು ಬಹಳ ಪ್ರಯತ್ನ ಮಾಡಿದರೂ, ಅವರ ಪ್ರಯತ್ನ ವ್ಯರ್ಥವೇ ಆಯಿತು. ಇದರಿಂದ ತಮ್ಮ ವಿಫಲತೆಯ ಕುರಿತು ಅವರಿಗೆ ನಾಚಿಕೆ ಉಂಟಾಗಿ, ಹಸುಗಳ ಮೇಲೆ ಸ್ವಲ್ಪ ಸಿಟ್ಟೂ ಬಂದಿತ್ತು. ಅವರೆಲ್ಲರೂ ಅತ್ಯಂತ ಕಷ್ಟಪಟ್ಟು ದುರ್ಗಮವಾದ ಮಾರ್ಗದಿಂದ ಹಸುಗಳಿದ್ದಲ್ಲಿಗೆ ಬಂದಾಗ ಅವರು ಕರುಗಳೊಂದಿಗೆ ತಮ್ಮ ಬಾಲಕರನ್ನು ಅಲ್ಲಿ ನೋಡಿದರು. ॥ ೩೨ ॥

ತದೀಕ್ಷಣೋತ್ಪ್ರೇಮರಸಾಪ್ಲುತಾಶಯಾ
ಜಾತಾನುರಾಗಾ ಗತಮನ್ಯವೋಽರ್ಭಕಾನ್ ।
ಉದೂಹ್ಯ ದೋರ್ಭಿಃ ಪರಿರಭ್ಯ ಮೂರ್ಧನಿ
ಘ್ರಾಣೈರವಾಪುಃ ಪರಮಾಂ ಮುದಂ ತೇ ॥ ೩೩ ॥

ತಮ್ಮ ಮಕ್ಕಳನ್ನು ನೋಡುತ್ತಲೇ ಅವರ ಹೃದಯ ಪ್ರೇಮರಸದಿಂದ ತುಂಬಿ ಹೋಯಿತು. ಬಾಲಕರ ಕುರಿತು ಅನುರಾಗದ ನೆರೆಯೇ ಉಕ್ಕಿಬಂತು. ಅವರಲ್ಲಿದ್ದ ಸಿಟ್ಟು ಎಲ್ಲಿಗೆ ಹೋಯಿತೋ ತಿಳಿಯದು. ಅವರೆಲ್ಲರೂ ತಮ್ಮ-ತಮ್ಮ ಮಕ್ಕಳನ್ನು ತೊಡೆಯಲ್ಲೆತ್ತಿಕೊಂಡು, ಎದೆಗೆ ಅವಚಿಕೊಂಡು, ಅವರ ನೆತ್ತಿಯನ್ನು ಮೂಸುತ್ತಾ ಅತ್ಯಂತ ಆನಂದಿತರಾದರು. ॥ ೩೩ ॥

ತತಃ ಪ್ರವಯಸೋ ಗೋಪಾಸ್ತೋಕಾಶ್ಲೇಷಸುನಿರ್ವೃತಾಃ ।
ಕೃಚ್ಛ್ರಾಚ್ಛನೈರಪಗತಾಸ್ತದನುಸ್ಮೃತ್ಯುದಶ್ರವಃ
॥ ೩೪ ॥

ಪುತ್ರಾಲಿಂಗನದಿಂದ ಆನಂದತುಂದಿಲರಾದ ವೃದ್ಧಗೋಪಾಲಕರಿಗೆ ಬಿಟ್ಟು ಹೋಗಲು ಸಾಧ್ಯವಾಗಲೇ ಇಲ್ಲ, ಬಹಳ ಕಷ್ಟಪಟ್ಟು ಅವರನ್ನು ಬಿಟ್ಟು ಅಗಲಿ ಹೊರಟರು. ಬಿಟ್ಟು ಹೋಗುವಾಗ ಮಕ್ಕಳನ್ನೂ, ಅವರ ಆಲಿಂಗನದ ಸೌಖ್ಯವನ್ನು ನೆನೆಯುತ್ತಾ ಕಣ್ಣುಗಳಿಂದ ಆನಂದಬಾಷ್ಪಗಳನ್ನು ಸುರಿಸಿದರು. ॥ ೩೪ ॥

ವ್ರಜಸ್ಯ ರಾಮಃ ಪ್ರೇಮರ್ಧೇರ್ವೀಕ್ಷ್ಯೌತ್ಕಂಠ್ಯಮನುಕ್ಷಣಮ್ ।
ಮುಕ್ತಸ್ತನೇಷ್ವಪತ್ಯೇಷ್ವಪ್ಯಹೇತುವಿದಚಿಂತಯತ್
॥ ೩೫ ॥

ಗೋಪಬಾಲಕರು ತಾಯಿಯ ಹಾಲು ಕುಡಿಯುವ ಹಸುಳೆಗಳಾಗಿರಲಿಲ್ಲ, ಆದರೂ ಗೋಪ-ಗೋಪಿಯರಿಗೆ ಅವರ ಮೇಲೆ ಪ್ರೀತಿಯು ಕ್ಷಣ-ಕ್ಷಣಕ್ಕೂ ಹೆಚ್ಚುತ್ತಲೇ ಇತ್ತು. ಗೋವುಗಳಿಗೆ ಬೆಳೆದ ಕರುಗಳ ಮೇಲೆ ಚಿಕ್ಕ ಕರುಗಳಂತೆ ವಾತ್ಸಲ್ಯವು ಹೆಚ್ಚುತ್ತಲೇ ಇತ್ತು. ಇದನ್ನು ನೋಡಿದ ಬಲರಾಮನು 'ಇದಕ್ಕೇನು ಕಾರಣವಿರಬಹುದು ?' ಎಂದು ಯೋಚಿಸತೊಡಗಿದನು. ॥ ೩೫ ॥

ಕಿಮೇತದದ್ಭುತಮಿವ ವಾಸುದೇವೇಽಖಿಲಾತ್ಮನಿ ।
ವ್ರಜಸ್ಯ ಸಾತ್ಮನಸ್ತೋಕೇಷ್ವಪೂರ್ವಂ ಪ್ರೇಮವರ್ಧತೇ
॥ ೩೬ ॥

ಇದೆಂತಹ ಅದ್ಭುತವು ಕಂಡುಬರುತ್ತಿದೆ! 'ಸರ್ವಾತ್ಮನಾದ ಶ್ರೀಕೃಷ್ಣನಲ್ಲಿ ನನಗೂ, ಈ ವ್ರಜವಾಸಿಗಳಿಗೂ ಅಪೂರ್ವವಾದ, ಅನಿರ್ವಾಚ್ಯವಾದ ಪ್ರೇಮವಿರುವಂತೆಯೇ ಈ ಬಾಲಕರ ಮೇಲೆ ಮತ್ತು ಕರುಗಳ ಮೇಲೆಯೂ ಪ್ರೇಮವು ಹೆಚ್ಚುತ್ತಾ ಹೋಗುತ್ತಿದೆಯಲ್ಲ! ॥ ೩೬ ॥

ಕೇಯಂ ವಾ ಕುತ ಆಯಾತಾ
ದೈವೀ ವಾ ನಾರ್ಯುತಾಸುರೀ ।
ಪ್ರಾಯೋ ಮಾಯಾಸ್ತು ಮೇ ಭರ್ತುರ್
ನಾನ್ಯಾ ಮೇಽಪಿ ವಿಮೋಹಿನೀ ॥ ೩೭ ॥

ಇದೆಂತಹ ಮಾಯೆ ? ಎಲ್ಲಿಂದ ಬಂದಿದೆ ? ಇದು ಯಾವುದಾದರೂ ದೇವತೆಯದೋ, ಮನುಷ್ಯರದೋ, ಅಸುರರ ಮಾಯೆಯೋ ? ಇಲ್ಲ; ಇಲ್ಲ; ಇದು ಬೇರೆ ಯಾರ ಮಾಯೆಯೂ ಅಲ್ಲ, ನನ್ನನ್ನು ಕೂಡ ವಿಮೋಹಗೊಳಿಸುತ್ತಿರುವ ಈ ಮಹಾಮಾಯೆಯು ನನ್ನ ಒಡೆಯನಾದ ಶ್ರೀಕೃಷ್ಣನದೇ ಆಗಿರಬೇಕು. ॥ ೩೭ ॥

ಇತಿ ಸಂಚಿಂತ್ಯ ದಾಶಾರ್ಹೋ ವತ್ಸಾನ್ಸವಯಸಾನಪಿ ।
ಸರ್ವಾನಾಚಷ್ಟ ವೈಕುಂಠಂ ಚಕ್ಷುಷಾ ವಯುನೇನ ಸಃ
॥ ೩೮ ॥

ಬಲರಾಮನು ಹೀಗೆ ವಿಚಾರಮಾಡಿ, ಜ್ಞಾನದೃಷ್ಟಿಯಿಂದ ಗೋಪಬಾಲಕರನ್ನು, ಕರುಗಳನ್ನು ನೋಡಿದಾಗ- ಇವೆಲ್ಲ ಕರುಗಳ, ಗೋಪಬಾಲಕರ ರೂಪದಲ್ಲಿ ಕೇವಲ ಶ್ರೀಕೃಷ್ಣನೋರ್ವನೇ ಆಗಿರುವನೆಂದು ತಿಳಿದುಕೊಂಡನು. ॥ ೩೮ ॥ ಹೀಗೆ ತಿಳಿದ ಬಳಿಕ ಬಲರಾಮನು ಶ್ರೀಕೃಷ್ಣನನ್ನೇ ನೇರವಾಗಿ ಕೇಳಿದನು- ಶ್ರೀಕೃಷ್ಣನೇ! ಈ ಗೋಪಬಾಲಕರು ಮತ್ತು ಕರುಗಳು ದೇವತೆಗಳಲ್ಲ, ಋಷಿಗಳೂ ಅಲ್ಲ, ಇವೆಲ್ಲ ಬೇರೆ-ಬೇರೆ ರೂಪಗಳ ಆಶ್ರಯ ಪಡೆದರೂ ನೀನೊಬ್ಬನೇ ಇಷ್ಟು ರೂಪಗಳಲ್ಲಿ ಪ್ರಕಾಶಿಸುತ್ತಿರುವೆ. ನೀನು ಹೀಗೆ ಕರುಗಳ, ಬಾಲಕರ, ಕೊಂಬು, ಕೊಳಲು, ಹಗ್ಗ ಮುಂತಾದ ರೂಪಗಳಲ್ಲಿ ಬೇರೆ-ಬೇರೆಯಾಗಿ ಏಕೆ ಪ್ರಕಾಶಿಸು

ನೈತೇ ಸುರೇಶಾ ಋಷಯೋ ನ ಚೈತೇ
ತ್ವಮೇವ ಭಾಸೀಶ ಭಿದಾಶ್ರಯೇಽಪಿ ।
ಸರ್ವಂ ಪೃಥಕ್ತ್ವಂ ನಿಗಮಾತ್ಕಥಂ ವದೇ-
ತ್ಯುಕ್ತೇನ ವೃತ್ತಂ ಪ್ರಭುಣಾ ಬಲೋಽವೈತ್ ॥ ೩೯ ॥

ತಾವದೇತ್ಯಾತ್ಮಭೂರಾತ್ಮಮಾನೇನ ತ್ರುಟ್ಯನೇಹಸಾ ।
ಪುರೋವದಬ್ದಂ ಕ್ರೀಡಂತಂ ದದೃಶೇ ಸಕಲಂ ಹರಿಮ್ ॥ ೪೦ ॥

ಯಾವಂತೋ ಗೋಕುಲೇ ಬಾಲಾಃ ಸವತ್ಸಾಃ ಸರ್ವ ಏವ ಹಿ ।
ಮಾಯಾಶಯೇ ಶಯಾನಾ ಮೇ ನಾದ್ಯಾಪಿ ಪುನರುತ್ಥಿತಾಃ ॥ ೪೧ ॥

ಇತ ಏತೇಽತ್ರ ಕುತ್ರತ್ಯಾ ಮನ್ಮಾಯಾಮೋಹಿತೇತರೇ ।
ತಾವಂತ ಏವ ತತ್ರಾಬ್ದಂ ಕ್ರೀಡಂತೋ ವಿಷ್ಣುನಾ ಸಮಮ್ ॥ ೪೨ ॥

ಏವಮೇತೇಷು ಭೇದೇಷು ಚಿರಂ ಧ್ಯಾತ್ವಾ ಸ ಆತ್ಮಭೂಃ ।
ಸತ್ಯಾಃ ಕೇ ಕತರೇ ನೇತಿ ಜ್ಞಾತುಂ ನೇಷ್ಟೇ ಕಥಂಚನ ॥ ೪೩ ॥

ಏವಂ ಸಮ್ಮೋಹಯನ್ವಿಷ್ಣುಂ ವಿಮೋಹಂ ವಿಶ್ವಮೋಹನಮ್ ।
ಸ್ವಯೈವ ಮಾಯಯಾಜೋಽಪಿ ಸ್ವಯಮೇವ ವಿಮೋಹಿತಃ ॥ ೪೪ ॥

ತಮ್ಯಾಂ ತಮೋವನ್ನೈಹಾರಂ ಖದ್ಯೋತಾರ್ಚಿರಿವಾಹನಿ ।
ಮಹತೀತರಮಾಯೈಶ್ಯಂ ನಿಹಂತ್ಯಾತ್ಮನಿ ಯುಂಜತಃ ॥ ೪೫ ॥

ತಾವತ್ಸರ್ವೇ ವತ್ಸಪಾಲಾಃ ಪಶ್ಯತೋಽಜಸ್ಯ ತತ್ಕ್ಷಣಾತ್ ।
ವ್ಯದೃಶ್ಯಂತ ಘನಶ್ಯಾಮಾಃ ಪೀತಕೌಶೇಯವಾಸಸಃ ॥ ೪೬ ॥

ತ್ತಿರುವೆ ? ದಯವಿಟ್ಟು ಸ್ವಲ್ಪದರಲ್ಲೇ ಸ್ಪಷ್ಟಪಡಿಸಿ ತಿಳಿಸು. ಆಗ ಭಗವಂತನು ಬ್ರಹ್ಮದೇವರ ಕಾರ್ಯದಿಂದಾಗಿ ತಾನು ಹೀಗೆ ಆಗಬೇಕಾಯಿತೆಂದು ತಿಳಿಸಿದನು ಹಾಗೂ ಬಲರಾಮನು ಎಲ್ಲ ವನ್ನೂ ಅರಿತುಕೊಂಡನು. ॥ ೩೯ ॥

ಪರೀಕ್ಷಿತನೇ! ಅದೇ ಹೊತ್ತಿಗೆ ಬ್ರಹ್ಮದೇವರು ತಮ್ಮ ಲೋಕ ದಿಂದ ವ್ರಜಕ್ಕೆ ಮರಳಿದರು. ಅವರ ಕಾಲಮಾನದಿಂದ ಅಷ್ಟರೊಳಗೆ ಕೇವಲ ಒಂದು ತ್ರುಟಿ (ಸೂಜಿಯಿಂದ ಕಮಲದ ಎಸಳನ್ನು ಚುಚ್ಚು ವಷ್ಟು ಕಾಲ) ಮಾತ್ರ ಸಮಯ ಕಳೆದಿತ್ತು. ಭಗವಾನ್ ಶ್ರೀಕೃಷ್ಣನು ಗೊಲ್ಲಬಾಲಕರು ಮತ್ತು ಕರುಗಳೊಂದಿಗೆ ಒಂದು ವರ್ಷದ ಹಿಂದಿ ನಂತೆಯೇ ಕ್ರೀಡಿಸುತ್ತಿರುವುದನ್ನು ಅವರು ನೋಡಿದರು. ॥ ೪೦॥ ಅವರು ಯೋಚಿಸತೊಡಗಿದರು - ಗೋಕುಲದಲ್ಲಿದ್ದ ಗೊಲ್ಲ ಬಾಲಕರೆಲ್ಲರೂ, ಕರುಗಳೆಲ್ಲವೂ ನನ್ನ ಮಾಯಾಹಾಸಿಗೆಯಲ್ಲಿ ಮಲಗಿದ್ದಾರೆ. ಅವರೆಲ್ಲರನ್ನು ನಾನು ಮಾಯೆಯಿಂದ ನಿಷ್ಚೇಷ್ಟಿತರ ನ್ನಾಗಿಸಿ ಬಿಟ್ಟಿರುವೆ ; ಅವರು ಆಗಿನಿಂದ ಎಚ್ಚರವಾಗಿಲ್ಲ. ॥ ೪೧ ॥ ಹಾಗಿರುವಾಗ ನನ್ನ ಮಾಯೆಯಿಂದ ಮೋಹಿತರಲ್ಲದ ಒಂದು ವರ್ಷದಿಂದ ಭಗವಂತನೊಂದಿಗೆ ಆಡುತ್ತಿರುವ ಈ ಗೋಪ ಬಾಲಕರು ಮತ್ತು ಕರುಗಳು ಎಲ್ಲಿಂದ ಬಂದವು ? ॥ ೪೨ ॥ ಬ್ರಹ್ಮದೇವರು ಎರಡೂ ಕಡೆಗಳಲ್ಲಿ ಎರಡನ್ನೂ ನೋಡಿದರು ಮತ್ತು ಬಹಳ ಹೊತ್ತು ಧ್ಯಾನಮಾಡುತ್ತಾ ತಮ್ಮ ಜ್ಞಾನದೃಷ್ಟಿಯಿಂದ ಅದರ ರಹಸ್ಯವನ್ನು ತಿಳಿಯಲು ಬಯಸಿದರು, ಆದರೆ ಇವರಿಬ್ಬರಲ್ಲಿ ಮೊದಲಿನವರು ಯಾರು ಹಾಗೂ ಮತ್ತೆ ಸೃಷ್ಟಿಯಾದವರು ಯಾರು ? ಇವರಲ್ಲಿ ನಿಜವಾದವರು ಯಾರು, ಕೃತ್ರಿಮವಾದವರು ಯಾರು ಎಂಬುದು ತಿಳಿಯದೇ ಹೋಯಿತು. ॥ ೪೩ ॥ ಭಗವಾನ್ ಶ್ರೀಕೃಷ್ಣನ ಮಾಯೆಯಿಂದ ಎಲ್ಲರೂ ಮುಗ್ಧರಾಗು ತ್ತಿದ್ದಾರೆ. ಆದರೆ ಯಾವುದೇ ಮಾಯೆ-ಮೋಹ ಭಗವಂತನನ್ನು ಸ್ಪರ್ಶಿಸಲಾರದು. ಬ್ರಹ್ಮದೇವರು ಅದೇ ಭಗವಾನ್ ಶ್ರೀಕೃಷ್ಣನನ್ನು ತನ್ನ ಮಾಯೆಯಿಂದ ಮೋಹಿತಗೊಳಿಸಲು ಹೊರಟಿದ್ದರು. ಆದರೆ ಅವನನ್ನು ಮೋಹಿತಗೊಳಿಸುವುದು ದೂರವುಳಿಯಿತು, ಅವರು ಅಜನ್ಮಾ ಆಗಿದ್ದರೂ ತನ್ನ ಮಾಯೆಯಿಂದ ತಾನೇ ಮೋಹಿತ ರಾದರು. ॥ ೪೪ ॥ ರಾತ್ರಿಯ ಘೋರ ಅಂಧಕಾರದಲ್ಲಿ ಮಂಜಿನ ಕತ್ತಲೆ ಲಯವಾಗಿ ಹೋಗುವಂತೆ, ಮಿಂಚುಹುಳುವಿನ ಪ್ರಕಾಶವು ಹಗಲಿನಲ್ಲಿ ಲಯವಾಗುವಂತೆಯೇ, ಕ್ಷುದ್ರ ಮನುಷ್ಯನು ಮಹಾ ಪುರುಷರ ಮೇಲೆ ತನ್ನ ಮಾಯೆಯನ್ನು ಪ್ರಯೋಗಿಸಿದಾಗ, ಅದು ಮಹಾಪುರುಷರಿಗೆ ಏನನ್ನೂ ಮಾಡದೆ ತಾನೇ-ತಾನಾಗಿ ಕುಗ್ಗಿ ಹೋಗಿ, ಪ್ರಯೋಗಿಸಿದವನ ಸಾಮರ್ಥ್ಯವೂ ಹೊರಟು ಹೋಗುತ್ತದೆ. ॥ ೪೫ ॥

ಬ್ರಹ್ಮದೇವರು ವಿಚಾರ ಮಾಡುತ್ತಾ ನೋಡುತ್ತಿದ್ದಾಗಲೇ ಎಲ್ಲ ಗೊಲ್ಲಬಾಲಕರು ಮತ್ತು ಕರುಗಳು ಶ್ರೀಕೃಷ್ಣನರೂಪದಲ್ಲಿ ಕಂಡು ಬರತೊಡಗಿದರು. ಎಲ್ಲರೂ ನೀರು ತುಂಬಿದ ಮೋಡಗಳಂತೆ ಶ್ಯಾಮಲವರ್ಣದವರಾಗಿದ್ದು, ಪೀತಾಂಬರವನ್ನು ಧರಿಸಿ ಶಂಖ, ಚಕ್ರ, ಗದೆ ಮತ್ತು ಪದ್ಮಗಳನ್ನು ಧರಿಸಿದ ಚತುರ್ಭುಜರಾಗಿದ್ದರು. ಎಲ್ಲರ ತಲೆಯ ಮೇಲೆ ಕಿರೀಟ, ಕಿವಿಯಲ್ಲಿ ಕುಂಡಲಗಳೂ,

ಚತುರ್ಭುಜಾಃ ಶಂಖಚಕ್ರಗದಾರಾಜೀವಪಾಣಯಃ ।
ಕಿರೀಟಿನಃ ಕುಂಡಲಿನೋ ಹಾರಿಣೋ ವನಮಾಲಿನಃ ॥ ೪೭ ॥

ಶ್ರೀವತ್ಸಾಂಗದದೋರತ್ನಕಂಬುಕಂಕಣಪಾಣಯಃ ।
ನೂಪುರೈಃ ಕಟಕೈರ್ಭಾತಾಃ ಕಟಿಸೂತ್ರಾಂಗುಲೀಯಕೈಃ ॥ ೪೮ ॥

ಆಂಘ್ರಿಮಸ್ತಕಮಾಪೂರ್ಣಾಸ್ತುಲಸೀನವದಾಮಭಿಃ ।
ಕೋಮಲೈಃ ಸರ್ವಗಾತ್ರೇಷು ಭೂರಿಪುಣ್ಯವದರ್ಪಿತೈಃ ॥ ೪೯ ॥

ಚಂದ್ರಿಕಾವಿಶದಸ್ಮೇರೈಃ ಸಾರುಣಾಪಾಂಗವೀಕ್ಷಿತೈಃ ।
ಸ್ವಕಾರ್ಥಾನಾಮಿವ ರಜಃಸತ್ತ್ವಾಭ್ಯಾಂ ಸ್ರಷ್ಟೃಪಾಲಕಾಃ ॥ ೫೦ ॥

ಆತ್ಮಾದಿಸ್ತಂಭಪರ್ಯಂತೈರ್ಮೂರ್ತಿಮದ್ಭಿಶ್ಚರಾಚರೈಃ ।
ನೃತ್ಯಗೀತಾದ್ಯನೇಕಾರ್ಹೈಃ ಪೃಥಕ್ಪೃಥಗುಪಾಸಿತಾಃ ॥ ೫೧ ॥

ಅಣಿಮಾದ್ಯೈರ್ಮಹಿಮಭಿರಜಾದ್ಯಾಭಿರ್ವಿಭೂತಿಭಿಃ ।
ಚತುರ್ವಿಂಶತಿಭಿಸ್ತತ್ತ್ವೈಃ ಪರೀತಾ ಮಹದಾದಿಭಿಃ ॥ ೫೨ ॥

ಕಾಲಸ್ವಭಾವಸಂಸ್ಕಾರಕಾಮಕರ್ಮಗುಣಾದಿಭಿಃ ।
ಸ್ವಮಹಿಧ್ವಸ್ತಮಹಿಭಿರ್ಮೂರ್ತಿಮದ್ಭಿರುಪಾಸಿತಾಃ ॥ ೫೩ ॥

ಸತ್ಯಜ್ಞಾನಾನಂತಾನಂದಮಾತ್ರೈಕರಸಮೂರ್ತಯಃ ।
ಅಸ್ಪೃಷ್ಟಭೂರಿಮಾಹಾತ್ಮ್ಯಾ ಅಪಿ ಹ್ಯುಪನಿಷದ್ದೃಶಾಮ್ ॥ ೫೪ ॥

ಏವಂ ಸಕೃದ್ದದರ್ಶಾಜಃ ಪರಬ್ರಹ್ಮಾತ್ಮನೋಽಖಿಲಾನ್ ।
ಯಸ್ಯ ಭಾಸಾ ಸರ್ವಮಿದಂ ವಿಭಾತಿ ಸಚರಾಚರಮ್ ॥ ೫೫ ॥

ಕೊರಳಲ್ಲಿ ಸುಂದರ ಹಾರಗಳೂ ಹಾಗೂ ವನಮಾಲೆಗಳು ಶೋಭಿಸುತ್ತಿದ್ದುವು. ॥ ೪೬-೪೭ ॥ ಅವರ ವೃಕ್ಷಃಸ್ಥಳದಲ್ಲಿ ಶ್ರೀವತ್ಸ ಲಾಂಛನವಿದ್ದು, ಬಾಹುಗಳಲ್ಲಿ ಕನಕಾಂಗದ-ಕೇಯೂರಗಳೂ, ಮಣಿಕಟ್ಟುಗಳಲ್ಲಿ ಶಂಖಾಕಾರವಾದ ರತ್ನಗಳನ್ನು ಕೊರೆದ ಕಂಕಣಗಳನ್ನೂ, ಚರಣಗಳಲ್ಲಿ ನೂಪುರಗಳನ್ನೂ ಧರಿಸಿದ್ದರು. ಸುವರ್ಣಮಯವಾದ ಉಡಿದಾರಗಳನ್ನು ಧರಿಸಿದ್ದರು ಹಾಗೂ ಬೆರಳುಗಳಲ್ಲಿ ರತ್ನದುಂಗುರಗಳು ಹೊಳೆಯುತ್ತಿದ್ದವು. ॥ ೪೮ ॥ ನಖಶಿಖಾಂತವಾಗಿ ಸಮಸ್ತ ಅಂಗಗಳಲ್ಲಿಯೂ ಪುಣ್ಯವಂತರಾದ ಭಕ್ತರು ಅರ್ಪಿಸಿದ ಸುಕೋಮಲವಾದ, ನೂತನವಾದ ತುಳಸೀ ಮಾಲೆಗಳಿಂದ ಅಲಂಕೃತರಾಗಿದ್ದರು. ॥ ೪೯ ॥ ಅವರ ಕಿರುನಗೆಯು ಬೆಳದಿಂಗಳಿನಂತೆ ಉಜ್ವಲವಾಗಿತ್ತು. ಎಣ್ಣೆಗೆಂಪಿನಿಂದ ಕೂಡಿದ್ದ ಅವರ ಕಡೆಗಣ್ಣಿನ ನೋಟವು ಸುಮಧುರವಾಗಿತ್ತು. ಅವರು ಇವೆರಡರ ಮೂಲಕ ಸತ್ತ್ವಗುಣ ಮತ್ತು ರಜೋಗುಣಗಳನ್ನು ಸ್ವೀಕರಿಸಿ, ಭಕ್ತರ ಇಷ್ಟಾರ್ಥಗಳನ್ನು ನಡೆಸಿಕೊಡಲು ಅವತರಿಸಿದ ಲೋಕಪಾಲಕರಂತೆಯೇ ಕಾಣುತ್ತಿದ್ದರು. ॥ ೫೦ ॥ ತನ್ನನ್ನೂ ಮೊದಲ್ಗೊಂಡು ಹುಲ್ಲುಕಡ್ಡಿಯವರೆಗಿನ ಸಮಸ್ತ ಚರಾಚರ ಪ್ರಾಣಿಗಳೂ ಮೂರ್ತಿವತ್ತಾಗಿ ಬಂದು ಗೀತ-ನೃತ್ಯಗಳೇ ಮೊದಲಾದ ಹಲವಾರು ಪೂಜಾವಿಧಾನಗಳಿಂದ ಪ್ರತ್ಯೇಕ-ಪ್ರತ್ಯೇಕವಾಗಿ ಆ ಎಲ್ಲ ಮೂರ್ತಿಗಳನ್ನು ಪೂಜಿಸುತ್ತಿದ್ದುದನ್ನೂ ಬ್ರಹ್ಮದೇವರು ನೋಡಿದರು. ॥ ೫೧ ॥ ಪ್ರತಿಯೊಂದು ಮೂರ್ತಿಯೂ ಅಣಿಮಾದಿ ಅಷ್ಟಸಿದ್ಧಿಗಳಿಂದಲೂ, ಮಾಯೆಯೇ ಮೊದಲಾದ ಜಗತ್ಕಾರಣ ಶಕ್ತಿಗಳಿಂದಲೂ, ಮಹತ್ತತ್ತ್ವವೇ ಮೊದಲಾದ ಇಪ್ಪತ್ತುನಾಲ್ಕು ತತ್ತ್ವಗಳಿಂದಲೂ ಸುತ್ತುವರಿಯಲ್ಪಟ್ಟಿದ್ದಿತು. ॥ ೫೨ ॥ ಪ್ರಕೃತಿಯಲ್ಲಿ ಕ್ಷೋಭೆಯನ್ನುಂಟು ಮಾಡುವ ಕಾಲ, ಅದರ ಪರಿಣಾಮದ ಕಾರಣ ಸ್ವಭಾವ, ವಾಸನೆಗಳನ್ನು ಜಾಗ್ರತಗೊಳಿಸುವಂತಹ ಸಂಸ್ಕಾರಗಳು, ಕಾಮನೆಗಳು, ಕರ್ಮ, ವಿಷಯ ಮತ್ತು ಫಲ - ಇವೆಲ್ಲವೂ ಮೂರ್ತಿಮಂತರಾಗಿ ಭಗವಂತನ ಪ್ರತಿಯೊಂದು ರೂಪವನ್ನು ಉಪಾಸಿಸುತ್ತಿದ್ದವು. ಭಗವಂತನ ಸತ್ತೆ ಮತ್ತು ಮಹತ್ತುಗಳ ಎದುರು ಅವೆಲ್ಲವುಗಳ ಅಸ್ತಿತ್ವ ಹಾಗೂ ಮಹತ್ತುಗಳನ್ನು ಕಳಕೊಂಡು ಬಿಟ್ಟಿದ್ದವು. ॥ ೫೩ ॥ ಅವರೆಲ್ಲರೂ ಭೂತ, ಭವಿಷ್ಯತ್ ಮತ್ತು ವರ್ತಮಾನ ಕಾಲಗಳ ಮೂಲಕ ಸೀಮಿತರಾಗಿರದೆ ತ್ರಿಕಾಲಾಬಾಧಿತ ಸತ್ಯವಾಗಿದ್ದರು. ಅವರೆಲ್ಲರೂ ಸ್ವಯಂ ಪ್ರಕಾಶರೂ, ಕೇವಲ ಅನಂತ ಆನಂದ ಸ್ವರೂಪರೂ ಆಗಿದ್ದಾರೆ. ಅವರಲ್ಲಿ ಜಡತೆ ಮತ್ತು ಚೈತನ್ಯದ ಭೇದಭಾವವೇ ಇಲ್ಲ. ಅವರೆಲ್ಲರೂ ಏಕರಸರಾಗಿದ್ದಾರೆ. ಎಲ್ಲಿಯವರೆಗೆಂದರೆ, ಉಪನಿಷದ್ದರ್ಶಿ ತತ್ತ್ವಜ್ಞಾನಿಗಳ ದೃಷ್ಟಿಯೂ ಕೂಡ ಅವರ ಅನಂತ ಮಹಿಮೆಯನ್ನು ಸ್ಪರ್ಶಿಸಲಾರದೆ ಹೋಯಿತು. ॥ ೫೪ ॥ ಹೀಗೆ ಅವರೆಲ್ಲರೂ ಆ ಪರಬ್ರಹ್ಮ ಪರಮಾತ್ಮ ಶ್ರೀಕೃಷ್ಣನದೇ ಸ್ವರೂಪರಾಗಿದ್ದಾರೆ. ಅವರ ಪ್ರಕಾಶದಿಂದ ಈ ಇಡೀ ಚರಾಚರ ಜಗತ್ತು ಪ್ರಕಾಶಿಸುತ್ತಿರುವುದನ್ನು ಒಟ್ಟಿಗೆ ಬ್ರಹ್ಮದೇವರು ನೋಡಿದರು. ॥ ೫೫ ॥

ಇಂತಹ ಅತ್ಯಂತ ಆಶ್ಚರ್ಯಮಯ ದೃಶ್ಯವನ್ನು ನೋಡಿ ಬ್ರಹ್ಮದೇವರು ಚಕಿತರಾದರು. ಅವರ ಹನ್ನೊಂದು ಇಂದ್ರಿಯಗಳು (ಐದು ಕರ್ಮೇಂದ್ರಿಯ, ಐದು ಜ್ಞಾನೇಂದ್ರಿಯ ಮತ್ತು ಒಂದು

ತತೋಽತಿಕುತುಕೋದ್ವೃತ್ತಸ್ತಿಮಿತೈಕಾದಶೇಂದ್ರಿಯಃ ।
ತದ್ಧಾಮ್ನಾಭೂದಜಸ್ತೂಷ್ಣೀಂ ಪೂರ್ದೇವ್ಯಂತೀವ ಪುತ್ರಿಕಾ ॥ ೫೬ ॥

ಇತೀರೇಶೇಽತರ್ಕ್ಯೇ ನಿಜಮಹಿಮನಿ ಸ್ವಪ್ರಮಿತಿಕೇ
ಪರತ್ರಾಜಾತೋಽತನ್ನಿರಸನ ಮುಖಬ್ರಹ್ಮಕಮಿತೌ ।
ಅನೀಶೇಽಪೀ ದ್ರಷ್ಟುಂ ಕಿಮಿದಮಿತಿ ವಾ ಮುಹ್ಯತಿ ಸತಿ
ಚಛಾದಾಜೋ ಜ್ಞಾತ್ವಾ ಸಪದಿ ಪರಮೋಽಜಾಜವನಿಕಾಮ್ ॥ ೫೭ ॥

ತತೋಽರ್ವಾಕ್ ಪ್ರತಿಲಬ್ಧಾಕ್ಷಃ ಕಃ ಪರೇತವದುತ್ಥಿತಃ ।
ಕೃಚ್ಛ್ರಾದುನ್ಮೀಲ್ಯ ವೈ ದೃಷ್ಟೀರಾಚಷ್ಟೇದಂ ಸಹಾತ್ಮನಾ ॥ ೫೮ ॥

ಸಪದ್ಯೇವಾಭಿತಃ ಪಶ್ಯನ್ ದಿಶೋಽಪಶ್ಯತ್ಪುರಃಸ್ಥಿತಮ್ ।
ವೃಂದಾವನಂ ಜನಾಜೀವ್ಯದ್ರುಮಾಕೀರ್ಣಂ ಸಮಾಪ್ರಿಯಮ್ ॥ ೫೯ ॥

ಯತ್ರ ನೈಸರ್ಗದುರ್ವೈರಾಃ ಸಹಾಸನ್ನೃಮೃಗಾದಯಃ ।
ಮಿತ್ರಾಣೀವಾಜಿತಾವಾಸದ್ರುತರುಟ್ತರ್ಷಕಾದಿಕಮ್ ॥ ೬೦ ॥

ತತ್ರೋದ್ವಹತ್ಪಶುಪವಂಶಶಿಶುತ್ವನಾಟ್ಯಂ
ಬ್ರಹ್ಮಾದ್ವಯಂ ಪರಮನಂತಮಗಾಧಬೋಧಮ್ ।
ವತ್ಸಾನ್ಸಖೀನಿವ ಪುರಾ ಪರಿತೋ ವಿಚಿನ್ವ-
ದೇಕಂ ಸಪಾಣಿಕವಲಂ ಪರಮೇಷ್ಠ್ಯಚಷ್ಟ ॥ ೬೧ ॥

ಮನಸ್ಸು) ಸ್ತಬ್ಧವಾದುವು. ಅವರು ಭಗವಂತನ ತೇಜದಿಂದ ನಿಸ್ತೇಜಿತರಾಗಿ ಮೌನರಾದರು. ಆಗ ಅವರು ಹೀಗೆ ಸ್ತಬ್ಧರಾಗಿ ನಿಂತಿರುವಾಗ ಗೋಕುಲದ ಅಧಿಷ್ಠಾತೃದೇವತೆಯ ಮುಂದೆ ನಿಂತಿರುವ ಒಂದು ಗೊಂಬೆಯಂತೆಯೇ ಕಾಣುತ್ತಿದ್ದರು. ॥ ೫೬ ॥ ಪರೀಕ್ಷಿತನೇ ! ಭಗವಂತನ ಸ್ವರೂಪವು ತರ್ಕಕ್ಕೆ ಅತೀತವಾದುದು. ಅವನ ಮಹಿಮೆ ಅಸಾಧಾರಣವಾದುದು. ಅವನು ಸ್ವಯಂ ಪ್ರಕಾಶನೂ, ಆನಂದಸ್ವರೂಪನೂ, ಮಾಯೆಯಿಂದ ಅತೀತನೂ ಆಗಿದ್ದಾನೆ. ವೇದಾಂತವೂ ಕೂಡ ಸಾಕ್ಷಾತ್ತಾಗಿ ಅವನನ್ನು ವರ್ಣಿಸಲು ಅಸಮರ್ಥವಾಗಿದೆ. ಆದಕ್ಕಾಗಿ ಅವನಿಂದ ಭಿನ್ನವಾದುದನ್ನು ನಿಷೇಧ ಮಾಡುತ್ತಾ ಆನಂದ ಸ್ವರೂಪೀ ಬ್ರಹ್ಮನನ್ನು ಹೇಗೋ, ಕೆಲವು ಸಂಕೇತ ಮಾಡುತ್ತದೆ. ಬ್ರಹ್ಮದೇವರು ಸಮಸ್ತ ವಿದ್ಯೆಗಳ ಅಧಿಪತಿಯಾಗಿದ್ದರೂ ಭಗವಂತನ ದಿವ್ಯಸ್ವರೂಪವನ್ನು ಇದು ಏನು ಎಂದು ಅವರು ಸ್ವಲ್ಪವೂ ತಿಳಿಯದೆ ಹೋದರು. ಅವರು ಭಗವಂತನ ಆ ಮಹಿಮೆಯುಳ್ಳ ರೂಪಗಳನ್ನು ನೋಡುವುದಕ್ಕೆ ಅಸಮರ್ಥರಾಗಿ ಕಣ್ಣು ಮುಚ್ಚಿಕೊಂಡರು. ಭಗವಾನ್ ಶ್ರೀಕೃಷ್ಣನು ಬ್ರಹ್ಮದೇವರ ಈ ಮೋಹ ಮತ್ತು ಅಸಮರ್ಥತೆಯನ್ನು ಮನಗಂಡು ಯಾವುದೇ ಪ್ರಯಾಸವಿಲ್ಲದೆ ಕೂಡಲೇ ತನ್ನ ಮಾಯೆಯ ತೆರೆಯನ್ನು ಸರಿಸಿಬಿಟ್ಟನು. ॥ ೫೭ ॥ ಇದರಿಂದ ಬ್ರಹ್ಮದೇವರಿಗೆ ಬಾಹ್ಯ ಜ್ಞಾನವುಂಟಾಯಿತು. ಸತ್ತವನು ಬದುಕಿ ಎದ್ದು ಕೂಡುವಂತೆ, ಸಚೇತನರಾಗಿ ಅವರು ಹೇಗೋ ಕಷ್ಟಪಟ್ಟು ತಮ್ಮ ಕಣ್ಣುಗಳನ್ನು ತೆರೆದರು. ಆಗ ಅವರಿಗೆ ತನ್ನ ಶರೀರ ಮತ್ತು ಈ ಜಗತ್ತು ಕಾಣತೊಡಗಿತು. ॥ ೫೮ ॥ ಬ್ರಹ್ಮದೇವರು ಸುತ್ತಲೂ ನೋಡತೊಡಗಿದಾಗ ಮೊದಲಿಗೆ ದಿಕ್ಕುಗಳು, ಅನಂತರ ಆಗಲೇ ಅವರ ಮುಂದೆ ವೃಂದಾವನ ಕಂಡುಬಂತು. ವೃಂದಾವನವು ಎಲ್ಲರಿಗಾಗಿ ಒಂದೇ ರೀತಿ ಪ್ರಿಯವಾಗಿದೆ. ನೊಡಿದಲ್ಲೆಲ್ಲ ಜೀವರಿಗೆ ಜೀವನವನ್ನು ಕೊಡುವಂತಹ ಫಲ-ಪುಷ್ಪಗಳಿಂದ ತುಂಬಿದ, ಹಚ್ಚ ಹಸಿರಾದ ಎಲೆಗಳಿಂದ ಕೂಡಿದ ಮರಗಳ ಸಾಲುಗಳು ಶೋಭಿಸುತ್ತಿದ್ದವು. ॥ ೫೯ ॥ ಭಗವಾನ್ ಶ್ರೀಕೃಷ್ಣನ ಲೀಲಾಭೂಮಿಯಾದ ವೃಂದಾವನ ಧಾಮದಲ್ಲಿ ಕ್ರೋಧ, ತೃಷ್ಣೆ ಮುಂತಾದ ದೋಷಗಳು ಪ್ರವೇಶಿಸಲಾರವು. ಅಲ್ಲಿ ಸ್ವಭಾವತಃ ಪರಸ್ಪರ ವೈರಿಗಳಾದ ಮನುಷ್ಯರು, ಪಶು-ಪಕ್ಷಿಗಳೂ ಕೂಡ ಪ್ರಿಯಮಿತ್ರರಂತೆ ಒಂದಾಗಿ ಸೇರಿ ವಾಸಿಸುತ್ತಿದ್ದರು. ॥ ೬೦॥ ಬ್ರಹ್ಮದೇವರು ವೃಂದಾವನವನ್ನು ದರ್ಶಿಸುವಾಗ ಅದ್ವಿತೀಯ ಪರಬ್ರಹ್ಮನು ಗೋಪ ಬಾಲಕನಂತೆ ನಾಟ್ಯವಾಡುತ್ತಿರುವುದನ್ನು ನೋಡಿದನು. ಒಬ್ಬನಾಗಿದ್ದರೂ ಅವನಿಗೆ ಮಿತ್ರರಿದ್ದಾರೆ, ಅನಂತನಾಗಿದ್ದರೂ ಅವನು ಅತ್ತ-ಇತ್ತ ತಿರುಗುತ್ತಿರುವನು. ಅವನ ಜ್ಞಾನವು ಅಗಾಧವಾಗಿದ್ದರೂ ಅವನು ತನ್ನ ಸ್ನೇಹಿತರಾದ ಗೋಪಬಾಲಕರನ್ನೂ, ಕರುಗಳನ್ನೂ ಹುಡುಕುತ್ತಿರುವನು. ಭಗವಂತನಾದ ಶ್ರೀಕೃಷ್ಣನು ಮೊದಲು ಕೈಯಲ್ಲಿ ಮೊಸರನ್ನದ ತುತ್ತನ್ನು ಎತ್ತಿಕೊಂಡು ಹುಡುಕುತ್ತಿದ್ದನೋ ಹಾಗೆಯೇ ಈಗಲೂ ಒಬ್ಬನಾಗಿಯೇ ಅವನ್ನು ಹುಡುಕುತ್ತಿರುವುದನ್ನೂ ಬ್ರಹ್ಮದೇವರು ನೋಡಿದರು. ॥ ೬೧ ॥

ದೃಷ್ಟ್ವಾ ತ್ವರೇಣ ನಿಜಧೋರಣತೋಽವತೀರ್ಯ
ಪೃಥ್ವ್ಯಾಂ ವಪುಃ ಕನಕದಂಡಮಿವಾಭಿಪಾತ್ಯ ।
ಸ್ಪೃಷ್ಟ್ವಾ ಚತುರ್ಮುಕುಟಕೋಟಿಭಿರಂಘ್ರಿಯುಗ್ಮಂ
ನತ್ವಾ ಮುದಶ್ರುಸುಜಲೈರಕೃತಾಭಿಷೇಕಮ್ ॥ ೬೨ ॥

ಭಗವಂತನನ್ನು ಕಾಣುತ್ತಲೇ ಬ್ರಹ್ಮದೇವರು ತಮ್ಮ ವಾಹನವಾದ ಹಂಸದಿಂದ ಕೆಳಗಿಳಿದು, ಚಿನ್ನದಂತೆ ಹೊಳೆಯುತ್ತಿರುವ ತನ್ನ ಶರೀರದಿಂದ ಭೂಮಿಯಲ್ಲಿ ದಂಡವತ್ ಪ್ರಣಾಮ ಮಾಡಿದರು. ಅವರು ತಮ್ಮ ನಾಲ್ಕು ಕಿರೀಟಗಳ ಅಗ್ರಭಾಗದಿಂದ ಭಗವಂತನ ಚರಣಗಳನ್ನು ಸ್ಪರ್ಶಿಸುತ್ತಾ ನಮಸ್ಕರಿಸಿದರು ಹಾಗೂ ಆನಂದಾಶ್ರುಗಳಿಂದ ಆ ಪಾದಗಳನ್ನು ತೊಳೆದರು. ॥ ೬೨ ॥

ಉತ್ಥಾಯೋತ್ಥಾಯ ಕೃಷ್ಣಸ್ಯ ಚಿರಸ್ಯ ಪಾದಯೋಃ ಪತನ್ ।
ಆಸ್ತೇ ಮಹಿತ್ವಂ ಪ್ರಾಗ್ದೃಷ್ಟಂ ಸ್ಮೃತ್ವಾ ಸ್ಮೃತ್ವಾ ಪುನಃ ಪುನಃ ॥ ೬೩ ॥

ಅವರು ಭಗವಾನ್ ಶ್ರೀಕೃಷ್ಣನ ಮೊದಲು ನೋಡಿದ ಮಹಿಮೆಯನ್ನು ಪದೇ-ಪದೇ ಸ್ಮರಿಸುತ್ತಾ, ಅವನ ಕಾಲಿಗೆ ಬೀಳುತ್ತಾ, ಏಳುತ್ತಾ ಪುನಃ ಪುನಃ ನಮಸ್ಕರಿಸುತ್ತಾರೆ. ಹೀಗೆ ಬಹಳ ಹೊತ್ತಿನವರೆಗೆ ಅವರು ಭಗವಂತನ ಚರಣಗಳಲ್ಲಿ ಬಿದ್ದುಕೊಂಡೇ ಇದ್ದರು. ॥ ೬೩ ॥

ಶನೈರಥೋತ್ಥಾಯ ವಿಮೃಜ್ಯ ಲೋಚನೇ
ಮುಕುಂದಮುದ್ವೀಕ್ಷ್ಯ ವಿನಮ್ರಕಂಧರಃ ।
ಕೃತಾಂಜಲಿಃ ಪ್ರಶ್ರಯವಾನ್ಸಮಾಹಿತಃ
ಸವೇಪಥುರ್ಗದ್ಗದಯೈಲತೇಲಯಾ ॥ ೬೪ ॥

ಮತ್ತೆ ನಿಧಾನವಾಗಿ ಎದ್ದು ತಮ್ಮ ಕಣ್ಣುಗಳನ್ನು ಒರೆಸಿಕೊಂಡರು. ಭಕ್ತಿ ಮತ್ತು ಮುಕ್ತಿಯ ಏಕಮಾತ್ರ ಉದ್ಗಮನಾದ ಭಗವಂತನನ್ನು ನೋಡಿ ಅವರ ಶಿರವು ಬಾಗಿತು. ನಡುಗುತ್ತಾ ಕೈಗಳನ್ನು ಜೋಡಿಸಿಕೊಂಡು ಅತ್ಯಂತ ವಿನಮ್ರರಾಗಿ, ಏಕಾಗ್ರತೆಯಿಂದ ಗದ್ಗದ ವಾಣಿಯಿಂದ ಬ್ರಹ್ಮದೇವರು ಭಗವಂತನನ್ನು ಸ್ತುತಿಸತೊಡಗಿದರು. ॥ ೬೪ ॥

ಹದಿಮೂರನೆಯ ಅಧ್ಯಾಯವು ಮುಗಿಯಿತು. ॥ ೧೩ ॥

ಇತಿ ಶ್ರೀಮದ್ಭಾಗವತೇ ಮಹಾಪುರಾಣೇ ಪಾರಮಹಂಸ್ಯಾಂ ಸಂಹಿತಾಯಾಂ ದಶಮ ಸ್ಕಂಧೇ ಪೂರ್ವಾರ್ಧೇ
ತ್ರಯೋದಶೋಽಧ್ಯಾಯಃ ॥ ೧೩ ॥

# ಹದಿನಾಲ್ಕನೆಯ ಅಧ್ಯಾಯ

## ಬ್ರಹ್ಮದೇವರು ಮಾಡಿದ ಭಗವಂತನ ಸ್ತುತಿ

ಬ್ರಹ್ಮೋವಾಚ

ನೌಮೀಡ್ಯ ತೇಽಭ್ರವಪುಷೇ ತಡಿದಂಬರಾಯ
ಗುಂಜಾವತಂಸಪರಿಪಿಚ್ಛಲಸನ್ಮುಖಾಯ ।
ವನ್ಯಸ್ರಜೇ ಕವಲವೇತ್ರವಿಷಾಣವೇಣು-
ಲಕ್ಷ್ಮಶ್ರಿಯೇ ಮೃದುಪದೇ ಪಶುಪಾಂಗಜಾಯ ॥ ೧ ॥

**ಶ್ರೀಬ್ರಹ್ಮದೇವರು ಸ್ತೋತ್ರಮಾಡುತ್ತಾರೆ** - ಸ್ತೋತ್ರಾರ್ಹನಾದ ಭಗವಂತನೇ! ನಾನು ನಿನ್ನ ಚರಣಕಮಲಗಳಲ್ಲಿ ನಮಸ್ಕರಿಸುತ್ತೇನೆ. ನೀಲಮೇಘ ಶ್ಯಾಮನೇ! ಮಿಂಚಿನಂತಹ ಪೀತಾಂಬರವನ್ನು ಧರಿಸಿರುವವನೇ! ಗುಲಗಂಜಿಗಳ ಮಾಲೆಗಳನ್ನು ಧರಿಸಿ, ಮಕರಾಕೃತಿಯ ಕರ್ಣಕುಂಡಲಗಳನ್ನು ಹೊಂದಿರುವವನೇ! ತಲೆಯಲ್ಲಿ ನವಿಲು ಗರಿಯ ಕಿರೀಟವನ್ನು ಧರಿಸಿ ಅದರಿಂದ ಪ್ರಕಾಶಮಾನವಾಗಿ ಕಾಣುವ ಮುಖವುಳ್ಳವನೇ! ವೃಕ್ಷಸ್ಥಳದಲ್ಲಿ ವನಮಾಲೆಯನ್ನು ಧರಿಸಿರುವವನೇ! ಕೈಯಲ್ಲಿ ಮೊಸರನ್ನದ ತುತ್ತನ್ನು ಹಿಡಿದುಕೊಂಡು, ಉಡಿಯಲ್ಲಿ ಕೊಳಲನ್ನು ಸಿಕ್ಕಿಸಿಕೊಂಡು, ಕಂಕುಳಿನಲ್ಲಿ ಕೊಂಬನ್ನು ಚಾವಟಿಯನ್ನು ಹಿಡಿದುಕೊಂಡು ಅನುಪಮವಾದ ಕಾಂತಿಯಿಂದ ಪ್ರಕಾಶಿಸುತ್ತಿರುವವನೇ! ಮೃದುವಾದ ಪಾದಗಳನ್ನು ಹೊಂದಿರುವವನೇ! ನಂದಗೋಪನ ಸುತನೇ! ನಿನಗೆ ನಮಸ್ಕರಿಸುತ್ತೇನೆ. ॥ ೧ ॥

ಅಸ್ಯಾಪಿ ದೇವ ವಪುಷೋ ಮದನುಗ್ರಹಸ್ಯ
ಸ್ವೇಚ್ಛಾಮಯಸ್ಯ ನ ತು ಭೂತಮಯಸ್ಯ ಕೋಽಪಿ ।
ನೇಶೇ ಮಹಿ ತ್ವವಸಿತುಂ ಮನಸಾಽಽನ್ತರೇಣ
ಸಾಕ್ಷಾತ್ತವೈವ ಕಿಮುತಾತ್ಮ ಸುಖಾನುಭೂತೇಃ ॥ ೨ ॥

ದೇವನೇ! ನಿನ್ನ ಶ್ರೀವಿಗ್ರಹವು ಭಕ್ತರ ಅಭಿಲಾಷೆಗಳನ್ನು ಪೂರ್ಣಗೊಳಿಸುವುದಾಗಿದೆ. ನನ್ನನ್ನು ಅನುಗ್ರಹಿಸುವುದಕ್ಕಾಗಿಯೇ ನೀನು ದಿವ್ಯ ರೂಪವನ್ನು ತಾಳಿರುವೆ. ನಿನ್ನ ಈ ಶ್ರೀವಿಗ್ರಹವನ್ನು ಪಂಚಭೂತಾತ್ಮಕವಾದುದೆಂದು ಯಾರು ತಾನೇ ಹೇಳಬಲ್ಲರು? ಖಂಡಿತವಾಗಿಯೂ ನಿನ್ನದು ಪಂಚಭೂತಾತ್ಮಕ ಶರೀರವಲ್ಲ.

ಜ್ಞಾನೇ ಪ್ರಯಾಸಮುದಪಾಸ್ಯ ನಮಂತ ಏವ
ಜೀವಂತಿ ಸನ್ಮುಖರಿತಾಂ ಭವದೀಯವಾರ್ತಾಮ್ ।
ಸ್ಥಾನೇ ಸ್ಥಿತಾಃ ಶ್ರುತಿಗತಾಂ ತನುವಾಙ್ಮನೋಭಿ-
ರ್ಯೇ ಪ್ರಾಯಶೋಽಜಿತ ಜಿತೋಽಪ್ಯಸಿ ತೈಸ್ತ್ರಿಲೋಕ್ಯಾಮ್
॥ ೩ ॥

ಶ್ರೇಯಃಸ್ರುತಿಂ ಭಕ್ತಿಮುದಸ್ಯ ತೇ ವಿಭೋ
ಕ್ಲಿಶ್ಯಂತಿ ಯೇ ಕೇವಲ ಬೋಧಲಬ್ಧಯೇ ।
ತೇಷಾಮಸೌ ಕ್ಲೇಶಲ ಏವ ಶಿಷ್ಯತೇ
ನಾನ್ಯದ್ಯಥಾ ಸ್ಥೂಲತುಷಾವಘಾತಿನಾಮ್ ॥ ೪ ॥

ಪುರೇಹ ಭೂಮನ್ಬಹವೋಽಪಿ ಯೋಗಿನ-
ಸ್ತ್ವದರ್ಪಿತೇಹಾ ನಿಜಕರ್ಮಲಬ್ಧಯಾ ।
ವಿಬುಧ್ಯ ಭಕ್ತ್ಯೈವ ಕಥೋಪನೀತಯಾ
ಪ್ರಪೇದಿರೇಽಂಜೋಽಚ್ಯುತ ತೇ ಗತಿಂ ಪರಾಮ್ ॥ ೫ ॥

ತಥಾಪಿ ಭೂಮನ್ಮಹಿಮಾಗುಣಸ್ಯ ತೇ
ವಿಬೋದ್ಧುಮರ್ಹತ್ಯಮಲಾಂತರಾತ್ಮಭಿಃ ।
ಅವಿಕ್ರಿಯಾತ್ಸ್ವಾನುಭವಾದರೂಪತೋ
ಹ್ಯನನ್ಯಬೋಧ್ಯಾತ್ಮತಯಾ ನ ಚಾನ್ಯಥಾ ॥ ೬ ॥

ಅಪ್ರಾಕೃತವಾದ ಶುದ್ಧಸತ್ತ್ವಮಯ ಶರೀರವಾಗಿದೆ. ನಾನೇ ಆಗಲೀ, ಇತರ ಯೋಗಿಗಳೇ ಆಗಲೀ ಸಮಾಧಿಸ್ಥರಾಗಿ ನಿನ್ನ ಈ ಸಚ್ಚಿದಾನಂದ ವಿಗ್ರಹದ ಸ್ವರೂಪವನ್ನೂ, ಮಹಿಮೆಯನ್ನೂ ತಿಳಿಯಲಾರೆವು. ಆತ್ಮಾನಂದಾನುಭವ ಸ್ವರೂಪನಾದ ನಿನ್ನ ಮಹಿಮೆಯನ್ನು ಏಕಾಗ್ರ ಮನಸ್ಸಿನಿಂದಲಾದರೂ ಯಾರಿಗೆ ತಾನೇ ತಿಳಿಯಲು ಸಾಧ್ಯವಾಗುತ್ತದೆ ? ॥ ೨ ॥ ಪ್ರಭುವೇ ! ಯಾರು ಜ್ಞಾನಪ್ರಾಪ್ತಿಗಾಗಿ ಪ್ರಯತ್ನಿಸದೆಯೇ ತಾವಿರುವ ಸ್ಥಳದಲ್ಲೇ ಇದ್ದುಕೊಂಡು ಸತ್ಪುರುಷರ ಸಹವಾಸದಲ್ಲಿರುತ್ತಾ, ನಿನಗೆ ಪ್ರಿಯತಮರಾದ ಸಂತರು ಹೇಳುವ ನಿನ್ನ ಲೀಲಾಪ್ರಸಂಗಗಳನ್ನು ಶರೀರ, ಮಾತು, ಮನಸ್ಸುಗಳೆಂಬ ತ್ರಿಕರಣಗಳಿಂದಲೂ ಶ್ರದ್ಧೆಯಿಟ್ಟು ಕೇಳುತ್ತಾ, ಮತ್ತಾವ ಕಾರ್ಯಗಳನ್ನು ಮಾಡದೆ ಇರುತ್ತಾರೋ, ಅಂತಹವರು ತ್ರಿಲೋಕಗಳಲ್ಲಿಯೂ ಯಾರಿಂದಲೂ ಜಯಿಸಲ್ಪಡದಿರುವ ನಿನ್ನನ್ನು ಜಯಿಸುತ್ತಾರೆ. ಅನನ್ಯಭಕ್ತಿಯ ಮೂಲಕವಾಗಿ ನಿನ್ನನ್ನು ವಶಪಡಿಸಿ ಕೊಳ್ಳುತ್ತಾರೆ. ॥ ೩ ॥ ಭಗವಂತನೇ ! ನಿನ್ನ ಭಕ್ತಿಯು ಎಲ್ಲ ವಿಧದಿಂದ ಶ್ರೇಯಸ್ಸಿನ ಮೂಲಸ್ರೋತವಾಗಿದೆ. ಉದ್ಗಮವಾಗಿದೆ. ಯಾರು ಅದನ್ನು ಬಿಟ್ಟು ಕೇವಲ ಜ್ಞಾನಪ್ರಾಪ್ತಿಗಾಗಿ ಶ್ರಮಪಡುವರೋ ಅವರು ದುಃಖವನ್ನೇ ಭೋಗಿಸುವರು. ಅವರಿಗೆ ಕ್ಲೇಶ, ಶ್ರಮವೇ ಉಳಿದುಕೊಳ್ಳುತ್ತದೆ. ಹೊಟ್ಟನ್ನು ಕುಟ್ಟುವವನಿಗೆ ಅಕ್ಕಿಯು ಸಿಗದೆ ಕೇವಲ ಪರಿಶ್ರಮ ಮಾತ್ರ ಕೈಗೂಡುತ್ತದೆ. ಹಾಗೆಯೇ ಕೇವಲ ಜ್ಞಾನಕ್ಕಾಗಿ ಶ್ರಮಿಸುವವರಿಗೆ ಶ್ರಮವು ಮಾತ್ರ ಉಳಿದುಕೊಂಡಿರುತ್ತದೆ. ॥ ೪ ॥

ಓ ಅಚ್ಯುತನೇ ! ಓ ಅನಂತನೇ ! ಈ ಲೋಕದಲ್ಲಿ ಹಿಂದೆಯೂ ಹಲವಾರು ಯೋಗಿಗಳು ಆಗಿಹೋಗಿದ್ದಾರೆ. ಯೋಗವೇ ಮೊದಲಾದವುಗಳ ಮೂಲಕ ಅವರಿಗೆ ಪರಮಪದದ ಪ್ರಾಪ್ತಿಯಾಗದಿರಲು, ಅವರು ಮಾಡಿದ ತಮ್ಮ ವೈದಿಕ ಮತ್ತು ಲೌಕಿಕಕರ್ಮಗಳೆಲ್ಲವನ್ನು ನಿನಗೆ ಸಮರ್ಪಿಸಿದ್ದರಿಂದಲೂ, ನಿನ್ನ ಲೀಲಾ ಪ್ರಸಂಗಗಳನ್ನು ಕೇಳುವುದರಿಂದಲೂ ಅವರಿಗೆ ನಿನ್ನಲ್ಲಿ ಅಪಾರವಾದ ಭಕ್ತಿಯುಂಟಾಯಿತು. ಆ ಪರಾಭಕ್ತಿಯಿಂದಲೇ ಅವರು ನಿನ್ನ ಸ್ವರೂಪದ ಜ್ಞಾನವನ್ನು ತಿಳಿದವರಾಗಿ ಬಹಳ ಸುಲಭವಾಗಿ ನಿನ್ನ ಪರಮಪದವನ್ನು ಸೇರಿದರು. ॥ ೫ ॥ ಆದರೂ ಪರಬ್ರಹ್ಮಸ್ವರೂಪನಾದ ಪರಮೇಶ್ವರನೇ ! ನಿನ್ನ ನಿರ್ಗುಣ ಸ್ವರೂಪದ ಮಹಿಮೆಯೂ ಪರಿಶುದ್ಧವಾದ ಅಂತಃಕರಣವುಳ್ಳವರಿಗೆ ತಿಳಿಯಲು ಸಾಧ್ಯವಾಗಬಹುದು. ಆಗಲೂ ಅದು ನಿರ್ವಿಕಾರವೂ ನಿರ್ವಿಷಯವೂ ಆದ ಅಂತಃಕರಣಕ್ಕೆ ಸ್ವಯಂ ಪ್ರಕಾಶವಾಗಿ ಗೋಚರಿಸುತ್ತದೆಯೇ ಹೊರತು ಬೇರೆ ವಿಧದಿಂದ ಗೋಚರಿಸುವುದಿಲ್ಲ. ಯಾವ ವಿಧವಾದ ವಿಕಾರವೂ ಇಲ್ಲದೆ ಅದು ಕಾಣುತ್ತದೆ. ಅದಕ್ಕೆ ನಿರ್ದಿಷ್ಟವಾದ ರೂಪವಿಲ್ಲ. ಅದು ಹೀಗಿರುವುದೆಂದು ಇತರರಿಗೆ ಹೇಳಲು ಸಾಧ್ಯವಾಗುವುದಿಲ್ಲ. ಪ್ರಕಾಶಮಾನವಾದ ಆತ್ಮರೂಪದಲ್ಲಿ ಅದನ್ನು ಕಾಣಬಹುದು. ॥ ೬ ॥ ಭಗವಂತ ! ಸಮರ್ಥರಾದ ಪುರುಷರು ಹಲವಾರು ಜನ್ಮಗಳ ಪರಿಶ್ರಮದಿಂದ ಭೂಮಿಯಲ್ಲಿರುವ ಕಣಗಳನ್ನೂ, ಆಕಾಶದಲ್ಲಿರುವ ಹಿಮದ ತುಂತುರುಗಳನ್ನು

ಗುಣಾತ್ಮನಸ್ತೇಽಪಿ ಗುಣಾನ್ವಿಮಾತುಂ
ಹಿತಾವತೀರ್ಣಸ್ಯ ಕ ಈಶಿರೇಽಸ್ಯ ।
ಕಾಲೇನ ಯೈರ್ವಾ ವಿಮಿತಾಃ ಸುಕಲ್ಪೈ-
ರ್ಭೂಪಾಂಸವಃ ಖೇ ಮಿಹಿಕಾ ದ್ಯುಭಾಸಃ ॥ ೭ ॥

ತತ್ತೇಽನುಕಂಪಾಂ ಸುಸಮೀಕ್ಷಮಾಣೋ
ಭುಂಜಾನ ಏವಾತ್ಮಕೃತಂ ವಿಪಾಕಮ್ ।
ಹೃದ್ವಾಗ್ವಪುರ್ಭಿರ್ವಿದಧನ್ನಮಸ್ತೇ
ಜೀವೇತ ಯೋ ಮುಕ್ತಿಪದೇ ಸ ದಾಯಭಾಕ್ ॥ ೮ ॥

ಪಶ್ಯೇಶ ಮೇಽನಾರ್ಯಮನಂತ ಆದ್ಯೇ
ಪರಾತ್ಮನಿ ತ್ವಯ್ಯಪಿ ಮಾಯಿಮಾಯಿನಿ ।
ಮಾಯಾಂ ವಿತತ್ಯೇಕ್ಷಿತುಮಾತ್ಮವೈಭವಂ
ಹ್ಯಹಂ ಕಿಯಾನೈಚ್ಛಮಿವಾರ್ಚಿರಗ್ನೌ ॥ ೯ ॥

ಅತಃ ಕ್ಷಮಸ್ವಾಚ್ಯುತ ಮೇ ರಜೋಭುವೋ
ಹ್ಯಜಾನತಸ್ತ್ವತ್ಪೃಥಗೀಶಮಾನಿನಃ ।
ಅಜಾವಲೇಪಾಂಧತಮೋಽಂಧಚಕ್ಷುಷ
ಏಷೋಽನುಕಂಪ್ಯೋ ಮಯಿ ನಾಥವಾನಿತಿ ॥ ೧೦ ॥

ಕ್ವಾಹಂ ತಮೋಮಹದಹಂಖಚರಾಗ್ನಿವಾರ್ಭೂ-
ಸಂವೇಷ್ಟಿತಾಂಡಘಟಸಪ್ತವಿತಸ್ತಿಕಾಯಃ ।
ಕ್ವೇದೃಗ್ವಿಧಾವಿಗಣಿತಾಂಡಪರಾಣುಚರ್ಯಾ-
ವಾತಾಧ್ವರೋಮವಿವರಸ್ಯ ಚ ತೇ ಮಹಿತ್ವಮ್ ॥ ೧೧ ॥

ಝಗಝಗಿಸುವ ನಕ್ಷತ್ರ ತಾರೆಗಳನ್ನು ಎಣಿಸಿಯಾರು. ಆದರೆ ನಿನ್ನ ಸಗುಣ ಸ್ವರೂಪದ ಅನಂತಾನಂತ ಗುಣಗಳನ್ನು ಯಾರು ತಾನೇ ಎಣಿಸಬಲ್ಲರು ? ಮಹಾನುಭಾವನೇ ! ನೀನು ಪ್ರಪಂಚಕ್ಕೆ ಕಲ್ಯಾಣವನ್ನುಂಟುಮಾಡಲೆಂದೇ ಅವತರಿಸಿರುವೆ. ನಿನ್ನ ಮಹಿಮೆಯನ್ನು ತಿಳಿಯುವುದು ಅತ್ಯಂತ ಕಠಿಣವೇ ಸರಿ. ॥ ೭ ॥ ಯಾವ ಪುರುಷನು ಹೆಚ್ಚಿನ ಉತ್ಸಾಹದಿಂದ ನಿನ್ನ ಕೃಪೆಯನ್ನು ಕ್ಷಣ-ಕ್ಷಣಕ್ಕೂ ಪ್ರತೀಕ್ಷಿಸುತ್ತಿರುವನೋ, ಪ್ರಾರಬ್ಧ ಕರ್ಮಗಳಿಗೆ ಅನುಸಾರವಾಗಿ ಒದಗಿಬರುವ ಸುಖ-ದುಃಖಗಳನ್ನು ನಿರ್ವಿಕಾರವಾದ ಮನೋಭಾವದಿಂದ ಉಪಭೋಗಿಸುವನೋ, ಪ್ರೇಮಪೂರ್ಣವಾದ ಹೃದಯದಿಂದ, ಗದ್ಗದವಾದ ಧ್ವನಿಯಿಂದ, ಪುಳಕಿತವಾದ ಶರೀರದಿಂದ ತನ್ನನ್ನೇ ತಾನು ನಿನಗೆ ಅರ್ಪಿಸಿಕೊಳ್ಳುವನೋ ಅಂತಹವನು ತಂದೆಯ ಸಂಪತ್ತಿಗೆ ಮಗನು ಸಹಜವಾಗಿಯೇ ಅಧಿಕಾರಿಯಾಗುವಂತೆ ನಿನ್ನ ಪರಮಪದವನ್ನು ಹೊಂದಲು ಅಧಿಕಾರಿಯಾಗುತ್ತಾನೆ. ॥ ೮ ॥

ಪ್ರಭುವೇ! ನನ್ನ ಕುಟಿಲತೆಯನ್ನಾದರೂ ನೋಡು. ನೀನು ಅನಂತನೂ, ಆದಿ ಪುರುಷನೂ ಆದ ಪರಮಾತ್ಮನಾಗಿರುವೆ. ನನ್ನಂತಹ ದೊಡ್ಡ-ದೊಡ್ಡ ಮಾಯಾವಿಗಳೂ ಸಹ ನಿನ್ನ ಮಾಯಾ ಚಕ್ರಕ್ಕೆ ಸಿಲುಕಿರುತ್ತಾರೆ. ಆದರೂ ನನ್ನ ಮಾಯೆಯನ್ನು ನಿನ್ನ ಮೇಲೆ ಚೆಲ್ಲಿ ನಿನ್ನ ಮಹಿಮೆಯನ್ನು ನಾನು ನೋಡಬಯಸಿದೆನು. ಆದರೆ ನಿನ್ನ ಮಾಯಾಚಕ್ರಕ್ಕೆ ಸಿಕ್ಕಿಕೊಂಡ ನಾನು ಬೆಂಕಿಯ ಮುಂದೆ ಕಿಡಿಯಂತೆ ನಿನ್ನ ಮುಂದೆ ನಗಣ್ಯನಾಗಿದ್ದೇನೆ. ॥ ೯ ॥ ಓ ಭಗವಂತ! ನಾನು ರಜೋಗುಣದಿಂದ ಉತ್ಪನ್ನನಾದವನು. ನಿನ್ನ ದಿವ್ಯ ಸ್ವರೂಪವನ್ನು ಮಹಿಮೆಯನ್ನೂ ನಾನು ಚೆನ್ನಾಗಿ ತಿಳಿದವನಾಗಿಲ್ಲ. ಈ ಕಾರಣದಿಂದಲೇ ಈ ಪ್ರಪಂಚಕ್ಕೆ ನಿನ್ನಂತೆಯೇ ನಾನೂ ಒಬ್ಬ ಈಶನೆಂದೇ ಭಾವಿಸಿಕೊಂಡುಬಿಟ್ಟೆನು. 'ನಾನು ಜನ್ಮ ರಹಿತನೂ, ಜಗತ್ಕರ್ತೃವು ಆಗಿದ್ದೇನೆ' ಎಂಬ ಮಾಯಾಕೃತವಾದ ಮೋಹವೆಂಬ ದಟ್ಟವಾದ ಅಂಧಕಾರದಲ್ಲಿ ಮುಳುಗಿ ಅಂಧನಾಗಿ ಬಿಟ್ಟಿದ್ದೇನೆ. ಆದುದರಿಂದ ಈ ವಿಷಯವನ್ನು ನೀನು ಮನಗಂಡು 'ಇವನು ನನ್ನ ಅಧೀನದಲ್ಲೇ ಇದ್ದಾನೆ, ನನ್ನ ಸೇವಕನೇ ಆಗಿದ್ದಾನೆ, ಇವನ ಮೇಲೆ ಕೃಪೆ ತೋರುವುದು ಆಗತ್ಯವಾಗಿದೆ' ನೀನೇ ನನ್ನ ಸ್ವಾಮಿಯಾಗಿದ್ದೀಯೇ ಇಂದು ನಾನು ಸನಾಥನಾದೆ. ಎಂದು ಭಾವಿಸಿ ನನ್ನ ಅಪರಾಧವನ್ನು ಕ್ಷಮಿಸಿ ಬಿಡು. ॥ ೧೦ ॥ ಸ್ವಾಮಿಯೇ! ಪ್ರಕೃತಿ, ಮಹತ್ತತ್ತ್ವ, ಅಹಂಕಾರ, ಆಕಾಶ, ವಾಯು, ಅಗ್ನಿ, ಜಲ ಮತ್ತು ಪೃಥಿವಿರೂಪವಾದ ಆವರಣಗಳಿಂದ ಕೂಡಿರುವ ಈ ಬ್ರಹ್ಮಾಂಡವು ನನ್ನ ಶರೀರವಾಗಿರುವುದು. ಆದರೆ ನಿನ್ನ ರೋಮ-ರೋಮಗಳಲ್ಲಿ ಗವಾಕ್ಷಿಯಿಂದ ಬಂದಿರುವ ಸೂರ್ಯಕಿರಣದಲ್ಲಿ ಕಾಣುವ ಪರಮಾಣುಗಳಂತೆ ಅಗಣಿತವಾದ ಇಂತಹ ಬ್ರಹ್ಮಾಂಡಗಳಿವೆ. ಅಂತಹ ನಿನ್ನ ಅನಂತವಾದ ಮಹಿಮೆಯೆಲ್ಲಿ? ಕೇವಲ ಏಳು ಗೇಣುದ್ದದ ಶರೀರವನ್ನು ಧರಿಸಿರುವ ನಾನೆಲ್ಲಿ? ನಮ್ಮಿಬ್ಬರಿಗೂ ಪರ್ವತ ಪರಮಾಣುಗಳ ಅಂತರವೆಂದೇ ಹೇಳಬಹುದು. ॥ ೧೧ ॥

ಉತ್ಕ್ಷೇಪಣಂ ಗರ್ಭಗತಸ್ಯ ಪಾದಯೋಃ
ಕಿಂ ಕಲ್ಪತೇ ಮಾತುರಧೋಕ್ಷಜಾಗಸೇ ।
ಕಿಮಸ್ತಿನಾಸ್ತಿವ್ಯಪದೇಶಭೂಷಿತಂ
ತವಾಸ್ತಿ ಕುಕ್ಷೇಃ ಕಿಯದಪ್ಯನಂತಃ ॥ ೧೨ ॥

ಅಧೋಕ್ಷಜನೇ ! ಮಗುವು ತಾಯಿಯ ಹೊಟ್ಟೆಯಲ್ಲಿರುವಾಗ ಕೈ-ಕಾಲುಗಳನ್ನು ಬಡಿಯುತ್ತದೆ. ಇದರಿಂದಾಗಿ ತಾಯಿಗೆ ಅಪರಾಧ ಮಾಡಿದಂತಾಗುತ್ತದೆಯೇ ? ತಾಯಿಯು ಇದನ್ನು ಅಪರಾಧವೆಂದು ಭಾವಿಸುವಳೇ ? ಅಸ್ತಿ-ನಾಸ್ತಿ ಎಂದು ಹೇಳಲ್ಪಡುವ ಯಾವುದೇ ವಸ್ತುಗಳಾದರೂ ನಿನ್ನ ಹೊಟ್ಟೆಯನ್ನು ಬಿಟ್ಟು ಬೇರೆಡೆಯಲ್ಲಿರುತ್ತವೆಯೇ ? ಆದುದರಿಂದ ನಾನು ನಿನ್ನ ಹೊಟ್ಟೆಯಲ್ಲೇ ಇದ್ದೇನೆ. ಅದರಿಂದಾಗಿ ನಾನು ಮಾಡಿದ ಅಪರಾಧವನ್ನು ನೀನು ಕ್ಷಮಿಸಿ ಬಿಡು. ॥ ೧೨ ॥

ಜಗತ್ತ್ರಯಾಂತೋದಧಿಸಂಪ್ಲವೋದೇ
ನಾರಾಯಣಸ್ಯೋದರನಾಭಿನಾಲಾತ್ ।
ವಿನಿರ್ಗತೋऽಜಸ್ತ್ವಿತಿ ವಾಙ್ನ ವೈ ಮೃಷಾ
ಕಿಂ ತ್ವೀಶ್ವರ ತ್ವನ್ನ ವಿನಿರ್ಗತೋऽಸ್ಮಿ ॥ ೧೩ ॥

ಪ್ರಳಯಕಾಲದಲ್ಲಿ ಮೂರುಲೋಕಗಳೂ ನೀರಿನಲ್ಲಿ ಮುಳುಗಿ ಹೋಗಿದ್ದಾಗ ನಾರಾಯಣನೊಬ್ಬನೇ ಪವಡಿಸಿದ್ದನೆಂದೂ, ಅವನ ನಾಭಿಕಮಲದಿಂದ ಬ್ರಹ್ಮನು ಹುಟ್ಟಿದನೆಂದೂ ಶ್ರುತಿಗಳು ಸಾರುತ್ತವೆ. ಈ ಶ್ರುತಿ ವಾಕ್ಯವು ಖಂಡಿತವಾಗಿ ಸುಳ್ಳಲ್ಲ, ಪ್ರಭೋ! ನೀನೇ ಹೇಳು. ನಿನ್ನ ನಾಭಿಕಮಲದಿಂದ ಹುಟ್ಟಿದ ನಾನು ನಿನ್ನ ಮಗನೇ ಅಲ್ಲವೇ ? ॥ ೧೩ ॥ ಸ್ವಾಮಿಯೇ ! ನಾರಾಯಣನಾಗಿರುವ ನೀನು ಸಮಸ್ತ ಶರೀರಿಗಳಿಗೂ ಆತ್ಮಸ್ವರೂಪನಾಗಿರುವೆಯಲ್ಲವೆ ? ಅಧೀಶನೂ ಆಗಿರುವೆಯಲ್ಲವೇ ? ಸಮಸ್ತ ಲೋಕಗಳಿಗೂ ಸಾಕ್ಷಿಯಾಗಿರುವೆಯಲ್ಲವೇ ? ಸಾಕ್ಷಾತ್ ನಾರಾಯಣನು ನೀನೇ ಆಗಿರುವೆ. ನರನಿಂದ ಉತ್ಪನ್ನವಾದ ಜಲವನ್ನು ನಿನ್ನ ಆಶ್ರಯವೆಂದು ಹೇಳಲಾಗುತ್ತದೆ. ಆದರೆ ಅದೂ ಸತ್ಯವಲ್ಲ, ಇದೆಲ್ಲವೂ ನಿನ್ನ ಮಾಯೆಯೇ ಆಗಿದೆ. ॥ ೧೪ ॥

ನಾರಾಯಣಸ್ತ್ವಂ ನ ಹಿ ಸರ್ವದೇಹಿನಾ-
ಮಾತ್ಮಾಸ್ಯಧೀಶಾಖಿಲಲೋಕಸಾಕ್ಷೀ ।
ನಾರಾಯಣೋऽಂಗಂ ನರಭೂಜಲಾಯನಾ-
ತ್ತಚ್ಚಾಪಿ ಸತ್ಯಂ ನ ತವೈವ ಮಾಯಾ ॥ ೧೪ ॥

ತಚ್ಚೇಜ್ಜಲಸ್ಥಂ ತವ ಸಜ್ಜಗದ್ವಪುಃ
ಕಿಂ ಮೇ ನ ದೃಷ್ಟಂ ಭಗವಂಸ್ತದೈವ ।
ಕಿಂ ವಾ ಸುದೃಷ್ಟಂ ಹೃದಿ ಮೇ ತದೈವ
ಕಿಂ ನೋ ಸಪದ್ಯೇವ ಪುನರ್ವ್ಯದರ್ಶಿ ॥ ೧೫ ॥

ಭಗವಂತನೇ ! ನಿನ್ನ ವಿರಾಟ್ ಸ್ವರೂಪವು ಆ ಸಮಯದಲ್ಲಿ ಜಲದಲ್ಲೇ ಇದ್ದುದಾದರೆ ನಾನು ಕಮಲನಾಳದ ಮೂಲಕ ನೀರಿನ ಒಳಹೊಕ್ಕು ನೂರು ವರ್ಷಗಳವರೆಗೂ ಹುಡುಕಿದರೂ ಆ ನಿನ್ನ ಸ್ವರೂಪವನ್ನು ಏಕೆ ಕಾಣಲಿಲ್ಲ? ಪುನಃ ನಾನು ತಪಸ್ಸು ಮಾಡಿದಾಗ ನನ್ನ ವಕ್ಷಸ್ಥಳದಲ್ಲಿ ಆ ದಿವ್ಯಸ್ವರೂಪವು ಹೇಗೆ ಕಾಣಿಸಿಕೊಂಡಿತು ? ಆ ದಿವ್ಯಸ್ವರೂಪವು ಹೃದಯ ಗುಹೆಯಲ್ಲಿ ಕ್ಷಣಮಾತ್ರವೇ ಕಂಡು ಪುನಃ ಮರೆಯಾದುದೇಕೆ ? ॥ ೧೫ ॥ ಮಾಯೆಯನ್ನು ಉಪಶಮನಗೊಳಿಸುವ ಮಾಯಾಧವನೇ! ಯುಗಾಂತರದಲ್ಲಿ ನಡೆದ ವಿಷಯವು ಹಾಗಿರಲಿ. ಇದೇ ನಿನ್ನ ಈ ಅವತಾರದಲ್ಲಿಯೇ ಹೊರಗೆ ಸ್ಪಷ್ಟವಾಗಿ ಕಾಣುತ್ತಿರುವ ಈ ಜಗತ್ತನ್ನು ನಿನ್ನ ಹೊಟ್ಟೆಯಲ್ಲಿ ತೋರಿಸಿ ತಾಯಿಯಾದ ಯಶೋದೆಯನ್ನು ತಬ್ಬಿಬ್ಬುಗೊಳಿಸಿಬಿಟ್ಟೆ. ಆದುದರಿಂದ ಈ ಸಮಸ್ತ ಜಗತ್ತು ನಿನ್ನ ಮಾಯಾಕಲ್ಪಿತವೆಂದೇ ಸಿದ್ಧಾಂತವಾಗುತ್ತದೆ. ॥ ೧೬ ॥

ಅತ್ರೈವ ಮಾಯಾಧಮನಾವತಾರೇ
ಹ್ಯಸ್ಯ ಪ್ರಪಂಚಸ್ಯ ಬಹಿಃ ಸ್ಫುಟಸ್ಯ ।
ಕೃತ್ಸ್ನಸ್ಯ ಚಾಂತರ್ಜಠರೇ ಜನನ್ಯಾ
ಮಾಯಾತ್ವಮೇವ ಪ್ರಕಟೀಕೃತಂ ತೇ ॥ ೧೬ ॥

ದಯಾಳುವೆ! ನಿನ್ನಿಂದ ಉಂಟಾದ ಈ ಅಖಂಡವಿಶ್ವವು ಹೊರಗೆ ಕಾಣುತ್ತಿರುವಂತೆಯೇ ನಿನ್ನ ಸಹಿತ ನಿನ್ನ ಉದರದಲ್ಲಿಯೂ ಕಂಡಿತು. ಇದು ನಿನ್ನ ಮಾಯೆಯಲ್ಲದೆ ಮತ್ತೇನು ? ಇದು ನಿನ್ನ ಲೀಲಾವಿನೋದವೇ ಆಗಿದೆ. ॥ ೧೭ ॥

ಯಸ್ಯ ಕುಕ್ಷಾವಿದಂ ಸರ್ವಂ ಸಾತ್ಮಂ ಭಾತಿ ಯಥಾ ತಥಾ ।
ತತ್ತ್ವಯ್ಯಪೀಹ ತತ್ಸರ್ವಂ ಕಿಮಿದಂ ಮಾಯಯಾ ವಿನಾ
॥ ೧೭ ॥

ಅಂದು ನಿನ್ನ ತಾಯಿಗೆ ಉದರದಲ್ಲಿ ಬ್ರಹ್ಮಾಂಡವನ್ನು ತೋರಿಸಿದ್ದ ಮಾತಿರಲಿ ; ಇಂದು ನೀನು ತೋರಿಸಿದ ವಿಶ್ವರೂಪವಾದರೂ ಸಾಮಾನ್ಯವಾದ ಲೀಲೆಯೆ ? ಮೊದಲು ನೀನು ಒಬ್ಬನೇ ಇದ್ದೆ. ಅನಂತರ ಸಮಸ್ತ ಗೋಪಬಾಲಕರೂ, ಕರುಗಳೂ ನೀನೇ ಆಗಿಬಿಟ್ಟೆ. ಕೊಳಲು, ಕೊಂಬು, ಬೆತ್ತಗಳೂ ನಿನ್ನ ರೂಪಗಳೇ ಆದುವು. ಅನಂತರ ಗೋಪಬಾಲಕರಾದಿಯಾಗಿ ಸಮಸ್ತ ವಸ್ತುಗಳೂ

ಅದ್ಯೈವ ತ್ವದೃತೇऽಸ್ಯ ಕಿಂ ಮಮ ನ ತೇ
ಮಾಯಾತ್ವಮಾದರ್ಶಿತ-
ಮೇಕೋऽಸಿ ಪ್ರಥಮಂ ತತೋ ವ್ರಜಸುಹೃದ್
ವತ್ಸಾಃ ಸಮಸ್ತಾ ಅಪಿ ।

ತಾವಂತೋಽಸಿ ಚತುರ್ಭುಜಾಸ್ತದಖಿಲೈಃ
ಸಾಕಂ ಮಯೋಪಾಸಿತಾಃ
ತಾವಂತ್ಯೇವ ಜಗಂತ್ಯಭೂಸ್ತದಮಿತಂ
ಬ್ರಹ್ಮಾದ್ವಯಂ ಶಿಷ್ಯತೇ ॥ ೧೮ ॥

ಅಜಾನತಾಂ ತ್ವತ್ಪದವೀಮನಾತ್ಮ-
ನ್ಯಾತ್ಮಾಽಽತ್ಮನಾ ಭಾಸಿ ವಿತತ್ಯ ಮಾಯಾಮ್ ।
ಸೃಷ್ಟಾವಿವಾಹಂ ಜಗತೋ ವಿಧಾನ
ಇವ ತ್ವಮೇಷೋಽಂತ ಇವ ತ್ರಿನೇತ್ರಃ ॥ ೧೯ ॥

ಸುರೇಷ್ವೃಷಿಷ್ವೀಶ ತಥೈವ ನೃಷ್ವಪಿ
ತಿರ್ಯಕ್ಷು ಯಾದಸ್ಸ್ವಪಿ ತೇಽಜನಸ್ಯ ।
ಜನ್ಮಾಸತಾಂ ದುರ್ಮದನಿಗ್ರಹಾಯ
ಪ್ರಭೋ ವಿಧಾತಃ ಸದನುಗ್ರಹಾಯ ಚ ॥ ೨೦ ॥

ಕೋ ವೇತ್ತಿ ಭೂಮನ್ಭಗವನ್ಪರಾತ್ಮನ್
ಯೋಗೇಶ್ವರೋತೀರ್ಭವತಸ್ತ್ರಿಲೋಕ್ಯಾಮ್ ।
ಕ್ವ ವಾ ಕಥಂ ವಾ ಕತಿ ವಾ ಕದೇತಿ
ವಿಸ್ತಾರಯನ್ಕ್ರೀಡಸಿ ಯೋಗಮಾಯಾಮ್ ॥ ೨೧ ॥

ತಸ್ಮಾದಿದಂ ಜಗದಶೇಷಮಸತ್ಸ್ವರೂಪಂ
ಸ್ವಪ್ನಾಭಮಸ್ತಧಿಷಣಂ ಪುರುದುಃಖದುಃಖಮ್ ।
ತ್ವಯ್ಯೇವ ನಿತ್ಯಸುಖಬೋಧತನಾವನಂತೇ
ಮಾಯಾತ ಉದ್ಯದಪಿ ಯತ್ಸದಿವಾವಭಾತಿ ॥ ೨೨ ॥

ಏಕಸ್ತ್ವಮಾತ್ಮಾ ಪುರುಷಃ ಪುರಾಣಃ
ಸತ್ಯಃ ಸ್ವಯಂಜ್ಯೋತಿರನಂತ ಆದ್ಯಃ ।
ನಿತ್ಯೋಽಕ್ಷರೋಽಜಸ್ರಸುಖೋ ನಿರಂಜನಃ
ಪೂರ್ಣೋಽದ್ವಯೋ ಮುಕ್ತ ಉಪಾಧಿತೋಽಮೃತಃ ॥ ೨೩ ॥

ಏವಂವಿಧಂ ತ್ವಾಂ ಸಕಲಾತ್ಮನಾಮಪಿ
ಸ್ವಾತ್ಮಾನಮಾತ್ಮಾತ್ಮತಯಾ ವಿಚಕ್ಷತೇ ।
ಗುರ್ವರ್ಕಲಬ್ಧೋಪನಿಷತ್ಸುಚಕ್ಷುಷಾ
ಯೇ ತೇ ತರಂತೀವ ಭವಾನೃತಾಂಬುಧಿಮ್ ॥ ೨೪ ॥

ಚತುರ್ಭುಜರಾಗಿ ಪೀತಾಂಬರಗಳನ್ನು ಧರಿಸಿಕೊಂಡು ಸರ್ವಾಲಂಕಾರ ಭೂಷಿತರಾಗಿ ನನ್ನಿಂದಲೂ, ಇಪ್ಪತ್ತು ನಾಲ್ಕು ತತ್ತ್ವಗಳಿಂದಲೂ ಸೇವಿಸಲ್ಪಡುತ್ತಿರುವಂತೆ ಕಾಣಿಸಿಕೊಂಡೆ. ಅನಂತರ ನೀನೇ ಸಕಲ ಬ್ರಹ್ಮಾಂಡಗಳಾಗಿಯೂ ತೋರಿಕೊಂಡೆ. ಆದರೆ ಈಗ ನೀನೇ ಅಪರಿಚ್ಛಿನ್ನವೂ, ಅದ್ವಿತೀಯವೂ ಆದ ಬ್ರಹ್ಮನಾಗಿ ಉಳಿದಿರುವೆ. ॥ ೧೮ ॥ ಅಜ್ಞಾನವಶರಾದ ಜನರು ನಿನ್ನ ಸ್ವರೂಪವನ್ನು ತಿಳಿಯಲಾರರು. ಅವರಿಗೆ ನೀನು ಪ್ರಕೃತಿಸ್ಥ ಜೀವಿಯ ರೂಪದಲ್ಲಿ ಕಂಡುಬರುವೆ. ಅವರ ಮೇಲೆ ನಿನ್ನ ಮಾಯೆಯ ಜಾಲವನ್ನು ಬೀಸಿ, ಸೃಷ್ಟಿಯ ಸಮಯದಲ್ಲಿ ನನ್ನ (ಬ್ರಹ್ಮ)ರೂಪದಿಂದ, ಪಾಲಿಸುವ ಸಮಯದಲ್ಲಿ ನಿನ್ನ (ವಿಷ್ಣು) ರೂಪದಿಂದ ಮತ್ತು ಸಂಹಾರದ ಸಮಯದಲ್ಲಿ ರುದ್ರರೂಪದಿಂದ ಕಂಡುಬರುವೆ. ॥ ೧೯ ॥ ಪ್ರಭುವೇ! ನೀನು ಸಮಸ್ತ ಪ್ರಪಂಚಕ್ಕೂ ಒಡೆಯನೂ, ನಿಯಾಮಕನೂ ಆಗಿರುವೆ. ನೀನು ಜನ್ಮರಹಿತನೇ ಆದರೂ ದೇವ ಋಷಿ-ಮನುಷ್ಯಾದಿಯೋನಿಗಳಲ್ಲಿಯೂ, ಪಶು-ಪಕ್ಷಿ-ಜಲಚರಾದಿ ಯೋನಿಗಳಲ್ಲಿಯೂ ಅವತರಿಸಿರುವೆ. ಈ ನಿನ್ನ ಅವತಾರಗಳು ದುಷ್ಟರ ನಿಗ್ರಹಕ್ಕಾಗಿ ಮತ್ತು ಸತ್ಪುರುಷರ ಅನುಗ್ರಹಕ್ಕಾಗಿಯೇ ಆಗುವುದು. ॥ ೨೦ ॥ ಭಗವಂತನೇ! ನೀನು ಅನಂತನೂ, ಪರಮಾತ್ಮನೂ, ಯೋಗೇಶ್ವರನೂ ಆಗಿರುವೆ. ನೀನು ನಿನ್ನ ಯೋಗಮಾಯೆಯನ್ನು ವಿಸ್ತರಿಸಿಕೊಂಡು ಯಾವಾಗ? ಎಲ್ಲಿ? ಹೇಗೆ? ಎಷ್ಟು ಕಾಲದವರೆಗೆ ಕ್ರೀಡೆಯಾಡುವೆಯೆಂಬ ವಿಷಯವು ಈ ಮೂರು ಲೋಕಗಳಲ್ಲಿ ಯಾರಿಗೆ ತಾನೇ ತಿಳಿದಿರುತ್ತದೆ? ನಿನ್ನ ಯೋಗಮಾಯೆಯು ನಿನ್ನಂತೆಯೇ ಅಚಿಂತ್ಯವೂ, ಅಪ್ರಮೇಯವೂ ಆಗಿದೆ. ॥ ೨೧ ॥ ಆದುದರಿಂದ ಈ ಸಮಸ್ತ ಜಗತ್ತು ಅಸತ್ಸ್ವರೂಪವಾದುದು. ಇದು ಸ್ವಪ್ನಸದೃಶವಾಗಿಯೂ, ಚೈತನ್ಯರಹಿತವಾಗಿಯೂ, ದುಃಖದ ಮೇಲೆ ದುಃಖ ಒದಗಿಬರುವ ಸ್ಥಾನವು ಆಗಿದೆ. ಆದರೂ ಸಚ್ಚಿದಾನಂದಾತ್ಮಕನಾದ ನಿನ್ನಲ್ಲಿ ಜಗತ್ತು ಎಂಬುದು ಮಾಯೆಯಿಂದ ಜನಿಸಿ ಸಚ್ಚಿದಾನಂದಾತ್ಮಕವಾದ ನಿನ್ನ ಅಧಿಷ್ಠಾನದ ಬಲದಿಂದ ಸತ್ಯವಾಗಿರುವಂತೆಯೂ, ಸುಖಸ್ವರೂಪವಾಗಿರುವಂತೆಯೂ, ಚೇತನಸ್ವರೂಪವಾಗಿರುವಂತೆಯೂ ಭಾಸವಾಗುತ್ತದೆ. ॥ ೨೨ ॥ ಪ್ರಭುವೇ! ನೀನು ಏಕಮಾತ್ರ ಸತ್ಯನು. ಹೇಗೆಂದರೆ ನೀನು ಸಮಸ್ತರಲ್ಲಿಯೂ ಆತ್ಮಸ್ವರೂಪನಾಗಿರುವೆ. ನೀನು ಪುರಾಣ ಪುರುಷನಾದುದರಿಂದ ಜನ್ಮಾದಿವಿಕಾರಗಳಿಂದ ರಹಿತನಾಗಿರುವೆ. ಸ್ವಯಂಜ್ಯೋತಿಯೂ, ಅನಂತನೂ, ಆದಿಪುರುಷನೂ ನೀನೇ ಆಗಿರುವೆ. ನಿತ್ಯನೂ, ಕ್ಷಯರಹಿತನೂ, ಅಖಂಡಾನಂದ ಸ್ವರೂಪನೂ ನೀನೇ ಆಗಿರುವೆ. ನಿರಂಜನನೂ, ಪೂರ್ಣನೂ, ಅದ್ವಿತೀಯನೂ ನೀನೇ ಆಗಿರುವೆ. ಸಮಸ್ತವಾದ ಉಪಾಧಿಗಳಿಂದಲೂ ಮುಕ್ತನಾಗಿರುವುದರಿಂದ ಅಮೃತಸ್ವರೂಪನೂ ನೀನೇ ಆಗಿರುವೆ. ॥ ೨೩ ॥ ನೀನು ಎಲ್ಲ ಜೀವಿಗಳಲ್ಲಿಯೂ, ಆತ್ಮಸ್ವರೂಪವಾಗಿ ಬೆಳಗುವೆ. ಗುರುರೂಪನಾದ ಸೂರ್ಯನಿಂದ ತತ್ತ್ವಜ್ಞಾನ ರೂಪವಾದ ದಿವ್ಯದೃಷ್ಟಿಯನ್ನು ಹೊಂದಿ ನಿನ್ನನ್ನು ತನ್ನಲ್ಲಿಯೇ ಸಾಕ್ಷಾತ್ಕರಿಸಿಕೊಂಡವರು ಈ ಮಿಥ್ಯಾಸಂಸಾರ ಸಾಗರವನ್ನು ದಾಟಿಹೋಗುತ್ತಾರೆ. ॥ ೨೪ ॥